ರ್ಯನಗುತಂ| ಘನತರಗರ್ಭಮನೀಕ್ಷಿಸಿ| ವಿನಯದಿಪರಿಹಾಸಚ
ರ್ಚೆಯಿಂದಿಂತೆಂದಂ||

ಸ್ತನಮುಂ ಕಟಿಯುಂ ಕವಿಗಳ್ |ಘನಮಾಗಿರೆಪೊಗಳ್ದು ತನ್ನನಾಗಳ್ಪಡ
ವೆಂ | ದೆನುತಿಪ್ಪರೆಂದು ನಡುಘನ ವೆನಿಸಿತ್ತೆನೆಕಾಂತೆ ಪೂರ್ಣಗರ್ಭ
ವಿಡೆಸೆಗುಂ|
೧೫೬|

ಮಿಗೆಮಂದತ್ವದಿಕಳಹಂ| ನಗಮನೆಬೆಳ್ಪಿಂಸುಧಾಂಶುಬಿಂಬಾನ
ನೆಬೆ| ಳ್ಪುಗೆಯಿಂಘನಕುಚೆಯೆಂಬೀ| ಪೊಗಳ್ತೆನಿನಗಾಯ್ತುರಮಣಿ
ಗರ್ಭೋನ್ನತಿಯೊಳ್||

ವ|| ಅಂತುಸರಸದಿಂ ನಗಿಸುತ್ತಿರ್ದು ದಿನಂಗಳಂಕಳೆವುತ್ತಿರಲ್ಕೆ ಕೆ
ಲವುದಿವಸಂಗಳಿಂ ಮೇಲೆನವಮಾಸಂನೆರೆಯೆಗರ್ಭದೋಹಳಂ ನೆಗಳ
ಲ್ಕೆಪ್ರಸವಸಮಯಪುಣ್ಯದಿನದೊಳ್ ಜ್ಯೋತಿಷಗಣಂಸುಮುಹೂರ್ತ
ಮಂಪೇಳುತ್ತಿರ್ಪುದುಂ||

ಮ|| ಬಿಡದತ್ಯೂರ್ಜಿತ ಸೌಖ್ಯದಿಂದಮನಸೂಯಾದೇವಿತತ್ಸೋ
ಮನಂ ಪಡೆವಂತೀಶ್ವರ ನಿತ್ತಸದ್ವರದಿ ಮಾಂಗಲ್ಯ ಪ್ರದೋಷಂಪೊದ
ಳ್ದಿದಿದಿರ್ದಾಸ್ಯದೊಳುತ್ಸವಂ ನೆಗಳಲಂತಾಕಾಂತೆಸಂತೋಷದಿಂ| ಪ
ಡೆವಳ್ಲೋಕಮಳಗಾತ್ರನಂ ನಿಖಿಳಧಾತ್ರೀಮಿತ್ರನಂ ಪುತ್ರನಂ|೧೫೮||

ವ|| ಅಂತಾಕುಮಾರಜನ್ಮೋತ್ಸವದಸಂಭ್ರಮದೊಳ್ವಿಚರತ್ಕಾಮಿ
ನೀಸಂಪೋಹಪಾದರತ್ನ ರಂಜಿತಮಂಜೀರ ಕಾ ಪುಂಜರಂಜಿತಮುಂ
ಅನವರತರಾಜಾ ಜ್ಞಾಸಮುದಂಚಿತೋದಂಚಿತ ಕಂಚುಕಿಸಂಚಯದು
ಸ್ಸ್ಫುಟನಿರಾವಮುಂ ಪರಿಹಾಸವಚನಕೇಳೀ ವಿಳಾಸಾದಿತಕುಬ್ಜವಾಮ
ನಕಬಧಿರಕಿರಾತಸಂಘಾತ ಸಂಜಾತಕಳಕಳಧ್ವನಿಯುಮುಂಪರಿಜನಪು
ರಜನ ಬಂಧುಜನವಿಪ್ರಜನ ವಂದಿ ಜನ ಪ್ರಮೋದಮುಂ ಗಳಾಶೀರ್ವಾ
ದಪ್ರಣಾದಮುಂ ನಾನಾಭರತಶಾಸ್ತ್ರ ಪ್ರವೀಣಚತುರವಂ ಶಿಕಾರ
ವಾಗ್ಗೇಯಕಾರ ಗಾಯಕಜನಾನಂದ ಗಾನಧ್ವಾನಮುಂಮುದಿತಸ
ಮಮೀರ ಶಬ್ದ ಪ್ರಕಟಿತನಟನರ್ತಕಪ್ರೇರಣ ವೈತಾಳಿಕ ಪಾದಪ್ರಹರ
ಣೋಜ್ಝಿತಗರ್ಘರನಿ ಘೋಷಮುಂ ಬಾಳಮರಾಳಮಯೂರಕೇಳೀ
ಕೀರಪಾರಾವತ ಪಿಕಶಾರಿಕಾಜಾಳಮು ಖಸೂಚಿತಮುಂ ಮಾಂಗಲ್ಯ
ಮುರಜ ಡಿಂಡಿಮ [illegible] ಭೇರಿ [illegible] ಮಾನೇ

ಕವಾದ್ಯನಿನದಮುಂ ಪೆರ್ಚೆದಿಗ್ಭಾಗಮುಂ ತೆಕ್ಕನೆತೀವಿಪೂರ್ಣಾರ್ಣವಮು
ಘೂರ್ಣಿಪಂತೆಅತಿರಭ ಸಂನೆಗಳಲ ಖಿಳರಾಜಲೋಕದ ಂಡಸ್ತಾಘನ
ಮಂತಬಾಲವೃದ್ಧ ಪ್ರಭೃತಿಗಳ್ಪ ರಮಾನಂದನಿರ್ಝರದಿಂತನತನಗನ
ದಾಡುತ್ತಿರ ಲಿತ್ತಲ್ ವಿಕ್ರಮ ಚೋಳರಾಜೇಂದ್ರಂನಿಜಾಸ್ಥಾನಮಂಟ
ಪದಿಂದೆರ್ದು ಸಚಿವಾನ್ವಿತಂ ಪುತ್ರಾವಲೋಕನೌತ್ಸುಕ್ಯಂಮಿಕ್ಕುಪ
ರಿಮಿತಪರಿಜನಂ ಬೆರಸೋಳಗಂಪೊಕ್ಕುನೋಳ್ಪನ್ನೆಗಮಲ್ಲಿ

ಚಂ॥ ಸುಲಲಿತನೂಪುರಂಗಳಝುಂಝುಣನಿಸ್ವನದೇಳ್ಗೆ ಕಂಕಣಂಗ
ಳ ಘನಮಂಜುಳಾರವದ ಪೆರ್ಚುಗೆಕಾಂಚಿಯನೀಳ್ದನುಚ್ಚರಂ|ಗಳದನಿ
ಯುಣ್ಮಿತದ್ಧರಣಿಪಾಲಯಥಾಚರದೊಳ್ಕಡಂಗಿಮಂ | ಗಳಮೆನಿಸಾಡಿನ
ರ್ತಿಸುತ್ತಮಿರ್ದುದ.ವ ರವಿಳಾಸಿನೀಜನಂ॥ ॥೧೫॥

ಹರಿಣೀವೃತ್ತಂ॥ ವಿಭವದೊಲವಿಂಕಾಂತಾಸಮೂಹ ಮಾಡುತಿರಲ್
ತಚ್ಛುಬದಸೊಗಸಂ ಕೈಕೊಂಡಾನಂದಬಾಷ್ಪಗಳುಣ್ಮಲಂ |ದಭವಕ್ಕೆ
ಪೆಯಿಂಪುಟ್ಟಿರ್ದಾಪುತ್ರನಂ ಕಡುವೇಗದಿಂ !ರಭಸವೆಸೆಯಲ್ ನೋಪ
ಲ್ಕೆಂದೆಯ್ದಿದಂಧರಣೀಶ್ವರಂ॥ ॥೧೬॥

ಚಂ॥ ರವಿಶಶಿಶೋಭಿತಂಪ್ರಕಟಚೇಟಸಮಾನಿತಮುದ್ಭಟಾವೃತಂ|ವಿ
ವಿಧಮಯೂರವಾಹನ ಸಮುಲ್ಲಸಿತಂವರಯಂತ್ರ ಸಂಯುತಂ| ನವಪ
ಕಾಂತಭಿತ್ತಿಹಲಮಾಸಲನಿಂಬಚಮೂರುಚಪರ್ಣಸ|ಪ್ತವಿಯುತಮಪ್ಪ
ಬಾಗಿಲತಿರಂಜಿಸುತೊಪ್ಪಿ ತುಸೂತಿಕಾಗೃಹಂ॥ ॥೧೭॥

ವ| ಅಂತುಯಂತ್ರತಂತ್ರಂಗಳಿಂಸುರಕ್ಷಿತವಾಗಿರ್ಪ ಸೂತಿಕಾಗೃಹ
ಮಂ ಪರಿಭಾವಿಸುತ್ತಂ ಸಿವಾರಿ ತಾಶೇಷಪರಿಜನನಾಗಿ ರಾಜೇಂದ್ರಂಪ
ರಮಹರುಷದಿಂ ದೊಳಪೊಕ್ಕುನೋಳ್ಪಲ್ಲಿ ಚಂದನ ಗೋರೋಚನಕುಂ
ಕುಮಪಂಕ ಪಿಂಜರಿತಭಿತ್ತಿಭಾಗಂಗಳಿಂ ಅಗರುಗುಗ್ಗುಳದಂದಕೂ
ನಿರ್ವೋಕವಿಷಾಣ ರಜಂಗಳಿಂ ಪರ್ಬುಗೆವೆತ್ತ ಸರ್ವರಕ್ಷಾಧೂಪಧೂ
ಮಂ ಗಳಿಂ| ಚಂಚಚ್ಚಾಮೀಕರದಂ ಡಾಗ್ರರಂಜಿತ ಮೆನಿಸಿತೊಳತೊ
ಳಗಿಬೆಳಗುವ ರಾಣದೀಪಿಕೆಗಳಿಂ| ವಿಪ್ರಮಂತ್ರ ಘೋಷಣಂಗಳಿಂ| ತ
ವಶಾಂತ್ಯುದಕಂಗಳಿಂ ಮಂಗಳಲಲಿತೆಯನಂಗಂಬಡೆದು ಪಾಡುವಲಿ
ತಾಂಗಿಯರಸಂಪಣಿಗಳಿಂ, ದೆಸೆಪಸೂತಿಕಾಸದ್ಮದೊಳಪ್ಪಂಡುಮೂರ್ತಿ
ಯಪ್ಪ ಕಳಾವತೀದೇವಿಯುರುತ್ತುಂಗದೊಳ್ ಚಂದ್ರನಂತೆ ಶಿಶುಬೆಳಗೆ

ಕಂ|| ವಿದಿತಶಶಿಬಿಂಬಮಂಕುಜ | ನೊದವಿದಮ್ಮೆಗೆಂಪನಾತ್ಮರುಚಿ ಯಿಂಗೆಲ್ವಾ | ಸದಮಳಕಾಮಿನಿಯುತ್ಸಂ ಗದಮೇಲಿಸೆದಿರ್ದನರುಣಗಾತ್ರಂಪುತ್ರಂ|| ||೧೬೩||

ಅಂತಾಗಳ್ ಶುಭಯುತಭೂ | ಕಾಂತಂಸಂಶಯಮನೆಯ್ದಿ ಪತ್ತಿರಬಂಡತ್ಯಂತೌತ್ಸುಕ್ಯಂಮಿಗಲಾ| ಮಂತಿ ಸಮೇತಾತ್ಮಸುತನನೊಲ್ದೀಕ್ಷಿಸಿದಂ

ನೋಡಿಸುಖಜಳಧಿಯೊಳಗೋ | ಲಾಡಿಮನಂಪೆಚ್ಚಿತೆಗೆದುಬಿಗಿಯುಪ್ಪಿಪಮು|| ದ್ಗಾಡುವಮಿಗೆಪಾಡುವವುಂ | ಡಾಡುವಬಗೆಯಾಯ್ತುವಿಭುಗೆ ಸುತನುತ್ಸವದೊಳ್|| ೧೬೪

ಸುತಜಾತಕರ್ಮಮಂಬುಧ | ತತಿವೇಳ್ದಲ್ಮಾಡಿನೃಪತಿಶುಭರಭಸದೊಳಂ| ದತಿಮುದದಿನರ್ಥಿಗಳ್ಗ| ಣಿತವಸ್ತುವನೀಯಲೆಂದು ತರಿಸಿದನಾಗಳ್|| ||೧೬೫||

ಶಾರ್ದೂಲಂ|| ಭೇರೀಶಂಖಮೃದಂಗತಾಳಕಹಳಾನಿಸ್ಸಾಳಸಂದೋಹಗಂ| ಭೀರಧ್ವಾನ ಮಜಾಂಡ ಮಂಪುದಿಯೆ ಸನ್ಮಾಂಗಲ್ಯ ಮಂಸಾರೆಮಂ | ದಾರಂಕ್ಯೆಗೊಳಗಾದ ಪೊಲ್ ಬುಧಜನಕ್ಕಾನಂದದಿಂದಾನಮಂ ಸೌರಂಭಂಮಿಗೆಮಾಡಿದಂಧರಣಿಪಂ ಪುತ್ರೋದಯೋತ್ಸಾಹದೊಳ್ ||

ವ|| ಅಂತುನಾನಾದಾನಂಗಳಿಂ ದರ್ಥಿವ್ರಾತಮಂತಣಿಪಿಮತ್ತಂ ಶುಭದಿನದೊಳ್ ಕುಮಾರಂಗೆ ನಾಮಕರಣಂಗೆಯ್ಯೆ ಲ್ಕೆಸರ್ವಸಂಭ್ರಮದಿನಸುಗೆಯ್ವುತ್ತಿರಲ್ ತತ್ಕಾಂತೆನಿಜಕುಮಾರಂಗೆ ಮಂಗಳಮಜ್ಜನಮಂ ಮಾಡಿಸಿಚೇನಾಂಬರ ಮಮುಸುಂಕಿ ಪದಪಿನಿಂತುಂಮಜ್ಜನಕ್ಕಿಜ್ಜಗಿಸಿದಾಗಳ್||

ಕಂ| ವರಸತಿಯುಕ್ಕೆರ್ಗುಡಲಾ | ದರದಿಂಪರಿಯಂಕತಲ್ಪದೊಳ್ವರಪೀತಾಂ| ಬರದಿಮುಸುಕೆಸೆಯುಲಂದಂ| ಬುರುಹಾನನೆಮಜ್ಜನಕ್ಕೆಒಪ್ಪವಸರದೊಳ್|| ||೧೬೬||

ಚಂ| ಮಿಸುಪಲರ್ಗಂಗಳಂಜನದಬೊಟ್ಟುರೆಪತ್ತಿದಕೆಂಪಿನೋಷ್ಠಮಿಂಪೊಸವಿನ ಮುರ್ಚಿಪಾಲಿ ಡಿದುತುಂಬಿದಪೆರ್ಮೊಲೆದಾಳ್ದಿರಲ್ಕೆನುಂ ಪೆಸೆವಸಿಯುಳ್ಳಿಗ ಳ್ವಸಿಯು ದೇಹದೊಳಂಕಿತ ಮಾದಕುಂಕುಮಂ ಪೊಸರಸಭಾವಮಂ ಕುಡೆಪಿಳಾಸದಿಬಾಣತಿಬಂದಳರ್ಥಿಯಿಂ| ||೧೬೭||

ವ|| ಅಂತುಮಜ್ಜನ ಶಾಲೆಗೆ ಬಂದು ಕಳಶಮಂ ಪೊಳಲೊಳಪಾಳಿ

ಯುಸುರ್ಗಗಂಧತೈಲಮಂ| ಪೂಸಿಮಂಗಳವೆಸೆಯೆಲ್ಪೊನ್ನ ಘಟ್ಟವಣಿಯೊ
ಳ್ಕುಳ್ಳಿರಿಸಿ

ಚಂ|| ಕುರುಳ್ಗಳಸಿಕ್ಕೊಡಂತೆಗೆನೆಬಾಗ್ರದಿಸಾರ್ಚೆ ಕುಚಂಮುಸುಂ
ಕುವಂ| ತಿರೆವಸನಾಂಚಲಂತೆಗೆದುಮಂಗಳ ಸೂತ್ರಿಕೆಯೊಳ್ತೊಡರ್ಚೆ
ಬಂ| ಧುರಕಟಿಸೂತ್ರಕಾಂತಿಪೆರ ತೊಂದೆಡೆಯಾಗಿರೆ ಕರ್ಣಪತ್ರಮಂ|
ಕರಯುಗದಂದವೊತ್ತಿಸಲಿಮಜ್ಜನಪೀ ಠದೊಳಾಗಳೊಪ್ಪಿದಳ್

ಕಂ|| ವರವನದೇವತೆಯುಸರ್ಗ| ದರದಿಂನವಚೂ ತಲತೆಗೆನೀರ್ವೊ
ಯ್ವವೊ|ಲಾತರುಣಿ ಗೆ ಗಂಧೋದಕವಮಂ | ಸುರಿದರ್ಸಿಕ್ತಾಂತಕಳ
ತ್ರತಿಯಿಂಸಖಿಯರ್| ೧೭೦

ವ|| ಅಂತುಮಜ್ಜನಮಾದತದನಂತರದೊಳು||

ಚಂ|| ಕೆಳದಿಯರೊಲ್ದುನೀಡಿದಸುವಸ್ತ್ರಮನುಟ್ಟುವಿಭೂಷಣಂಗಳಂ|
ತಳೆದುಕುಚಂಗಳಿರ್ದೆ ಸೆಗೆವೋಲು ದುತಾಂವೊನೆದೋರೆಘರ್ಘರಾ|
ವಳಿಪಿರಿದೊಪ್ಪಿ ತಿರ್ಪಪೊಸಪಾದುಕೆಗಳ್ಗಲಕೆಂದೆನಲ್ಕೆ ಕೋ|ಮಳೆಕಿಶ
ವಿರ್ಪಭದ್ರನಿಳಯಕ್ಕಿರ ದೆಯ್ದಿದಳೊಂದುಲೀಲೆಯಿಂ|| ||೧೭೧

ವ|| ಪುತ್ತುನಿತ್ತಲ್ ವಿಕ್ರಮಚೋಳರಾಜೇಂದ್ರಂ ಸರ್ವಸಂಭ್ರ
ಮದಿಂ ನಿರ್ವರ್ತಿತನವಗ್ರಹಹೋಮನಿಯಮನಾಗಿಸುವರ್ಣಕೋಟಿ
ಗಳಂವಿಪ್ರಜನರ್ಗಿತ್ತು ತಣಿಪಿಜೋತಿಷವೃಂದಂ ಬೆರಸುಸುಮುಹೂ
ರ್ತದೊಳ್ವರಪುತ್ರನಸವಿಪಕ್ಕೆಬಂದನಂತರಂ||

ಕಂ|| ಗಿರಿಜಾವರನೊಲ್ದಿತ್ತಾ| ವರದಿಂದುದ್ಭವಿಸಿಸಿಧಾತ್ಮತನಯಂ
ರ್ವಿ| ಶ್ವರನತಿರಭಸಂವಿ ಗಲಾ| ದರದಿಪಗಲ್ತೋಳನೆಂಬನಾಮವನಿತ್ತು
ಧಾರಿಣಿಪೊಗಳುತ್ತಿರೆಗಂ| ಭೀರಪಗಲ್ತೋಳನಿವಗೆ ಗ್ರೂಕದಮು
ಕೊ|| ಟ್ಟೋರಂತೆಮೆರಧಸದ್ಗುಣವಾರಿಧಿಸೋಮೇಶ ನೊಲ್ದುಪಾಲಿ
ಕೆನಮ್ಮಂ||

ವ|| ಅನಮಯದೊಳು||

ಉ|| ಭೂವರನಾತ್ಮವಲ್ಲಭೆಕುಮಾರಕನಂ ಪೊಸಪೊನ್ನತೊಟ್ಟಿಲೊ
ಳ್| ತೀವಿದುಕೂಲವಾಂ ಪೊದಿಸಿಸಂತಸದಿಂ ಪರಸುತ್ತಿರಲ್ಕೆತ| ಪ್ಪ
ದಿ ಕಂಕಣಂಗಳುಲಿಯು ಲ್ಕರೈದುಹಸ್ತದಿತೂಗಿ ಮಂಗಳಾ ರಾವದಿಪಾ
ದರ್ನಲಿವು ಜೋ... ೧೭೩

ವ॥ ಅಂತಾಗಳ್ಕುಮಾರನಂ ತದ್ದಂಪತಿಗಳ್ ದಿನದಿನದೊಳ್ಪೆರ್ಚಿನ ಲಿವುತ್ತಮಿರೆಯಿರೆ॥

ಮ। ಸ॥ ಬೆಳೆವಂಮುಂದಾರಭೂಜಾತದ ಕಿರಸಸಿಪ್ಪೊಂಭಿಂಡ್ಡದಿಂ ಕೀರ್ತಿಯಿಂದಂ। ಬೆಳೆದಂಲೋಕಕ್ಕೆಸಂಪೇಳ್ಗೆಯಹಿಮಕರನೆಂಬಿಂದ್ವದ್ಧಿಂ ಕಾಂತಿಯಿಂದಂ ಬೆಳೆದಂಬಾಳಾರ್ಕನೆಂಬಂದದಿ ನತಿವಿಕಳತ್ತೇಜ್ಜದಿಂ ತತ್ಕುಮಾರಂ। ಬೆಳೆದಂಸಂಸಾರಸಾರಂಪರ ಬುಧಜನಕಾಸಾರಕೇಳೀ ಮರಾಳಂ। ॥೧೪೩॥

ಕಂ॥ ಜನನಿಪೊಲೆಯೂಡಿನಲಿವಳ್। ಜನಕಂಪೇರುರದೊಳಪ್ಪಿಬ್ಬಿತ ದೊಲ್ದಬಳಾ। ಜನವೆತ್ತಿಕೊಂಡುನರ್ತಿಸಪು। ದೆನಲಾಚೋಳಂಶಿಶುತ್ವ ದೊಳ್ಸೊಗಯಿಸಿದಂ॥ |೧೪೪|

ಅರಳೆಲೆಮಾಗಾಯ್ತಾನೆಯಲ್। ಪರಘಂಟಿಕೆಪೊನ್ನಗೆಜ್ಜೆಯಂದ್ಪಾಗೆ ಗಳ್ಚಿತ್ತರದಿರ್ಘುಣಿಘುಣಿಸೆಕುವರಂ। ಪಿರಿದಂಚೆಯಮರಿಗಳೊಡನೆನಲಿ ವುತ್ತಿರ್ದಂ॥ |೧೪೫||

ಮಿಗೆಸುರೆಗರೆವತೊದಲ್ನುಡಿ। ಸೊಗಯಿಪದಟ್ಟದಿಯಹಾರ್ಣಸ್ಮಿತವದನಂ॥ ಬಗೆಗೊಂಡೊಪ್ಪಿರೆ ಶಿಶುಲೀಲೆಗೆ ನಲಿವರ್ತಂದೆ ತಾಯ್ಗಳುತ್ಸ್ಪಾಹ ದಿಂದಂ॥ ||೧೪೬||

ಪದೆದೊಳ್ನಡೆಗಲ್ಪಿದೊಪ್ಪಿದುವುತೊವಲ್ಗಿಂಗಿನುಡಿಗಳತಿಚಪಳತೆವೆ। ತೊದಪಿದವುದ್ದೇಹರುಚಿಪೆ, ರ್ಚಿದುಧಾಕುವರಂಗೆಸೈಶವಾತಿಕ್ರಮದೊಳ್॥ ೧೪೭॥

ಬಳೆವನಿಜಸೂನುಪಂಕಂ। ಡಿಳೆಯರಸಂಕರಮಹರುಷದಿಂದಾಗಳ್ಮಂಗಳವೆನಲುಪನಯನವುನ ಗ್ಗಕವಿಗಲ್ಮಾಡಿಬುಧರ್ಗೆ ಬೇಡಿತ್ತನಿತ್ತಂ ತದನಂತರಂ

ಚಂ॥ ನಿರುಪಮಸ್ಯೈವತತ್ತ್ವವಿದನಪ್ಪ ಮಹಾಗುರುಚೋಳಧಾರಿಣೀಶ್ವರನಪತನೂಭವಂಗೆ ನಿಜಪಾವನವಾದವಿಭೂತಿ ಗೊಂಡು ಸಾಧರದೊಳೆತಾಳ್ದರಾಜ್ಯದವಿಭೂತಿಗನೆಟ್ಟನೆರಕ್ಕೆಗಟ್ಟುವಂತಿರೆಫಣೆಯಲ್ಲಿಸೂಸಿ ವಪೂಜಕನಂಕ್ರಪೆಯಿಂದೆಮಾಡಿದಂ। ||೧೪೮||

ವ॥ ಅಲ್ಲಿಂಬಳಿಯಿಂವಿದ್ಯಾಭ್ಯಾಸಮುಂಮಾಡಿಸಲ್ಕೆಂದುನಾನಾಶಾಸ್ತ್ರವಿಶಾರದನಪ್ಪಾಚಾರ್ಯನಲ್ಲಿ ಕುಪನಿನದೊಳ್ ಮಂಗಳ ಪ್ರಸಾಧನಮಪ್ಪ

ಶೃಂಗಾರಂಗಳಂ ಮಾಡಿಸಿಸಕಳಪರಿಜನಂ ಬೆರಸುತೂರ್ಯತ್ರಯದ ಸಂಭ್ರಮದಿಂವಿಕ್ರಮಚೋಳರಾಜೇಂದ್ರಂನಿಜನಂದನನವಿದ್ಯಾಭ್ಯಾಸಕ್ಕೆಸುವರ್ಣಕೋಟಿಯಂ ಕೊಟ್ಟನೆರವಿಸಲ್ಕಲ್ಲಲ್ಲಿ ಚಪಳತೆವೆತ್ತಚತುರ ವಿದ್ಯಾಭ್ಯಾಸಮಂ ಮಾಡುತ್ತಿರೆ

ಕಂ॥ ಸುರರಾಜನವರಸುತನಂ । ತಿರೆಘನತರಶಸ್ತ್ರಶಾಸ್ತ್ರವಿದ್ಯೆಗಳಂ
ಭೂ। ವರನತನೂಭವನಾಂತಾ । ದರದಿಮಹಾಪ್ರಾಜ್ಞ ನೆನಿಸುತೆಸಿ
ವ್ರತ್ತಿರ್ದಂ॥ ೧೮೩

ವ॥ ಅಂತಾಕುಮಾರನಭ್ಯಸಿಸಿದ ವಿದ್ಯೆಗಳಂನೋಡಲ್ಕೆಂದುವಿಕ್ರಮಚೋಳರಾಜೇಂದ್ರನವನಂಬರಿಸಿಪರಮೋತ್ಸಾಹದಿನುತ್ಸಂಗದೊಳ್ಕುಳ್ಳಿರಿಸಿಕೊಂಡಾಗಳ್।

ಕಂ। ವಿದ್ಯಾವಳಿತತ್ಸುನುಗೆ। ಹೃದ್ಯಂಕಡುವೇಗದಿಂದಮಾದುವೆನು
ತ್ರಂ। ಚೋದ್ಯಮನೆಯ್ದಿಮಹೀಪಾ । ಲಾದ್ಯಂಬಿಗಿಯಪ್ಪಿಮುದಮ
ನೋಲವಿಂತಾಳ್ದಂ। ೧೮೪

ವ। ಅಂತುಸುಮುಖಮನಪ್ಪಕೆಯ್ದುದಿನದಿನದೊಳ್ತತ್ಕುಮಾರನಂ ಹಾರೈಸುತ್ತಮಿರೆಮಿರೆ।

ಚಂ। ಕಿವಿಮೃದುವಾಕ್ಯಮಂರಸನೆ ಸದ್ರಸಮಂವರನಾಸಿಕಂಸುಗಂಧಮಮುಮಲರ್ಗಳ ಗನೆಯರೊಪ್ಪುವರೂಪುಗಳಂಶರೀರದ। ಪ್ಪುವಘನಲೀಲೆಯಂಬಯಸಲಿಂದ ಖಿಳೇಂದ್ರಿಯ ಮೊಲ್ದುತನ್ನೊಳು ಧ್ವನಿಸುತಿರಲ್ಕುಮಾರಕ ನೊಳಾದುದುನೂತನಯವ್ವನೋದಯಂ॥

ಅದಲ್ಲದೆಯುಂ॥

ಮ॥ ತೊಳಪೆಳಗರ್ಪಿನಚೋಲ್ಲೆಯಂಪೆರೆನೊಸಲ್ಶ್ರೀಕರ್ಣಮಬ್ಜಾಂಬಕಂ। ವಿಳಸಚ್ಚಂಪಕನಾಸಿಕಂ ಪವಿರದಂಬಿಂಬಾಧರಂ ನುಣ್ಗೊರಲ್ನಳಿತೋಳ್ಪೀವರ ಮಲ್ಪಮಧ್ಯಮುರುನ್ನೈತಂಬ ಸ್ಥಳಂಬಾರುಕೋಮಳಪಾದಂಮೆರೆಯಲ್ಕು ಮಾರನೆಸೆದಂಸೌಂದರ್ಯಪ್ರೌಢಾರ್ಯದಿಂ।

ಮ। ಸ್ರ। ಘನರೂಪಿಂಸೌಮ್ಯನಾಸೌಮ್ಯನಿನಧಿಕತರಂರಾಜನಾಸೌಮ್ಯನಿಂರಾ। ಜನಿನಾದಂ ಕಾಮನುದ್ಯದ್ವಿಳಸಿ ತಮೆನಿಪಾಸೌಮ್ಯನಿಂರಾಜನಿಂಕಾ । ಮನಿನಂಭೋಜಾಕ್ಷನತ್ಯೂರ್ಜಿತ ನೆನಿಸುವನಾಸೌಮ್ಯನಿಂರಾಜನಿಂಕಾ। [illegible] ಗಿರಿಸಲೆಸದ

ನಾಡೆಯುಂರಾಜಪುತ್ರಂ॥ ।೧೮೬॥

ಅರಿನೃಪತನಯುಗಿ=ಕ್ಕಿದ। ಬಿರುದಿನಹಾಹೆಗಳಪೊಡರುಝಣಝಣಿ ಸಲ್ತಿಂ।ವರವಸ್ತ್ರಭೂಷತತಿಯಿಂಪಿ।ರಿದೆಸೆದಂರಾಜಪುತ್ರನತಿಮುದದಿಂದಂ। ।೧೮೭।

ವ॥ ಅಂತಾರೂಢಯೌವನದೊಳ್ತತ್ಕುಮಾರಂಸುಖದಿನಿರುತ್ತಿರಲೊಂದು ದಿವಸಂಪ್ರಭಾತಸಮಯದೊಳು॥

ಕಂ॥ ತೊಳಗುವವಳಕಿನಕುಟ್ಟಿಮ। ತಳದಿಂಶಶಿಕಾಂತಸಾಲಭಂಜಿಕಗಳನು। ಜ್ವಳಿಸಿಥಳಥಳಿಸಿಮಣಿಮಯ। ಕಳಸಂಗಳಿನೆಸೆವವರಸಭಾಮಂಟಪದೊಳ್। ೧೮೮।

ಮ॥ ಸ್ರ। ಹರಿಪೀಠಾರೂಢನುದ್ಯತ್ಸಿತ ಚಮರರುಹಭ್ರಾಜಿತಂಪುಂತ್ರವಯೋರ್ಗ। ತ್ಕರಯುಕ್ತಂಮಂಡಲೀಕ ಪ್ರಕರಪರಿವೃತಂಕಾಮಿನೀವೃಂದಸೇವ್ಯಂ।ವರಸಂಗೀತಾದಿವಿದ್ಯಾನಿಕರವಿಲಸಿತಂ ತತ್ಕವಿಭ್ರಾತರಮ್ಯಂ। ಭರದಿಂದೊಡ್ಡೋಲಗಂಗೊಟ್ಟೆಸೆದನತುಳ ಸೌಖ್ಯಾವಹಂ ಸಾರ್ವಭೌಮಂ॥ ।೧೮೯॥

ಅಂತೊಡ್ಡೋಲಗಂಗೊಟ್ಟಪೊರ್ಗಳ್

ಕಂ॥ತನತನಗೆದುರ್ಗನೃಪರ್ಜಿಗೆ। ಯೆನುತಿರಭೂಪತಿಯಮಾತ್ಯರೊಳ್ದೀಕ್ಷಿಸಲಾ। ಘನಬಲವಂತಕುಮಾರಂ। ವಿನುತಾಸ್ಥಾಯಿಕೆಯ ನಂದುನಲವಿಂಪೊಕ್ಕಂ॥

ವ। ಅಂತುಪೊಕ್ಕು ಭೂನುತನಪ್ಪ ತಾತನಂಗೆಂಟರೊಳ್ಕಂಡುಭಯಭಕ್ತಿಯಿಂತತ್ಕುಮಾರನವನಿತಳ ನಿಹಿತೋತ್ತಮಾಂಗನಾಗಿಪೊಡವಡುವುದುಮೊಡನೆ।

ಚಂ। ನೆಗಳ್ದನುರಾಗದಿಂಪರಸಿ ದೃಗ್ಜಲಬಿಂದುಗಳುಣ್ಮೆಹರ್ಷದೊಳ್ ತೆಗೆದಮರ್ದಪ್ಪಲಾಪಿತನ ತೋಳೆಡೆಯಿಂದವೆದಾಸ್ಯ ಭಾವದಿಂಜಗುಳ್ದು ಪದಾಂಬುಜಾತ ಯುಗಳಕ್ಕೊಲವಿಂಪೆವಿನಪ್ರನಾಗಿಕ್ಕೈ।ಮುಗಿದುಕೆಲಕ್ಕೆಸಾರ್ದನಧಿ ಕೋತ್ಸವಪೂರಕನಾಕುಮಾರಕಂ। ।೧೯೦।

ವ। ಅಂತುತತ್ಕುಮಾರಕಂ ಸತ್ಪ್ರೇಮದಿಂತಾತನರ್ಧಾಸನಕ್ಕಾಗ್ರಹಿಸುತ್ತಿರಲೊಲ್ಲದೆಪಾದ ಸಮೀಪದನೆಲದೊಳ್ಕುಳ್ಳಿರಲ್ಕಾಗಳ್

ಕಂ। ಏಸೆವ... । ...ನಿರೀಕ್ಷಿಸಿ

ವಿಗೆಸಂ| ತಸವಂತಾಳ್ವವನೀಪತಿ|ನೆಸುನಗುತಂಮಂತ್ರಿವರನೊಳಿಂ
ದಿಂತೆಂದಂ|| ||೯೧||

ಯುವರಾಜಂಗೆವಿವಾಹೋ | ತ್ಸವವಂಬಯಸುವದಿನಂಗಳಾದುವೆ
ನುತ್ತುಂ |ದವನೀಪತಿಮಂಗಳಕಾ | ರ್ಯವನೊಲವಿಂಮಂತ್ರಿಯೊಳ್ಸಮಾ
ಲೋಚಿಸಿದಂ| |೯೨|

ವ|| ಅಂತುಸವಾಲೋಚನಂಗೆಯ್ದು ರಾಜಲೋಕಮಂವಿಸರ್ಜಿಸಿ
ನಿಜಾಸ್ಥಾನಮಂಟಪದಿಂದೆದ್ದು ಕುಮಾರಂಬೆರಸುಭೂಪತಿಸಚಿವೇಂ
ದ್ರನಂ ಕರೆಂಬಿಡಿದುಪರಿಮಿತ ಪರಿಜನಂ ಬೆರಸುಮಂಗಳೋತ್ಸಾಹಮಂ
ಮನದೊಳ್ಪೆತ್ತುಂ ತಃಪುರಕಾಂತೆಯಪ್ಪಕಳಾ ವತೀದೇವಿಯಸಮೀಪ
ಕ್ಕೆಬರ್ಪನ್ನೆಗಂ ಘಾಳಿಸುವ ಚಾಮರಗ್ರಾಹಿಣಿಯರ ವೀಟಿಕೆಯಂನೀಡುವ
ತಾಂಬೂಲ ಕರಂಕವಾಹಿನಿಯರ ಭರತಪ್ರಸಂಗಮಂಪೊಳ್ವ ಪರಿವ್ರಾ
ಜಿಕೆಯರ ಶ್ರೀಗ್ರಾಮಂಗಳಿಂಮುಟ್ಟಪಾಡುವ ನಾಯಿಕೆಯರಸಂಭ್ರಮ
ದಸಂಜಣಿಯೊಳ್ ದೆಕೆದ್ದು ಪೋಗಿಕ್ಕೈಗೊಟ್ಟುತಂದುನಿಜ ವಲ್ಲಭನಂ ಪ
ೀಯೆಂ ಕತಳ್ಪದೊಳ್ಕುಳ್ಳಿರಿಸಿ ಮತ್ತಮಾಪ್ರಧಾನಂ ಗುಚಿತಾಸನಮಂ
ಕೊಟ್ಟುಸಾಷ್ಟಾಂಗಪ್ರಣತನಾದನಿಜನಂದನನಂನೆಗಪಿಮೊಲೆವಾಲ್ಗ
ರೆಯಲ್ ಬಿಗಿಯಪ್ಪಿಪರಮಾನಂದ ಸಂದೋಹಂ ಮಿಕ್ಕುತಾಂಕುಮಾ
ರರಗೆಪೆಣಿಮೆಯಾಸನೆ ಮನಿತ್ತುತಾನುಂಕುಳ್ಳಿರ್ದುದುಂ|

ಕ|| ಅನುರಾಗದಿಕೇಳ್ಪತಿವರ| ತನಯಂಗೆವಿವಾಹಸಮಯಮಾದು
ದುಮಾಡ| ಲ್ಕನುಗೆಯ್ವು ದುಚಿತವೆಂದಾ | ಜನಪತಿನುಡಿಯಲ್ಕೆಮುದ
ಮನಾಂತಿಂತೆಂದಳ್ ||೯೪||

ಇದಕೆಮನದಲ್ಲಿಗುಡಿಗ| ಟ್ಟಿದೆನೆನ್ನಸುತಂಗೆತಕ್ಕಕನ್ನೆಕೆಯಂನೋ
ಳ್ಪುದುಬೇಗದೊಳೆಂದೆಂಬಾ| ಸುದತಿಯಮಾತಿಂಗೆನೃ ಪತಿಮುದಮಂ
ತಾಳ್ದಂ| |೯೫|

ಚಂ|| ವರತನಯಂಗೆತತ್ಸದೃಶಮೆಂಬವೆನಿ ಪೂರ್ಜಿತರೂಪಮುಳ್ಳಬಂ
ಧುರತರವಂಶಮುಳ್ಳ ಘನಲಕ್ಷಣದುನ್ನತಿಯುಳ್ಳ ಕನ್ಯೆಯಂ |ಭರದಿಂ
ವಾಹಮೆಸಪದುಪೊಳ್ಪನೆನುತ್ತುತುಳಾನುರಾಗಮಂ ಧರಿಯಿಸಿಕಾಣ್ಬು
ದುದ್ಯಮದಿನಿರ್ದನವರ ಕಳಾವಿಶಾರದಂ| ||೯೬||



ಕ|| ನಾಗವಿಭೂಷಣಕೃಪೆಯಿಂ |ರಾಗದಿಕುವರಂಗೆ ಮದುವೆಯ

ಮಾಳ್ಪೊಂದು । ದ್ಯೋಗದಿನಿರ್ದಂಸಕಲನೃಪಾಗಮು ಗುರುಶೈವಜನ
ಸುಖೋದಯಚರಿತಂ॥ ।೧೯೬॥

ವ॥ ಅಂತಾಕುಮಾರನವಿವಾಹೋತ್ಸಾಹಕಾರ್ಯಮುಂಮನದೊಳ್ಪೊ
ತ್ತುನಿಜಪ್ರಧಾನನಾಸನನಮುಂ ಸನ್ಮಾನದಿಂನೋಡಿ.

ಕಂ॥ ಪೊಳೆವಿಂದುಬಿಂಬದಿಂದು। ಜ್ವಳಚಂದ್ರಿಕೆಪಸರಿಪಂತೆಕೋಮ
ಳಮುಖಮಂ। ಪಳದಿಂದಂತದ್ದ್ವಿತಿತೊಳತೊಳಗುತ್ತಿರನೃಪತಿಸಚಿ
ವನೊಡನಿಂತೆಂದಂ। ೧೯೭॥

ಸನ್ನುತಲಕ್ಷಣದೆಸಕದ । ಕನ್ನಿಕೆದೊರಕುವಳದೆಲ್ಲಿಪರಿಕಿಪುದನೆ
ಸ್ತ್ರೀಯನ್ನತೆಗಾಂಗೆಯಾವಾತ್ಯಂ। ನೆನೆದುಮನಸ್ಸಿನಲ್ಲಿತಾನಿಂತೆಂ
ದಂ॥

ವರವಚನದಿನುಣ್ಮುವಸು। ತ್ತಿರಸಾಮೃಳನದಿಯಂತೆರೆಯುವೆಯ್ವಳಗಂ
ಬಂತ್ತಿರನಿಶದದಶನರುಚಿವಿ।ಸ್ತರಿಸಲ್ಕಚಿವಂನೃಪಾಳನೊಡನಿಂತೆಂದಂ।

ಗದ್ಯ॥ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂ
ಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯಪುರಾಧಿಪಶ್ರೀಸೋಮನಾ
ಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಠಿಪು
ರಾತನರ ಚಾರಿತ್ರದೊಳ್ಪಗಲ್ ಚೋಳನುತ್ಪತ್ತಿ ಯೌವನೋದ
ಯವರ್ಣನಂ ಸಪ್ತದಶಾಶ್ವಾಸಂ॥

ಸಪ್ತದಶಾಶ್ವಾಸಂ



## ಮಾನಕಂಜನ ಕಥೆ

ತಾನೊಸೆದು ಮಾನಕಂಜಂ | ಗಾನಂಪಡೆದಿರ್ದಪದವನಂದಿತ್ತಮಹಾ| ದಾನಿಕರುಣಾಂಬುನಿಧಿಪಿನಾ| ಮಾನಧಿಸೋಮೇಶನೊಲ್ದುಪಾಲಿಕೆನಮ್ಮಂ|

ಮ|| ಸತತಂಚೋಳಧರಿತ್ರಿಯೊಳ್ಪೆಳೆ ದಕಾಲಿಕ್ಷೇತ್ರಸಂತಾನದುನ್ನತಿಯಿಂಕಾತೆ ಸದಿರ್ಪಚೂತವನದಿಂ ಪುಂಡ್ರೇಕ್ಷುವಾಟಂಗಳಿಂ| ಭೃತಪದ್ಮಾಕರಜಾಳದಿಂತೊನೆವಚಂಚಟ್ಟಂ ಚರೀಕಂಗಳಿಂನುತಕಂಜಾರಪುರಂಮಹಾವಿಭವಮಂತಾಳ್ದೆಳ್ಗೆಯಿಂರಂಜಿಕುಂ|| ||೧||

ಚಂ| ಪಿರಿದೆಸೆವಾಪುರಕ್ಕಧಿಪನಾಗಿಮಹಾಧನದಿಂಕುಬೇರನೊಳ್ ಪಡಿಯನಿಸುತ್ತಮತ್ತಧಿಕ ಕೀರ್ತಿಯುಗರ್ಭದಿಚೇರಪಾಂಡ್ಯರಂ ಪರಿಕಿಸನೀಕ ಭಕ್ತ್ರನಲೊಲ್ದಿರಗುತ್ತಿರುತಿರ್ಪ ನಾವಗಂ|ನಿರುಪಮಮಾನಕಂಜನೆನಿಪಗ್ಗದಭಕ್ತನಿಳಾತಳಾಗ್ರದೊಳ್| ||೨||

ಕಂ|| ಪೆಸರಕೆರೆಪೆಸರಛತ್ರಂಪೆಸರಾರತಿಪೆಸರಶಿವಪುರಂಪೆಸರಕೊಳಂ ಪೆಸರರವಟ್ಟಿಗಗಳ್ಮನೆ | ಗೆಸೆವುತ್ತಿರೆಮಾನಕಂಜ ನಿಪ್ಪಂಜಸದೊಳ್|
ನುತಮಾನಕಂಜನೆಸೆವಿನ| ವಿತರಣಮಂಕೇಳ್ದು ಕಲ್ಲುಮರನಾದುವುಮು| ನ್ನತಮಪ್ಪಪರುಸದಿವಿಜ| ಕ್ಷಿತಿಜಂಗಳೆನಲ್ಕೆ ಪಿಂಪನಾವಂಪೊಗಳ್ವಂ| ||೩||

ಜಂಗಮವೆರೆದುದನೀವಂ|ಜಂಗಮವೆ ಲಿಂಗವೆಂದುನೆರೆಭಾವಿಸುವಂ ಜಂಗಮದಾಳೆನಿಸುವನು| ತ್ತುಂಗಗುಣಂಮಾನಕಂಜನೆಂಬಶಿವೈಕ್ಯಂ
ಆಮಾನಕಂಜನೆಂಬಮ |ಹಾ ಮಹಿಮಂಗರಸಿಯಾಗಿಗುಣವತಿಯೆಂಬಾ| ನಾಮದಸತಿಯಿರುತಿರ್ಪಳ್ |ಸೋಮುನತಾಯಂತೆವಿಶದಯಶದಿಂರಸೆಯೊಳ್|| |೪||

ಅಂತೆಸೆವಕಾಂತೆಯೊಂದುದಿ |ನಂತನಗರ್ಭಕರ ಲೀಲೆಯಿಲ್ಲೆಂದುಮಹಾ| ಚಿಂತೆಯೊಳಿರಲಿತ್ತಲುಮಾ| ಕಾಂತಾರ್ಚನೆಗೆಯ್ದು ಮಾನಕಂಜಂಬಂದಂ|| |೫|

ವ| ಅಂತುಬಂದುಮಾನಕಂಜಂತನ್ನ [illegible]ಪದೊಳ್ಕುಳ್ಳಿ

ಕ್ಕೊತ್ರೆ। ತ್ಕರಜಳನಿಧಿಚಂದ್ರಿಕೆಯೆನೆ। ಪಿರಿದೊಪ್ಪುವಳೆಲ್ಲಿಚಾರುಕನ್ನಿ
ಕೆಜನಸದೊಳ್॥ ॥೧೫॥

ನಡೆತೊಡೆನಡುವೊಲೆವೋಗವೆಂ। ಜಿಡೆಗಜವಂಕದಳಿಯಂಮೃಗಾ
ಧೀಶ್ವರನಂ। ಗೆಳೆವಕ್ಕಿಗಳಂಶಶಿಯಂ ಕಡುಪಳಿಯಲ್ಕನ್ನೆ ಚೆನ್ನೆಯೆನಿಸು
ತ್ತಿರ್ಪಳ್॥ ॥೧೬॥

ಮಾರನೃಪಂದಿಗ್ವಿಜಯ। ಕ್ಕೋಕಂತಿರೆನೆಡೆಯಲಿತ್ತಿಸಿದನೀಲದಗೂ
ಡಾರಂತಾನೆಂಬಂತೆಕು। ಮಾರಿಯಸೋಮರ್ಧಿಕರಂ ವಿರಾಜಿಸು
ತಿರ್ಕುಂ॥ ॥೧೭॥

ಅರೆಬರಬಲೆಯಗೆರ್ಬಳನಿಂ। ದಿರೆಶಿರೋಜ್ಜ್ವಲದಕೆಜೋಲ್ವವಾಳೆಯ
ಕೇಶಂ। ಪರಿಕಿಪೊಡೆಪತ್ತುವೊಳವೆನೆ। ಸರಿಜಗದೊಳ್ಕಾಮಪಾಶಮೆನಿಕ
ಣ್ಗೆಸೆಗುಂ॥ ॥೧೮॥

ಇರುಳುಂಪಗಲುಂಮುಡಿಯಂ॥ ಪಿರಿದೋವುತ್ತಿರ್ಪನೊಲ್ದುತಪ್ಪಿತ
ನೆನಲಾ। ವರಸತಿಯುಬೆಳ್ಪಿನೊಳ್ಪಂ। ಶರಸಿರುಹಭವಂಗೆಬಣ್ಣಿಸಲ್ಕರಿದಿಳೆ
ಯೊಳ್। ೧೯॥

ಗಿಳಿಮುಟ್ಟದಚೂತಫಳಂ। ಅಳಿಸೋಂಕದಬಿರುಮುಗುಳ್ಪಿಕಂತು
ಡುಕದಮುಂ। ದಳಿರೆನೆವಿಳಸದ್ಯೌವನದೊಳಮತಿರಂಜಿಸುವುದರುಳೆಕ
ನ್ಯಾರತ್ನಂ। ॥೨೦।

ಮಲ್ಲಿಕಾಮಾಲೆ॥ ಆಕುಮಾರಿಗೆನೊಳ್ಪಡೀಯುವರಾಜನೇನಿಜಪಲ್ಲಭಂ
ಲೋಕದೊಳ್ಪೆರತಿಲ್ಲ ಮತ್ತೆವಿಚಾರಿಸಲ್ನೃಪಕೇಳ್ಗುಣಾ। ನೀಕಮಂ
ಡಿತಮಾನಕಂಜನೊರಲ್ದು ಕೊಟ್ಟಪನಾವಮಾ। ತೇಕಶೀಘ್ರದಿನೀಂವಿ
ವಾಹಮನೊಪ್ಪಿ ಮಾಳ್ಪುದುನಲ್ಮೆಯಿಂ॥ ॥೨೧।

ವ॥ ಎಂದುತನ್ಮಂತ್ರಿ। ಕ್ವರಂಸವಿಸ್ತರಂಪೇಳಲ್ ಕೇಳ್ದು ದಂ ನೃಪಂ
ಪಟ್ಟಮಹಿಷೀಸಮೇತಂ ಹರ್ಷೋತ್ಸುಕಹೃದಯನಾಗಿ ಮಂಗಳಮ
ಪ್ಪಕಾರ್ಯವನೊಳ್ಳಿತ್ತೆಂ ನೆನೆದುಮತ್ತಾಮಾರನವಿವಾಹಕಾರ್ಯ
ಕ್ಕೆನೀನೇಪೋಗಿಪರಮಪ್ರೀತಿಯಿಂಮಾನಕಂಜರನೊಡಂಬಡಿಸಿಬರ್ಪು
ದೆಂದು ಬೆಸಸಲ್ಕಾಮಾತಿಂಗೆಮತ್ತಮಿಂತೆಂದಂ॥ ।೨೨।

ಚಂ। ಮನವೊಸೆದಲ್ಲಿಗೆಯ್ದಿ ಶುಭಕಾರ್ಯಮನಿಲ್ಲಿಗೆ ಮಾಳ್ಪನಾದೆ
ಡಂ, ಘನತರವಿತ್ತದಿಂದ ಭವಭಕ್ತಿಯತೇಜದಿನೊಪ್ಪುತಿರ್ಪನಾ ತನ

ಪೊಳಲಿಂಗೆನೀನೆನಡೆದಾ ತ್ಮಸುತಂಗೆವಿವಾಹಪೇಳ್ಗೆ ಯೆಂಬಿನೆಯುದಿನೊ ಪ್ಪಿಮಾಳ್ಪೊಡೆಕುಮಾರಿಯು ನಿತ್ತಪನರ್ಥಿಯಿಂನೃಪಾ॥ ॥೨೩॥

ಕಂ॥ ಎನಲರಿನೃಪರ್ಗೆಗರ್ವಿತ, ನೆನಿಸುವೆನಲ್ಲದೆಶಿವೈಕ್ಯರೊಲಾದ್ದ ಸಂತಾ। ನೆನಿಪೆನದರಿಂದಮಾಭ ಕ್ತನಪುರಕೊಡನೆಯ್ದಿ ಮಾಳ್ಪೆ ನೀವುತ್ಸವಮಂ

ವ॥ ಎಂದು ರಾಜೇಂದ್ರಂನುಡಿಯಲ್ಕೆಪರಮಾನಂದಮನೆಯ್ದಿ ತದ್ಗಾಂಗೇಯೂಮಾತ್ಯ ನೌತ್ಸುಕ್ಯದಿಂಲೇಖ ವಾಹಕಪುರಸ್ಸರಂಕಂಜಾರಪುರಕ್ಕೆಸದ್ಭಕ್ತರ್ವೆರಸುಪೋಗಿಮಾನಕಂಜ ಮಾಹೇಶ್ವರಂಗೆಭೆಟ್ಟಿಯಾಗಿ॥

ಚಂ॥ ವಿದಿತನೆಯೋಕ್ತಿ ಯಿಂಸಮುಗುಣ ಪ್ರಣಯಂಗಳನಾಡಿಭದ್ರಕಾರ್ಯಮನೊಲವಿಂದೊಡಂ ಬಡಿಸಿಶೈವಶಿಖಾಮಣಿಮಾ ನಕಂಜರಿಂ ಕುವರಿಯ ನೀವುದಂಪಡೆದುಮುದ್ವಹನಕ್ಕನು ಗೆಯ್ವುದೆಂದುಮುತ್ತವದಿಮುಗುಳ್ದು ಚೋಳನೃಪನಲ್ಲಿ ಗೆಬಂಥನಮಾತ್ಯಪುಂಗವಂ॥ ॥೨೪॥

ಅಂತುಬಂದು

ಕಂ॥ ಶಿವಭಕ್ತಾಗ್ರಣಿನಮ್ಮಯ। ಯುವರಾಜಂಗಿತ್ತನಾತ್ಮಪುತ್ರಿಯನೊಲ್ದಿಂ। ದವನೀಶ್ವರಸಂಭ್ರಮದಿಂ। ವಿವಾಹಮಂಮಾಳ್ಪುದೆಂದ ನಾಸಚಿವೇಂದ್ರಂ॥ ॥೨೫॥

ವ॥ ಅಂತುಸಚಿವೇಂದ್ರಂನುಡಿಯಲ್ಕಂ ತಃಪುರಕಾಂತಾಸಮೇತಂಸಂತಸದಿನೊಡಂಬಟ್ಟು ಸರ್ವಸೌರಂಭದಿಂಯುವರಾಜಂ ಬೆರಸುಪರಿಜನಪುರಜನವ ಸಂದಣಿಗಳಿಂಮಂಗಳಾನಕಧ್ವಾನಮೆಸೆಯಲ್ಕೆ ಪುಣ್ಯಪಾಠಕಜನಂಗಳ ಕೈವಾರಂಗಳೊಳ್ಪರಿಣಯನೋತ್ಸಾಹಕ್ಕೆ ನಿಜರಾಜಧಾನಿಯಂ ಪೊರಮಟ್ಟುಕಂಜಾರ ಪುರಾಭಿಮುಖವಾಗಿ॥

ಚಂ॥ ಮಿಥಿಳೆಗೆಪೆಮ್ರ್ಪಯಿಂದಶರಥಕ್ಷಿತಿ ಪಂಕಡುಸಂಭ್ರಮಂಮಿಗಲ್। ಪೃಥುಳಗುಣಾಬ್ಧಿ ರಾಮನವಿವಾಹದಪೆರ್ಚಗೆಪೋಪಮಾಳ್ಕೆಯಿಂ ರಥಮದನಾಗಘೋಟಕ ಸುಖಾಸನಪಂಕ್ತಿಗಳೊಪ್ಪೆಭೂವರಂ ಪೃಥುವಿಮುದಂಬಡಲ್ನಡೆದನಾತ್ಮಜನುತ್ಸಹ ಕಂಡುಲೀಲೆಯಿಂ॥ ॥೨೬॥

ಸರಭಸದಿಂದಮುತ್ಸವದಪೆರ್ಚುಗೆಯಂ ಮನದಲ್ಲಿತಾಳ್ದು ಪೇ। ಗಿರಿಗಳತಪ್ಪಲಲ್ಲಿ ಸರಸಿ ವ್ರಜದೊತ್ತು ಗಳಲ್ಲಿ ನಂದನೋ ತ್ಕರವನೆಳಲ್ಗಳಲ್ಲಿ ಬಿಡುತೀಪರಿಯೊಳ್ ಶಿವಭಕ್ತ ಮಾನಕಂಜರಪುರಕಿಂದ್ರವೈಭವದಿ ಚೋಳಮಹೀಪತಿ ಬಂದನರ್ಥಿ ಯಿಂ॥ ॥೨೭॥

ವ॥ ಅಂತುಬಂದವಿಕ್ರಮ ಚೋಳರಾಜನಂತನ್ನಾ ನಕ್ಕಂಜನ್ನಾಹೇಶ್ವರನತಿಪ್ರೀತಿಯಿಂ ಡಿಂಡಿಮಪಟಹ ಶಂಖತೂರ್ಯರವಂಗಳೆಸೆಯಲ್ಕ ಹರ್ಷಾ ಸಂಭ್ರಮದಿಂದಿದಿಗ್ಗರ್ಗಂಡನ್ನು ಕಂಜಾರಪುರ ಪ್ರವೇಶಮಂ ಮಾಡಿಸಿವುತ್ತ ಮಾಗಳ್

ಕಂ॥ ನವಮಣಿಮಯವೆನಿಸುವನೃಪ। ಭವನಮನಾ ಚೋಳಭೂಮಿಪಾಲಂಗಿತ್ತು। ತ್ಸವದಿಂ ನಿಜ ನಿಳಯಕ್ಕಂ। ಭುವನಸ್ತುತಮಾನಕಂಜ ಭೂಬೀಳ್ಕೊಂಡಂ। ॥೩೪॥

ವ॥ ಅಂತುಬೀಳ್ಕೊಂಡು ತನ್ನರ ಮನೆಗೆಬಂದು ಮಾನ ಕಂಜಮಾಹೇಶ್ವರಂ ಪರ ಮಾನಂದಕಂದಳಿತ ಹೃದಯನಾಗಿ ನಿಜತನೂಜೆಯಪ್ಪಸ್ವೋಮಪ್ರಭಾದೇವಿಯ ಪರಿಣಯಕ್ಕೆಂದು ಗೃಹಮುಹೂರ್ತಶರಂಬರಿಸಿ ವಿವಾಹಮಂಟಪಮಂ ಸವಿಸ್ತರದಿಂ ವಿರಚಿಸಿ ಮೊಂದು ಬೆಸಸಲ್ಕಾಗಳ್॥

ಚಂ॥ ಸಪಮಳನೀಲಕುಟ್ಟಿಮ ತಳಂ ಶಶಿ ಕಾಂತದಭಿತ್ತಿ ಪಂಚೆಯಿಂ ದೊದವಿದ ಕಂಭಮು। ಜ್ವಳಿಪವಜ್ರದಪೊಂದ್ವಾಲಿಪೊನ್ನಜಂತೆರ। ಪೊಸ ಲೋವೆವಿದ್ರುಮ ದಪುತ್ರಿಕೆ ಮುತ್ತಿನ ಮಾಲೆ ಪುಷ್ಯರಾಗದನ್ನ ತೋರಣಂ ಮೆರೆಯೆ ಕಣ್ಗೊಳಿಸಿತ್ತು ವಿವಾಹಮಂಟಪಂ॥ ॥೩೫॥

ಕಂ॥ ಆಮಂಟಪದಗ್ರದೊಳಭಿ। ರಾಮತೆವೆತ್ತಿರ್ದ ರತ್ನಕಲಶಮಣೀಚಿ। ಸ್ತೋಮಮಿರುಳ್ ಬೆಳಗುವುದರಿ। ನಾಮಿತ್ರನ ಕಿರಣತತಿಗಳಂ ನಗುತಿರ್ದಂ! ॥೩೬॥

ಮುತ್ತುಮಲ್ಲಿ

ಚಂ। ಪಿರಿದೆಸೆದಿರ್ದ ಸೂಸುಕದ ಮುತ್ತುಗಳಂ ನವಮಲ್ಲಿಕಾಳಿಗೆತ್ತ ರುಣಮರೀಚಿಯಂ ದೆಸೆಗೆಬೀರುವ ರತ್ನ ಮನಭ್ರಭೂಜದಂಕುರಕ್ಕೆ ಗೆತ್ತು ಪಚ್ಚೆ ವರಲಂಮಿಡಿಗೆತ್ತು ಮದಾಳಿ ಕೋಕಿಳಂ ವರಶುಕಪ್ರೋಲ್ಲ ಭ್ರಮೆಯ ನಾಂತೆರಗಿರ್ದವು ಚಂಚಾಲೋವೆಯೊಳ್॥ ॥೩೭॥

ಕಂ। ವಿನಯದಿ ಗಗನಶ್ರೀಕಾ। ಮಿನಿ ನಿರಿವಿಡಿದುಟ್ಟು ರಂಜಿಸುವಮುಂಜೆರಗೆಂ। ದೆನೆ ಚೀನದ ಗುಡಿ ಪರಿಣಯ। ಸನಿಕಾಂತದ್ವಾರದಲ್ಲಿ ಕಣ್ಗೆಸೆದಿರ್ಕುಂ! ॥೩೮॥

ತೊಳಗುವನೀಳದ ಕುಟ್ಟಿಮು। ತಳಮಂ ಜಳಮೆಂದುಗೆತ್ತು ಭಾಸಿತದಿಗಾಲೊಳಮಂ। ಟಿತಿಳದು ಮುಗ್ಧಾವಳಿ ಬಿಡದಡಿಯಿಟ್ಟು ನಾಣ್ಚಿ ಲನ್ನಂನೋಳ್ಪರ್॥ ॥೩೯॥

ಪರಿಣಯನವನೀಕ್ಷಿಸಲಜ| ಹರಿಹರಶಂಖಚರಗರುಡಗಂಧರ್ವಸು
ರ. ವೀರಸೇಲ್ತಂದಿರ್ದಪರೆನೆ| ವರಭಿತ್ತಿಗಳಲ್ಲಿಚಿತ್ರಮತಿರಂಜಿಸುಗುಂ॥
ಪರಿಮಳವನುಗುಳ್ವಪೊಸಗ| ತ್ತುರಿಗಗಡಿನಚಳೆಯದಲ್ಲಮಿಗೆಪರಪಿ
ದಕೆ| ಪುರಿವಳುಕಿನಚೂವಲಿಸುರು| ಚಿರಮೌಕ್ತಿಕತತಿಯಕಡಿವಿರಾ
ಜಿಸುತಿರ್ಕುಂ|
೩೫॥

ತನ್ಮಧ್ಯದೊಳ್

ಪೊಸಪಳುಕಿನಗಂಧಾಶ್ಮದಿ| ನೆಸೆವಸುವರ್ಣಾದ್ರಿಯಂತೆಪಾಸಿದಸಿ
ತಸ| ದ್ವಸನವಿನೊಪ್ಪುಪವಜ್ರದ! ಪಸೆವಣೆಮಿಂಪ್ರೋನ್ನಜಗುಲಿಕಣ್ಗೆ
ಸೆದಿರ್ಕುಂ॥
|೩೬|

ತೊಳಗುವಮುತ್ತಿನಚೌಕದ| ತಳಿರ್ಗಳಸದರತ್ನಮಯವಿತಾನ
ದ ಚಂದ್ರೋ| ಪಳಕೃತಭೃಂಗಾರದಪಸು| ವೆಳಗಿನಜಾಗರನೆಗಲ್ತ್ತಕ
ರಮೆಸೆದಿರ್ಕುಂ॥
|೩೭|

ಪಿರಿದರ್ಚಿಸಿದ್ದೆರಳೆಸು! ತ್ತಿರಿಸಿದಪೊಸಸಂಕುನೂಲಲವೋರ್ಗರ
ಭಾ| ಸುರಕಾತಕುಂಭಕುಂಭಂ| ಪರಿಪೂರ್ಣತೆವೆತ್ತುಮೆರೆದುದಾವೇ
ದಿಕೆಯೊಳ್|
|೩೮|

ಮ| ನವಕುಂಭಂಮಣಿದರ್ಪಣಂದಧಿಲತಾಂತಾರ್ದ್ರಾಕ್ಷತಂಕುಂಕು
ಮಂ| ಯವೆಗೊರೋಚನವಮುದ್ಘದೀಪ ನಿವಹಂದೂರ್ವಾಂಕುರಂಸ
ತ್ಫಳಂ॥ ಯುವತೀಜಾಳಮನೇಕ ವಸ್ತ್ರಮುರುಭಕ್ಷ್ಯಂ ಬಾಸಿಗಂಲಾಜೆ
ಯೊ ಪ್ಪುವದಿವ್ಯೌಷಧಿ ವೇದಘೋಷ ಮೆಸೆದತ್ತುದ್ವಾಹಗೇಹಾಂತ
ದೊಳ್
|೩೯|

ಕಂ| ಘನಘುಸೃಣಾಕ್ಷತೆಗಳಪಳು| ಕಿನಬಟ್ಟಲ್ಶಿಷ್ಟಚರ್ಚೆಬಿಸಸೂ
ತ್ರಂನೂ| ತನಪಂಚರತ್ನರುಚಿಚಂದನವರ ಸೂಕ್ತಂಗಳಲ್ಲಿರಾಜಿಸು
ತಿರ್ಕುಂ|
|೪೦|

ವ| ಮತ್ತಮಾವೇದಿಕೆಯೊಳ್ ರತ್ನರಂಜಿತಕಾಂಚನಕಳಶಕಳಧೌ
ತಪಾತ್ರಂಗಳೊಳ್ತೀವಿರ್ದಕಲಾಟು ಪರಿಪಕ್ವರಸಾಳ ಬೀಜಪೂರಜಂ
ಬೀರನಾರಂಗನಾಳಿ ಕೇರಕ್ರಮುಕದ್ರಾಕ್ಷಿಮಾದಲಾದ ನಾನಾಫಳ
ಪ್ರಕರಂ ಗಳಿಂವಿರಾಜಿಸುವುದಂತುಮಲ್ಲದೆಯುಂ

ಚಂ| ತೊಳಗುವಮುತ್ತಿನೋಲೆ ಗಳದೀಧಿತಿ ನೂತನರತ್ನಹಾರದು

ಜ್ವಳತೆಗರುತ್ಮನುದ್ಗರದ ಪಚ್ಚೆಯುಸತ್ವದ ಕಾಂಶುಕೊಡೆಮೊವೆಳಗಿ
ನೋಳಿಂದ್ರಚಾಪಲತೆ ಕಾಂತೆಯು ರಾದಶನಲ್ಕಿದೀಪಿಕಾ ಕುಳವಿಡಿದಿ
ರ್ಪಪೊಂಬರಿಯುಣಂಗಳನಾಂತೆಸೆದರ್ಲತಾಂಗಿಯರ್‌| |೪೧|

ಮತ್ತಂ|

ನುತಕನಕಾದ್ರಿಯಂತೆವಿಬುಧಾಶ್ರಯ ಮಂಬರದಂತೆಮಂಗಳಾ
ನ್ವಿತ ಮಮೃತಾಂಶುಐಂದ್ರಸಭೆಯಂತೆಗುರು ಪ್ರಕಟೀಕೃತಂಬಲಿಕ್ಷಿ
ತಿಪತಿವಾಸದಂತೆ ಕವಿಸಂಯುತಮಬ್ಜಜನಂತೆಹಂಸಶೋ| ಭಿತವಿಭಿದಂ
ತೆಪುಷ್ಕರವಿರಾಜಿತ ಮಾಯ್ತುವಿವಾಹಮಂಟಪಂ|| |೪೨|

ವ|| ಮತ್ತಮನೇಕಮಂಗಳದ್ರವ್ಯವಿರಾಜ ಮಾನೋತ್ಸಾಹೋದ್ರೇ
ಕಚಿತ್ರಮಪ್ಪ ಪರಿಜನರಭದ್ರ ಘೋಷದಿಂವಿವಾಹಮಂಟಪಂ ಪಠ
ಮಸುಖದಧರೆಯೆನಿಸುತಿರ್ಪ ನ್ನೆಗಮಿತ್ತಲನಂ ತೌಷಧಿಸ ನಾಥಶಿ
ಘೋಷ ದಕಂಗಳಿಂಮಹೋತ್ಸಾಹದುಂಡು ಭಿಮುರಜಡಿಂಡಿಮಪಟ
ಹಶಂಖದ ಪಟುರವಂಗಳ್ನೆಗಳಲ್ ಮಜ್ಜನಂಬೊಕ್ಕನೈಪಥ್ಯ ನಿಕೇತ
ನಕ್ಕೆಬಂದು ಕೈಗೈಯಲೊಡಂ||

ಕಂ|| ಸುರುಚಿರಮಪ್ಪುದಯಕ್ಷಿತಿ| ಧರದಗ್ರದೊಳೆಸೆವತರುಣರವಿಬಿಂ
ಬದವೋಲ್| ಧರಣೀನಾಥಕುಮಾರನ| ಶಿರದೊಳ್ಮಾಣಿಕದಶೇಖರು
ಸೊಗಯಿಸುಗುಂ|| |೪೩|

ವರಮುಖಕಮಳಕ್ಕೆರಗಿದ| ಸುರುಚಿರಮಧುಕರಕಿಶೋರಯುಗ್ಮ
ಮದೆಂಬಂ| ತಿರೆಕರ್ಣಂಗಳೊಳೆಸೆ ದುವ್ರಹರಿನೀಲ ಮಣಿಪ್ರಯುಕ್ತ
ಕುಂಡಲಯುಗಳಂ|| |೪೪|

ಲಲಿತಾನನಹಿಮಕರಮಂ| ಡಲಮಂಬಿಡದಿರ್ಪತಾರಕೆಗಳೆಂಬಂತು
ಜ್ವಳಿಸೆಕುಮಾರನಗಳದೊಳ್ |ತೊಳತೊಳಗುತ್ತೆಸೆದುದಮಳಮುಕ್ತಾ
ಕಹಾರಂ|| |೪೫|

ವಜ್ರಿಯಹಸ್ತದೊಳೊಂದೇ|ವಜ್ರಂ ಪರಿಕಿಪೊಡನೇಕವಿವೆತಮ್ಮೊಳನು
ತ್ತುಜ್ರುಂಭಿಸಿನಗುತೆಸೆದುವುವಜ್ರದಕಟಕಂಗಳಾಕುಮಾರನಗಳದೊಳ್
ಪರೆದಿರ್ಪನವಗ್ರಹಮಂ| ತರವೊಳ್ತಳೆದಿಳೆಗೆ ತಂದಬಲ್ವಿಂತೋರ್ಪ
ತಿರಲಾತನಂಗುಲಿಗಳೊ| ಳ್ವಿವಿಧ ... ರಂಸೊಗಯಿಸು
ಗುಂ| |೪೭|

ಕರೆವೆರಸಿಪೊರೆವಚೇನಾಂ| ಬರದುಡೆಯುಂಜ್ಯೋತ್ಸ್ನೆ ಬಳಸಿವಿಭ್ರಾಜಿಪನಿರ್ಜರಭೂಜಂತಾನೆಂದೆನೆ | ವರಧರಣೀಶ್ವರಕುಮಾರನೊಪ್ಪಿದನಾಗಳ್|

ಚಂ|| ಪುಳಿಯುರುಹಂಮದಾಳಿಮಧುಮಲ್ಲಿಗೆಮಾವುಮದೋದ್ಧಕೋಕಿಳಂ ಮಲಯಸಮೀರಣಂ ಮಹಿತಪುಷ್ಪಶರಂ ಮಿಳಿರ್ವಿಕ್ಷುಕಾರ್ಮುಕಂ ಗಳುಮಿನಿತೇಕೆಮೂರುಜಗಮುಂ ಮಿಗೆಮೋಹಿಸೆನಲ್ಕೆಮಿಂಮನಂ ಗೊಳಿಪುದಿದೊಂದೆ ಸಾಲದೆಮಹೀಪಕೃತಪ್ರಸಾಧನಂ|| ||೪೯||

ವ|| ಅಂತಾಪ್ರಸ್ತಾವದೊಳ್ತತ್ಪುರಕಾಂತಾಸಂತತಿ ಸಂತೋಷದಿಂ ಸೋಮಪ್ರಭಾದೇವಿಯುರ ಪಸದನಕರಣೋದ್ಯತೆಯುರಾಗಿಕಂದರ್ಪರಾಜನಗುಡಿಯುಂ ತೋರ್ಪಂತೆ ನವ್ಯಚೀನಾಂಬರ ಮಂನಿರಿವಿಡಿದುಡಿಸಿಯುಂ ಪ್ರಣಯಕಲಹದೊಳ್ಚರಣಘಾತದಿಂ ವಲ್ಲಭನಹೃದಯವನುರಾಗಂಬಡೆಯಲ್ವೇಳ್ಕೆಂದುಜತುರಸಮಂಪದತಳದೊಳ್ಪೂಸಿಯುಂ ಕೋಮಲತನುಲತೆ ಗಾಲವಾಲಮಂಸಮೆದಂತೆನೂಪುರಂಗಳಂಚರಣದೊಳಳವಡಿಸಿಯುಂ ಅತಿಶಿಥಿಲಮಧ್ಯಮೆಂದು ರೋಮರಾಜಿಯುನಡರ್ಗಂ ಕೊಟ್ಟುಬಲಗ್ಗಿಸನಿಕ್ಕಿ ದರೆಂಬಂತೆಮಣಿಮೇಖಲೆಯುಂಕಟಿತಳದೊಳ್ಸಾರ್ಚಿಯುಂ ಮಿಂಚಿನಗೊಂಚಲುಜ್ವಳತೆಯುಂ ಜರೆವಚಂಚಲಕಟಾಕ್ಷಂಗಳಚಂಚನ್ಮರೀಚಿಮಾಲಿ ಗಳ್ನೀಳ್ದು ಭುಜಮೂಲದೊಳ್ನೆಲೆಗೊಂಡಿರ್ಪಂತೆಮಿಸುಪ ವಜ್ರಮಯಕೇಯೂರಮಂ ಬಾಹುಯುಗಳದೊಳ್ನೆರವಿಸಿಯುಂಜಲಕ್ರೀಡೆಯನಾಡಿಪೊರಮಟ್ಟು ಬಂದಮಕರಧ್ವಜನಶುಂಡಾಲ ದಪುಷ್ಕರಮಂಸುತ್ತಿನಿಂದಮೃಣಾಳದಂತಿ ರ್ಪವೈಡೂರ್ಯಮಣಿ ಕಂಕಣಂಗಳಂ ಕರಂಗಳೊಳ್ಮೇಳೈಸಿಯುಂ ಪೂವಿಲ್ಲನಸರಳಶೃಂಗಾರ ದಣಸುಗಳೆಂಬಂತೆಸೆವ ಕೇವಣದುಂಗುರಂಗಳನಂಗುಳಿಯೊಳ್ಸಂಗೊಳಿಸಿಯುಂ ದರ್ಪಣನಮಣಿಪರೂಫದ ಚಕ್ರಯುಗದಂತೆರಂಜಿಸುಪಮಾಣಿಕ್ಯಮಯಕರ್ಣ ಪತ್ರಂಗಳಂಪಾಲೆ ಯೊಳ್ತೀವಿಯುಂ ಪರಿಪೂರ್ಣ ಚಂದ್ರಮಂಡಲ ದೊಳ್ಶುಕ್ರನಂಸೇರಿಸಿದಂತೆ ಲಲಿತಾನನಬಿಂಬದೊಳ್ ಪೊಸಮುತ್ತಿನಮೂಕುತಿಯನಿಕ್ಕಿಯುಂ ರತಿಕಾಮರಕರವಾಳ್ಗಳಂ ನೀಲದಸಾಣೆಯೊಳ್ನುಣ್ಪುಗೆಯ್ದು ಧಾರೆಯುಂತೆಗೆದರೆಂಬಂತೆಪೊಳೆವಕಟಾಕ್ಷಂಗಳನಂಜನದೊಳಂಬಟ್ಟಯುಂಮಿಸುಪ

ಕ್ಷುಂಚಾಪಮಂಗೋಲಿಗೆತ್ತೆ ನೋೞ್ಪಂತೆಕುಡಿವುರ್ಬುಂಸಮರಿನಿಡಿವುರ್ಬುಂ ಮಾಡಿಯುಂ ಲಾವಣ್ಯಶ್ರೀಫಣೆಗಣ್ಣಂತಳೆದ ಳೆಂಬಂತೆಕಸ್ತೂರಿಯುಬೊಟ್ಟಂ ನಿಟಲತಟದೊಳಲಂಕರಿಸಿಯುಂ ಮುಖಕಮಲಸೌರಭಕ್ಕೆರಗಿ ಸುತ್ತಿರ್ಪ ಮರಿದುಂಬಿಗಳಮಾಲೆಯೆಂಬಂತೆ ಮೆರೆವನಿರಿಗುರುಳ್ಗಳಂ ನೆಪಡಿಸಿಸಿಕ್ಕಿ ಚೊಲ್ಲೆಯುಮನಿಕ್ಕಿಯುಂ ಕಾಮದೇವನನೀಲದಗುಡಾರಕ್ಕೆ ಪೂಜೆಗೆಯ್ವಂತೆಸೋಮ್ಮುಡಿ ಯೊಳ್ಕಂಪಿನ ಪೂಮಾಲೆಯಂ ತೊಡರ್ಚೆ ಯುಮನಂತರಂ॥

ಚಂ॥ ಚರಣದಿನೂಪುರಂ ಘನನಿತಂಬದಿಮೇಖಳೆ ಚಾರುಹಸ್ತದಿಂ ರುಚಿರಕಂಕಣಂಗಳೆ ವಿಸಪ್ಪದಕಂಶ್ರುತಿಯಿಂದ ವೋಲೆಗಳ್ಕರಮೆಸೆವುತ್ತಮಿರ್ಪುದಿದು ಚಿತ್ರತರಂತೊಡವಿಂಗ ತತ್ತನೂ। ದರಿತೊಡವಾಗಿ ತೋರ್ಪಳಿನಲೀವೊಗಳ್ವೆಂಕವನೀಯವೃತ್ತಿಯಂ। ೫೧

ಮನಸಿಜಮೋಹನಾಸ್ತ್ರಮದುಕ್ರೋಮಳೆಯಾಕೃತಿವೆತ್ತುದೋಪಸಂತನಪಯುಲಕ್ಷ್ಮಿಯೋಕುಮುದಮಿತ್ರನಸತ್ಕಳೆಕಾಂತೆಯಾದುದೋಭುನಲತಿರಮ್ಯವೃತ್ತಿ ಘನವೈಭವವೊಪ್ಪುವಜಾಣ್ಮೆಯೆಂಬಿವುಂ ತನಗೆಸೆಯಲ್ಕೆ ಕನ್ನೆಗಖಿಯರ್ಪೊಗಳಲ್ಪಿ ರಿದೊಪ್ಪಿ ತೋರಿದಳ್। ॥೫೨

ಮುಡಿನವಿಲಂಕುರುಳಳಿಯುಂ ನುಡಿಗಿಳಿಯುಂತುಂಗನಾಸಿಕಮುಪತಿಲಪಂ॥ ನಡೆಪೆಣ್ಣಂಚೆಯುನೇಳಿಸೆ ಕಡುಚಲ್ವಿಂಕನ್ನೆಜಸವನಾಂತೆಸೆದಿರ್ದಳ್। ।೫೩

ವ॥ ಅಂತೆಸೆವತತ್ಕನ್ನೆಯಂ ಕೈಗೆಯ್ದಿರಿಸಿತಂದುದ್ವಾಹಗೇಹದೊಳ್ ವೃದ್ಧೋಚಿತಾಚಾರದಿಂದಿ ರಿಸಲಾಸಮಯದೊಳ.॥

ಮ॥ ಶ್ರುತಿರಾವಂಶುಭಗೀತನಾದ ಮಬಲಾಸಂದೋಹನಿರ್ಘೋಷಮುನ್ನತಿಯಿಂಶಂಕುಶಲಾಕೆಯಿಂಘಳಿಗೆವಟ್ಟಲ್ವಾತಕವಾತ್ರ ತದಾಖ್ಯತವೇಯೆಂಬನೆಗಳ್ತೆ ಯೊಪ್ಪುತಿರೆಲಗ್ನಂನಿಚರೆಕನ್ಯಾವರ ಮೂರ್ತಿಮಿಕ್ಕೆಳ್ತರ ವೇಳ್ಕೆನುತ್ತಮುಸಿರ್ದರ್ಜ್ಯೋತಿಷ್ಕರುತ್ಸಾಹದಿಂ। ॥೫೪

ಕಂ। ಅತಿವೇಗದಿವರನಿರ್ದಡೆ।ಗತುಳೋತ್ಸವದಿಂದೆವಿಪ್ರಜನಸಹಿತಂ ಸ। ನ್ಮತಿಮಿಗೆತದ್ಧಾತ್ರೀಶನ। ಹಿತನೆಲ್ಲಂಪಂಪುರೋಹಿತಂಸಂಭ್ರಮದೊಳ್। ೫೫

ವ॥ ಅಂತೆಯುಂದುಪುರೋಹಿತ ... ಸ್ವಸ್ತಿ ... ವ್ಯನ್ವಿತನಾಗಿಮಾತು

ಳಿಂಗಳವನಿತ್ತು ವಿವಾಹಲಗ್ನಂಸಾರ್ತಂದುಪೆಂದು ಬಿನ್ನಪಂಗೆಯ್ಯಲ್ ಪಗಲ್ಗೋಳನತಿಸಂಭ್ರಮದಿಂ ಪರಿಣಯನಮಂದಿರಾಭಿಮುಖನಾಗಿಪೊರಮಟ್ಟುಬಪ್ಪರ್ ಕ್ಷಿರಣಿತಮಣಿ ನೂಪುರತ್ರಿಜಗ ದಂತದಿಗಂತವುಂ ಜನಿತಶ್ರಮಜಲಧೌತಲಲಿ ತಾಂಗಾಭರಣಾಮಚಿತ್ರ ಚೇನಾಂಬರವುಂ ಘಣಘಣಿತಸ್ವನೋಪೇತಹಿಮಘಂಟಿ ಕಾಂಕಿತಮಣಿಕಾಂಚೀದಾಮೋದಂಚಿತಕಟಿತ ಟವುಂ ಝಣಝಣತ್ಕಾರರ ವೋಲ್ಲಸಿತಮಣಿಕಂಕಣಾಂಕಿತಕೋಮಳಕರಪಲ್ಲವಮುಂಸುರುಚಿರಮೌಕ್ತಿಕಹಾರಾಂದೋಳಮಕರ ಪತ್ರಾಂಕಿತ ಪೀನಪಯೋಧರವುಂ ಪ್ರಚಲಿತ ಮಣಿಮಯಮಯೂ ಖಾಂಕಿತಕುಂಡಲ ಮಂಡಿತಗಂಡ ಮಂಡಲಮುಂಝೇಂಕಾರಮಧುಕರ ಪ್ರಕರಶೋಭಿತ ಪುಷ್ಪ ಮಾಲಾವಿಲಾಸಿತ ಚಿಕುರನಿಕರಮುಂ ವಿಲೇಪಿತಕುಂಕುಮ ಪಂಕಪುಂಜ ಪಿಂಜರಿತಸರ್ವಾಂಗಮುಂ ಸಕಲಜನನಿ ಲೋಚನಕ್ಕಾನಂದ ಮುಕುಡಲ್ವೇಣು ವೀಣಾಮುರಜಝಕ್ಕಾರವದೊಳ್ ತಾಳಾನುಗತಮಪ್ಪ ಸಂಗೀತಮ ನೊ ಡರಿಪಂತಃಪುರವಿಲಾಸನೀ ಜನಮುಂ ಹಾಸ್ಯರಸಾದಿತವಾ ಮನಕುಬ್ಜಖಂಜಗಡುಳಮೂಕಬಧಿರಕಿರಾತ ಸಮುದಯಮುಂ ಚಂಚತ್ಕಾಂಚನದಂಡಾಂಕಿತಹಸ್ತಶೋಭಿತ ಜರತ್ಕಂಚುಕಿಸಂಚಯಮಾಕ್ಷಪಟುರಾವಮುಂ ಭೇರೀಮೃದಂಗನಿಸ್ಸಾಳ ಶಂಖಕಹಳಾಡಿಂಡಿಮ ಪಟಹಪಟುರವಂ ಗುಡುಮರಾಜಪರಿಜನಮುಂಮಾಂಗಲ್ಯನಾರಂಭ ಮಂತಾಳ್ದು ಭೋರ್ಗರೆದು ಮೆರೆವುತ್ತೊಡನೆಬರೆ

ಮ॥ ಸ್ರ॥ ಭರದಿಂದೆಯ್ತಂದ ನಾನಾಪುರಜನರ ಧಿಕೋತ್ಸಾಹದಿ ಘೋಷಮಾಶಾಂ ತರಮಂತೀವಲ್ಕೆ ದಿವ್ಯಾಂಬರ ನವಮಣಿಭೂಷಾಳಿಯಿಂ ದೊಪ್ಪುತಂಬಂ|ಧುರಮಪ್ಪುದ್ವಾಹಗೇಹಕ್ಕತುಳ ವಿಭವ ದಿಂಬಂದನಾನಂದಕಾರಂ| ಪರಕಾಂತಾಚಿತ್ತಚೋರಂ ಸಕಲವಿನುತಶೃಂಗಾರನಾರಂಕುಮಾರಂ॥ ॥೫೫॥

ಕಂ॥ ಬಂದಕುಮಾರಂಗುತ್ಸವ |ದಿಂದಂಮಧುಪರ್ಕಮಂನಿವರ್ತಿಸಿಮಾವಂ |ಹೆಂದವಮೆಟ್ಟಕ್ಕಿಗಳೊಳ್ ನಿಂದಿರಿಸಿದುಕೂಲ ಕಾಂಡಪಟಮಂಪಿಡಿದಂ| ॥೫೬॥

ಎಸೆವಂಧರ್ಮಜನದಕ್ಷಿಗೆಳೆಸು ಗಳ್ತುಕ್ತಿರ್ರಬ್ರಹ್ಮಬ್ರಹ್ಮರುಳಸಿರಸಂಭಾ

ಏಸಿಕೊಡೆಬೆಳಗುತಿರ್ಪೊರ್ಗಂ| ಬೆಸಕಂಜವನಿಕೆಯಿನಲ್ತೆ ಛುಟ್ಟತ್ತಾಗಳ್
ಛಂ| ಮಿಳಿತಬಹುಳಭದ್ರಸುಮುಹೂರ್ತ ಮುದಾಯ್ತೆನಲೋಟ್ಟಿ
ಕಾಂಡಮುಂ|ನಲಿದಿಬರಂತುನಿಂದುರತಿಮನ್ಮಥರೊಬ್ಬರನೊಬ್ಬರೀ
ಯಿಂದಲರಸರಳ್ಗಳಿಂದ ಮೆಸೆಪಾಡು ವರೆಂಬವೊಲಾವಧೂವರರ್ಗ|ಲಿ
ನೊಳೀಕ್ಷಿಪಕ್ಷಿಗಳ ದೀಧಿತಿಪರ್ಬಿತುತದ್ಗೃಹಾಂತದೊಳ್ ||೫೮||

ವ|| ಅಲ್ಲಿಂಬಳಿಯಂ||

ಕಂ|| ಸೋವುಪ್ರಭೆಯಿಂಮಹಿವೋ| ದ್ದಾಮಾಪಗಲ್ಗೊಳವೆಸರ್ಕು
ವರಂಗಿತ್ತೆ| ತಾ ವೂನಕಂಜನಧಿಕ| ಪ್ರೇಮದಿಪೊಂಗಳಸವೆತ್ತಿಕ್ಕ
ನೀರೆರೆದಂ|| ||೫೯||

ಆಸಮಯದೊಳ್||

ಮೊಳಗುವಮಂಗಳದುಂದುಭಿ| ಗಳಬಹುಳನಿನಾದವೇಳ್ಗೆ ಪೂರಿಪ
ಶಂಖಂ| ಗಳಘೋನಘೋಷದಪೆರ್ಚುಗೆ| ಬಳೆದುರೆತೀವಿತ್ತು ರೋಧಸೀ
ಮಂಡಲಮಂ ||೬೦||

ಆನಂತರಂ||

ವರಪೇದಧ್ವನಿಶುಭಗೀ| ತರವಂನೆಗಳ್ವರಂಗೆತತ್ಕನ್ನಿಕೆನಿ| ಜಕ
ತರುಕುರಲತೆಯಂ 'ಪಿಡಿದಿರವಂಪೋಲ್ತೆಸೆವುದಾಯ್ತು ಪಾಣಿಗ್ರಹಣಂ||

ಆಸಮಯದೊಳ್|

ಒದವಿದಕರದಂಬುದವಾ.| ರ್ಗದೊಳಸಂಚರಿಪಖಚರದಂಪತಿಗ
ಳವೋಲ್| ಮುದದಿಂನಡೆತಂದಪರ್ಗ| ಸಿದವಣಿಬದವೇಲೆಜಗಳಿಗಾ
ದಂಪತಿಗಳ್| ||೬೨||

ಸುಲಲಿತಗತಿಯಿಂಬಂದಾ| ಗಳೆವರವೇದಿಕೆಯನಡರ್ದುತದ್ದಂಪತಿ
ಗಳ್| ತೊಳಪದಣಿಂಬಕಪಾಸಿದ| ಪಳುಕಿನಪಸೆವಣೆಯೊಳಿರ್ಬರು
ಕುಳ್ಳಿರ್ದರ್|| ೬೩

ಅಂತಾಗಳ್|

ಶ್ರುತಿಮಂತ್ರೋಕ್ತದಿನಾದಂ| ಪತಿಗಳ್ನಲವಿಂಪುರೋಹಿತಂಪೇಳಲ್ಕ
ದತಿಶಯದಿಂಬಲವಂಬಾ| ಹುತವಹನಂಮಿರುಪಲಾಜೆಯಿಂದರ್ಚಿಸಿದ
ರ್| ||೬೪||

ಅನಂತರಂ

ಜಲಜಜಮುಖ್ಯಕಾರ್ಕಾಂತಾ! ಪಳಗೆರಗುಪರೆಂದುತೋರ್ಪರ್ನಾಲ್ಕೊ ಸುನಗುತೋ! ಪಳಮಿಸುಪುಂಗು ಟಮಂಪತಿ | ತಳಿದೊಲವಿಂಕಷ್ಟಪ ದಿಗಳಂಮೆಟ್ಟಿಸಿದಂ| ||೬೫||

ವ|| ಅನಂತರಮಿರ್ಬರುಂ ಪೊಂದು ಪಸೆಯೊಳ್ಕುಳ್ಳಿರ್ದುದುಂ|

ಕಂ| ಹೋಮಾನಳನಿಂಜನಿಯಿಪ |ಧೂಮ ಕ್ಕರೆಮುಗಿದಳಕ್ಷಿಗಳನೆಂ ಬನುವಿಂ | ಸೋಮಪ್ರಭೆತಚ್ಛೋಳನ | ಕೋಮಳಮೂರ್ತಿಯನೆ ನೋಡಿಪರುಷತೆಯಾದಳ್ |೬೬|

ಅಂತುಪರಸ್ಪರಾವಲೋಕನ! ಸುಖಮನನುಭವಿಸಿಬಳಯಂ|

ಕಂ| ಪದೆದಸುಚೇತನದಿಂಸಂ| ಪದದಿಂಮುತ್ತೈದೆತನದಿನಿರ್ದುದೆ ಸುತ್ತಂ| ಮುದವರ್ಕಳನೊಲವಿಂದಂ| ಸುದತಿಯರುರೆಪರಸಿಸೇಸೆಯಿ ಕ್ಕಿದರಾಗಳ್|| ೬೭

ಮ| ರತಿಕಾಮರ್ವರಭಾರತೀ ಕಮಳಜರ್ಲಕ್ಷ್ಮಿಸರೋಜಾಂಬಕ ನ್ರ್ಗತಗೌರೀಪರಮೇಶ ರಿರ್ಪತೆರದಿಂಸೋಮಪ್ರಭಾಕಾಮಿನೀ|ಯು ತತಚ್ಛೋಳನಿರಲ್ಕೆ ನೋಡಿಪರಮಾನಂದಂಗಳಂತಾಳ್ದಿಸಂ|ನುತರೂ ಪಂಮಿಗೆಬಣ್ಣಿಸಿತ್ತು ಜನಮಂದುದ್ವಾಹಗೇಹಾಂತದೊಳ್| |೬೮|

ಆಸಮಯದೊಳ್|

ಚಂ| ಜನನುತಮಂಡಳೀಕವರ ಮಿತ್ರಪುರೋಹಿತವರ್ಗದಂಗನಾ| ಜನಕೆತದೀಯಪುತ್ರಿಯ ವಿವಾಹದಮಂಗಳದುತ್ಸವಕ್ಕೆ ಕಾಂಚನವು ಯದಂಜನಾವಳಿ ಯೊಳೊಪ್ಪುವರನ್ನದಬಾಯಿ ನಂಗಳಂ ಮನವೊಸೆದಿ ತ್ತುತದ್ವಿಭುವಿನಂಗೆ ನೆಯಿರ್ದಳುದಾತ್ತವೃತ್ತಿಯೊಳ್| ||೬೯||

ಅಲ್ಲಿಂಬಳಿಯಂ

ಚಂ|| ಸುರತರುಕಾಮಧೇನುಪರುಸಂನಿಜಮಂದಿರದೊಳ್ನಿಗಳ್ತೆವೆತ್ತಿ ರೆಕತಮುನ್ನುಲೋಭಿಕಡೆಯಿಲ್ಲದವಸ್ತುಗಳೀಕನಪ್ಪಕಿಂ ನರಪತಿದೀನನೆಂ ದಿಳಿಪುದುದ್ಧಗುಣಾಬ್ಧಿ ಶಕಾಧಿ ನಾಥನೆಂದೊರೆದರಚಿತ್ತಮಂ ತಣಿಪಿ ದಂಬಹುವಿತ್ತಮನಿತ್ತುಧಾತ್ರಿಯೊಳ್| ||೭೦||

ಅದಂಕಂಡು|

ಕಂ| ಹರಭಕ್ತಮಾನಕಂಜ | ರ್ಘರಣಿಪನಂಕಂಡುನಗುತೆಬಹುಳಧ ಧನಮಂ |ಹರ...ಷದೆ...ಲೆ...ದ...ಶ್ರೀ...ತ | ಪ್ರ...ರುತರ...ಮದಿಂದವಿರ್ಪ

ಪಸರಥೊಳ್!

ಚಂ|| ತೊಳಗುವಪೊಲ್ಗಡಲ್ಮ ನಿಜನಾಕೃತಿವೆತ್ತುದೊರ್ಣಚಂ ದ್ರಮಂ| ಡಲಮದುವರ್ಣಿಯಾದುದೊಪಿ ಮಾಚಳಕಾಂತಿತಪಸ್ವಿಯಾದುದೋ| ತಿಳಿವೊಡೆತಾನೆನಲ್ಧೃತವಿಭೂತಿಯೊಳ್ವ ಜಟಾಳಿಗಳ್ಕಮಂ| ಡುಲುಪಿರಿದೊಪ್ಪಿಕಾಮರಿಪು ತಾಪಸವೇಷದಿಬಂದನರ್ಥಿಯಿಂ||

ಕಂ|| ಹಿಳಿದಾಮವಚಿತ್ರಪಟಂ| ಸುಲಲಿತರವಮೊವುತಿಪಸಕಿಂಕಿಣಿಗಳ್ಕೊ| ಮೞಕನಕದಂಡವೊಪ್ಪುಲ್ತೊಳತೊಳಗುತ್ತಿರ್ದುದಮಳವೃಷಭಪತಾಕೆ|| ||೭೪||

ಪುಲಿದೊವಲಚಲ್ಲಣಂಮಂ| ಗಲಮಯರುದ್ರಾಕ್ಷಭಸಿತಮೊಪ್ಪುತ್ತಿರಲಾ| ಬಲವಂತಕಿಂಕರಂಕರ | ಕೞತವೃಷಧ್ವಜವಿಮುನಿಯಪ್ಪೊಲೆಯೊಳ್ಮೆರೆದಂ|| |೭೫||

ವ|| ಅಂತುವೃಷಧ್ವಜದ ಪಂಕದೆಡೆಗೇಳ್ತಂದುಕುಹಕತಾಪಸವೇಷದೀಶನಂಕಂಡುಭಯಭಕ್ತಿಯಿಂದಿದಿರೆದರ್ದು|

ಮ. ಸ್ರ. ಪರಮಾನಂದಾಶ್ರುಜಾಳಂ ಪುಳಕಸಮುದಯಸ್ತಂಭಭಾವಂ ವಿವರ್ಣಂ,ಸ್ವರಭಂಗಂಕಂಪನಂಸಂಜನಿತಘನತರಸ್ವೇದವಾರಿಪ್ರವಾಹಂ ನಿರುತಂಮುರ್ಚ್ಚೇರಲಾಶಾಶ್ವತ ಪದದೊಲವಿಂತಾಪಸಾಕಾರವೆತ್ತಿ| ಶ್ವರಪಾದಾಂಭೋಜದೊಳ್ಸ್ಮೃಗೆಡೆದು ಮಱೆದಿರುತಿರ್ದನಾಮಾನಕಂಜಂ| |೭೬||

ಅಂತುಪದಕ್ಕೆರಗಿರ್ದಭಕ್ತನಂನೋಡಿ||

ಕಂ|| ಘನಕೃಪೆಯಿಂಶಿವನೇಳೀ| ನಿನತೆತ್ತಿಕ್ಕಿದುರ್ದಭಕ್ತಸಾಗಳ್ಕ್ಕಿಗೊಟ್ಟನುರಾಗದಿನಾಮುನಿಕೂ|ಪಿನಶಿವನಂತಂದುರತ್ನಪೀಠಮನಿತ್ತಂ

ಕೃತಕೃತ್ಯನಾದೆನಾನೆನು| ತತಿಭಕ್ತಿಯೊಳರ್ವಿಕೊರ್ವಿನಲಿದಾಡುತ್ತಂ|ಯತಿಪತಿಯಂಘ್ರಿಗಳಂತೊಳೆ, ದತುಳೋದಕವನ್ನೆ ತಾಳ್ದನಾಶಿವಭಕ್ತಂ| |೭೭|

ಚರಣೋದಕಮಂಶಿರದೊ| ಳ್ಧರಿಯಿಸಿಸ್ಸತಿತಂದರನ್ನದಾರತಿಗಳನಾ| ದರವಿಂದೆತ್ತಿಮಹಾಮುನಿ| ಪರನಂಪುನ್ನಿಸಿಶಿವೈಕ್ಯನಂದಿಂತೆಂದಂ

ಇಂಪೆನ್ನಯಮೇಲಣಕೃಪೆ| ಯಿಂದಿಲ್ಲಿಗೆಬಂದುದಾವುದಿಷ್ಟಮಿದಂ ಸಾನಂದದಿಬೇಳ್ಪುದುಮುನಿಪತಿ| ಯೆಂದಾಶಿವಭಕ್ತನೋತುನುಡಿಯಲ್ಕಾಗಳ್|| |೭೮|

ವರಹೃದಯುಸ್ಥಿತನಿರ್ಮಳ| ಕರುಣಾಮೃತರಸದಕೋಡಿಮುಖದಿಂ ಪರಿವಂತಿರೆಮಿಸುಪದಶನಕಾಂತಿ| ಸ್ಫುರಿಪಿನೆಭಕ್ತಂಗೆತನ್ಮುನೀಂಪ್ರಂ ನುಡಿದಂ|| ೮೦

ಏರೆವರ್ಗೆರೆದುದನಿಪಾ | ಬರಿದಿನಚಲಮಿನ್ನಿದೇಕೆಬೇಡೆಂತೆನೆಕೇ|| ಳ್ವರಕಿವಿಗಮ್ಭುತವೀವ|ರ್ಗರಿದದುಕಾರಣದಿಬೇಳ್ಪುದನುಚಿತಮೆಂದಂ||

ವ| ಎಂಡಾಮಾತಿಗೆನಸುನಗುತ್ತಂ ಮಾನಕಂಜನ್ನಾನಿಬ್ಬಣ ದರಾಜ ಲೋಕಂ| ಬೆರಗಾಗಲ್ಕಾಮುನಿರೂಪಿನೀಶ್ವರಂಗಿಂತೆಂದಂ||

ಕಂ| ಮುನಿನಾಥನೆಕೇಳೆನ್ನಯು| ತನುಧನಮನವಿನಿತರೊಳಗೆನಿಪುಗೇ ನಿಷ್ಟಂ| ಮನವೊಲ್ದುಬೇಡುಕೊಟ್ಟೆಂ | ಮನಸಿಜಹರನಾಣೆಯೆಂಬ ಭಕ್ತಂಗೆಂದಂ| ||೮೧||

ಚಂ|| ಒಲಿವೊದಲಾದರಂದೊಸೆದು ತಮ್ಮಯುಪೇಹಮನಿತ್ತುಕೀ ರ್ತಿಯಂ| ತಳೆದರದಂತುಟಲ್ಲ ಪೆರರೊಲ್ಮೆಯುವಸ್ತುವನೀಯುಕೇಳ್ಪುದ ಗ್ಗಳಿಕೆವಿಚಾರಿಸಾತ್ಮಸತಿಯಂ ನಿಜಮಿತ್ರನನುರ್ವರೇಶನಂ ಬಳಕನು ರಾಗವೆಯ್ದೆನಗುವರ್ಪಿರಿದಾಂಬಿಡೆ ನಿಂದುನಿಶ್ಚಯಂ ||೮೨||

ಕಂ| ಮುದವಣಿಗಂನೋಡುತ್ತಿರೆ| ಪದಪಿಂಬಾಸಿಗದಿನೆಸೆವನಿಜತನು ಜಯುಪಿಂ| ಪೊದಪಿದಸೋಮರ್ಮುಡಿಯುಂಚೆ| ತ್ತದೊಳಳ್ಕದೆಕೊಯ್ದು ಕೊಟ್ಟೊಡಾಂನೆರೆತುಷ್ಟಂ| ||೮೩||

ತಳುವದೆನೀಂನೋಡಲ್ತೊಳ| ತೊಳಗುವಚೌಲಿಮುನೆಮಾಡಿನಲವಿಂ ನಭದೊ| ಳ್ತಳೆವೆನ್ನಪೊನ್ನನಂದಿಯು | ಪಳವಿಗೆಯೊಳ್ಕಟ್ಟಮೆರೆವೆನೀ ಸೋಮರ್ಮುಡಿಯುಂ ||೮೪||

ಎನೆಮುನಿಪನನುಡಿಯುಂನೆ|ಟ್ಟನೆಕೈಕೊಂಡುರ್ಬಿನಲಿದುಪರವಶದಿಂ ಸಂ| ಜನಿತಪುಳಕಾಳಿಯೊಗೆಯ | ಲ್ಕನುನಯದಿಂನಿಜತನೂಜೆಮುಡಿ ಗೊಯ್ದಿತ್ತಂ| ||೮೫||

ವ| ಅಂತುಭರದಿಂನಿಟ್ಟಪಃಕೋಳ ಮುಖ್ಯಶಿವಭಕ್ತರ್ಕಂಗಳಂಮು ಚ್ಚಿಪರಮಾಶ್ಚರ್ಯದಿಂದಿರ್ಪಾಗಳ್,

ಚಂ| ಮಿಸುಪ ಜಟಾಕಿರೀಟಮುಮುರಾಪಗೆ ಚಂದ್ರನಹೀಂದ್ರನಗ್ನಿ ದೃ ಗ್ಭಸಿತಮುಜಾಸ್ಥಿಮಾಲೆಗಳಂ ಗಜಕೃತ್ತಿಕಪಾಲಮುಗ್ರಮು ಪ್ಪಸಿ ಘನಖೇಟಕಂಡ ಮುರುಗಂನವರತ್ನದಪೊಂದೊಡರ್ಪಿರಾ ಜಿಸುತಿರ

ಲೊಪ್ಪಿದಂ ಭವಭಯಂಕರನದ್ರಿಜೆಯುಯಾಣ್ಮ ಶಂಕರಂ

ವ|| ಅಂತುಶಂಕರಂಪ್ರತ್ಯಕ್ಷನಾದಸಮಯದಲ್ಲಿ|

ಕಂ|| ಇಳೆಬೆರಗಾಗುತ್ತಿರ್ಪೂ| ವೆಳಗರೆಯಲ್ಬಿಡದೆದಿವಿಜದುಂದುಭಿನ
ಭದೊ| ಳ್ಮೊಳಗೆಗಣತತಿಮಹೇಶನ| ಬಳಸಿನೊಳೊಲ್ದಾಡಿಪಾಡುತಿ
ರ್ದುತ್ತಾಗಳ್| |೮೮|

ಶಾ|| ಕ್ಷೀರಾಂಭೋನಿಧಿಫೇನಮಂತುಹಿನತುಲ್ಯೆರಾಂಶುವಂ(?) ಚಂ
ದ್ರನಂ| ತಾರಾನೀಕಮನುದ್ಧಪಾದದ ಮನಾದಂಗೆಲ್ದುವಿಭ್ರಾಜಿಪಾ|
ಗೌರೀವಲ್ಲಭನಂಗಕಾಂತಿಮುಸುಕಲ್ತನ್ನಾಮನಕಂಜಾದಿಗ| ಳ್ಸಾರೂಪ್ಯಂ
ಬಡೆದಂತೆಕಣ್ಗೆಸೆವುತಂದುದ್ವಾಪಗೇಹಾಂತ ದೊಳ್|

ವ|| ಅಂತುಶುದ್ಧಸ್ಫಟಿಕಸಂಕಾಶವಿಮಳನಪ್ಪಶಂಕರನನಿಜಮೂರ್ತಿ
ಯಂನೋಡಿ

ಕಂ|| ತುರುಗಿದಪುಳಕಪ್ರಕರಂ| ಮೆರೆಯಲ್ಕಾವಮಾನಕಂಜಮಹೇಶ್ವ
ರನಾ| ಕರೆಗೊರಲನಪದಕಮಲ| ಕ್ಕೆರಗಿಕರಂಭಕ್ತಿರಸದಿಮೆರೆದೊ
ರಗಿರ್ದಂ| |೮೯|

ವ|| ಅಂತುಭಕ್ತಿಯಿಂಮೆಯ್ಮರೆದೊರಗಿರ್ಪಾಗಳ್|

ಕಂ|| ವರವಂಶಕಂಜಮಹೇ| ಶ್ವರನಂಪಿಡಿದೆತ್ತಿಕ್ರೊತರ್ಪ ಕರುಣಾ
ಬ್ಧಿಯಪ| ರ್ಪರೆಗಳ್ಸುತ್ತಿದುವೆಂಬಂ| ತಿರೆನಿಜದಶಭುಜದಿನೆತ್ತಿದಂಗಿ
ಜೇಶಂ| |೯೦|

ಅಂತಪ್ಪಕೋಂಮೆಯ್ದುಡವಿ
ಎರೆವರ್ಗಿಷ್ಟವಗಿರಿಜೇ| ಶ್ವರನೆನಿಪೆನಗಿಂದುಬೇಡಿತಂ ಕೊಟ್ಟನೆನ|
ಲ್ಧರೆಯೊಳಗೀಭಕ್ತಂಗಾದೊರೆಯೆನುತಂನುಡಿದನಾಗಳಾಭೂತೇಶಂ
ನೆರೆಕೊಟ್ಟಕೂಸುಕುಲದಿಂ, ಪೊರಗೆಂಬೀನುಡಿಗೆಪುತ್ರಿಯೆಂದಲ್ಲ
ದನೇ| ಮೆರೆವಕುಮಾರಿಯಮುಡಿಯಂಕೊರೆದಿತ್ತಂಭಕ್ತನೆನುತುಮೀ
ಶಂಪೊಗಳ್ದಂ| |೯೧|

ವ|| ಅಂತಾಕಂತುಹರಂ ಪೊಗಳ್ದುಕೊಂಡಾಡುತಿರ್ಪಾಗಳ್

ಕಂ|| ಪಿರಿದುಂವೃಷಭಪತಾಕಂ| ಜರಸತುಳ್ದೋತ್ಸವದಿದೇವದುಂದು
ಭಿಮೊಳಗ| ಲ್ಸುರಕಾಮಿನಿಯರ್ನ ರ್ತಿಸು|ತಿರೆರತ್ನವಿಮಾನವಿರದೆಬಂ
ದುತ್ತಾಗಳ್|| |೯೨|

ವ॥ ಆಸಮಯದೊಳ್ಶಂಕರಂ ಪರಮಕರುಣದಿಂ ತದ್ದಂಪತಿ ಗಳಿಡೆ ಗೇಳ್ತಂದು॥

ಚಂ। ಪಿರಿದನುರಾಗದಿಂ ಮುಡಿಯನಿತ್ತು ಕುಮಾರಿಗೆಮುನ್ನಿನಂತೆ ಬಂಧುರಕರಮಿರ್ಪನಂ ಶಿರದೊಳಾತ್ಮಕರಾಬ್ಜವನಿಟ್ಟು ನಿನ್ನವಂವ ರನೆನಿಪೀನರೇಂದ್ರ ಸುತನಂಘರೆಬಣ್ಣಿಸೆಮುಂದೆ ತಾರಭೂಧರಶಿರದೊ ಯ್ದುವೋಕ್ಷಪದ ವೀವೆನೆನುತ್ತುಸಿರ್ದಂ ಮಹೇಶ್ವರಂ। ॥೯೫

ವ॥ ಅಂತೆಯ್ದಿ ತನ್ಮಾನಕಂಜ ಮಾಹೇಶ್ವರಂಬೆರಸುಗಿರಿಜಾರಮಣಂ ನಂದಿನಾಥಮುಖ್ಯಪ್ರ ಮಥರ್ಗ ಗಳಲೊಡ್ಡೋ ಲಗಂಗೊಟ್ಟುಪರ ಮೋತ್ಸಾಹದಿಂದಿಂತೆಂದಂ॥

ಕಂ॥ ಭವಮಾಲೆಯಬಳ್ಳಿಯುಮೂ। ಲವನರಿವಂತರಿದುಮುಗಳಮುಡಿ ಗೊಟ್ಟನೆನೆ। ಲ್ಭುವನದೊಳಿಂತಿವಗಾರ್ಸದೃ। ಶವೆನುತ್ತಂಶಂಭುನಂದಿ ನಾಥಂಗೆಂದಂ ೯೬॥

ವ। ಎಂದಿಂದುಧರಂಮಾನಕಂಜನನಾನಂದದಿಂಕೊಂಡಾಡುತ್ತಾಗಳ್

ಕಂ। ವರಮುನಿತತಿನುತಗೆಯ್ಯ್। ಲ್ಕರುಣದಿನಾಮಾನಕಂಜಗತು ಳೋತ್ಸವದಿಂ। ನಿರುಪಮಗಣಪದಮಂಶಂ। ಕರನೊಲಪಿಂದಿತ್ತುಮೆರೆ ದನಾಸ್ಥಾಯಿಕೆಯೊಳ್॥ ೯೭॥

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜ ರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪ ಶ್ರೀಸೋಮನಾ ಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪು ರಾತನರ ಚಾರಿತ್ರದೊಳ್ಮಾನಕಂಜರಕಥನಂ॥

ಅಷ್ಟಾದಶಾಶ್ವಾಸಂ



## ಹತ್ತೊಂಭತ್ತನೆಯ ಆಶ್ವಾಸಂ

### ಪಗಲ್ಚೋಳನಪಟ್ಟಾಭಿಷೇಕಂ

ಕಂ॥ ಮತ್ತಿತ್ತಲ್ಶಿವಭಕ್ತರ। ಮೊತ್ತದಿನಿಡಿದಿರ್ಪ ಮಾನಕಂಜಪ್ಪೊ
ಳಲೊಳ್। ಚಿತ್ತಜಹರನುರೆಚರಗಂ! ಬಿತ್ತರಿಸಿ ದುದರ್ಕೆ ನೃಪತಿ
ಯ್ಮರೆದಿರ್ದ೦॥ ॥೧॥
ಪರವಶದಿಂಚೋಳಮಹೀ। ಶರುಮುಖ್ಯಸಮಸ್ತಪರಿಜನಂಕರು
ಟ್ಟಂ। ತಿರೆನೆರೆನೆಟ್ಟಾಲಿಗಳಿಂ। ದಿರುತಿರ್ದುದುಬೆರಗುವಿಡಿದುಶಿವಮ
ಗೃಹದೊಳ್॥ ॥೨॥
ಹರನಾಡಿದನಾಟಕಮದು। ಧರಣಿಪಮುಖ್ಯರ್ಗೆಕನಸಿನಂತಾಗಿ
ಮತ್ತೆ ತ್ತಿರದೆಲ್ಲತ್ತಾಭಕ್ತನ। ಚರಣಂಬಿಡಿದೇಕೆಬಂದರ್ಕವೆಂದೆನು
ರ್ದರ್! ॥೩॥
ವ॥ ಅಂತುಭಕ್ತಿರಸೋದ್ರೇಕದಿಂ ನುಡಿವಭೂಪಾಳಮುಖ್ಯಪುರ
ನಪರಿಜನಕ್ಕೆ ಗಾಂಗೇಯಾಮಾತ್ಯನಿಂತೆಂದಂ!
ಕಂ। ಹರಭಕ್ತಮಾನಕಂಜ। ಗುರುಭಿದಕಿಂನೋಡುನಂಬಿಮಾಹೇ
ಶ್ವರರಂ। ಹರನೆಂದರ್ಚಿಸಿಸದ್ಗತಿ। ನಿರುತವೆನಲ್ಮಚ್ಚಿಮಂತ್ರಿಗಂಬಿ
ತೆಂದಂ॥ ॥೪॥
ಆವಳಮುಡಿಯೀವಂಗಾ ರೀವರನಾಮಾನಕಂಜ ಮಾಹೇಶಂಸು
ಭೂವಿನುತಪದಮನಿತ್ತಂ।ಭಾವೀಪೊಡೀಕುವರನರಸಿಗಾಪರ್ಶೆಕ್ಷೆ
ಯೊಳ್॥ ॥೫॥
ಶಿವಕನ್ನಿಕೆಯನಿಪೀಕಗೆ।ಯುವರಾಜನನೀರನೀಂಮಹಾಪ್ರೀತಿಯ
ನು। ತ್ಸವದಿಂಮಾಳ್ಪುದುನಮಗಾ। ಭವನೊಲಿವಂವರವನೀವನೆಂದಂ
ಭೂಪಂ! ॥೬॥
ವ। ಎಂದುಯುವರಾಜನಪ್ಪಪಗಲ್ಚೋಳಂ ।ಗೆತತ್ಸೋಮಪ।ಭಾಷೆ
ವಿಯುಂಪ್ರೀತಿಯಿಂ ನಿರವಿಸಿಕೊಟ್ಟು ಮತ್ತೆ ಮಾಂಗಲ್ಯಮಾದನಂತರ
ಕಂ॥ ಒಂದುದಿನದಿಂಬಳಿಪರಮಾ। ನಂದದಿನಾಕುವರನಾತ್ಮರಮಣಿ
ಸಮೇತಂ। ಬಂದು ...ನೆ ಮರೆವಸಜ್ಜೆ...

ಯಾಂಪ್ರೋಕ್ಷ್ಯಂ। ॥೭॥

ಅಂತುಪ್ರೋಕ್ಷ್ಯ

ಪೊಸರಂಗದಪರಿಯಂಕಂ । ಮಿಸುಪಕೌಪೌಡುಡೆಮರಾಳತಲ್ಪಂಸಿತಸ। ದ್ವಸನದಿಪಚ್ಚಪಡಿಸಿರಾ। ಜಿಸುತಿರೆಕಾಳ್ಪಿರ್ದನಬಲೆವೆರಸಾಕುಪರಂ॥ ।೮॥

ಗಡಣದಕೆಳದಿಯರಾಗ। ಳ್ಕುಡುನೀಂನಲ್ಲಂಗೆಹಿಮದತಾಂಬೂಲಮನೆಂ। ದೊಡೆಪಘುಮೆಲ್ಲನೆವರನಂ। ಕಡೆಗಣ್ಣಿಂನೋಡಿಹರುಷಪುಳಕಿತೆಯಾದಳ್॥ ॥೯॥

ಉಂಗುರಮನೀಕ್ಷಿಪನುಖಿಂ । ದಂಗನೆಯುಂಗುಲಿಯ ನೋಪನೊಳಖಿಂಪಿಡಿದಾ । ಭೃಂಗಿಗೆಮೆಲ್ಲನೆಸಖಿಯು । ಪಿಂಗಲ್ಕವರೊಡನೆಲಜ್ಜಿತೆರಳಿತಾತ್ತಗಳ್॥ ।೧೦॥

ಇನಿಯನತವಕಮನರಿದಂ । ಗನೆಮನದೊಳ್ಬೆರಸಿಘರ್ಮವಾಷ್ಪಕಣಜಾಳಂ। ಜನಿಯಿಸೆಸೋಂಕಿನಭರದಿಂ ! ತನುಕಂಪಿಸಿನಿವ್ವಪುಖದಿನಸುನಗುತಿರ್ದಳ್॥ ॥೧೧॥

ಮ। ತನುವಂಮೆಲ್ಲನೆಸೋಂಕಿಬಿಟ್ಟ ಪೋಲಿಗಳ್ತದ್ವಕ್ಷದೊಳ್ಪೆರ್ಚಪೆಂಡೆಕೆಬಾಹದ್ವಯದಿಂಪಮುಪ್ಪಿತ ಪಕಂಕೈಗಣ್ಮಿಮಂದಸ್ಮಿತಾ। ನನಮಂಚುಂ ಬಿಸಿಘರ್ಮವಾರಿತುಳುಕಲ್ಕ್ರೀಡಾರಸಂ ಪೀಗಲಂಗನೆಯೊಳಾತ್ತಂನವಸಂ ಪ್ರಯೋಗಸುಖಮಂರಾಜಾತ್ಮಜಂ ತಾಳ್ದಿದಂ। ॥೧೨।

ಕಂ॥ ಜಲಜದಿಮಧುಮಿಂಪೆಲ್ದಂ।' ಗಳೆನಳಿಜೋಗಿಳೆಚಕೋರಿಗಳ್ಮದದೊಧವಂ। ತಳೆವಂದದಿರತಿಸುಖದಿಂ। ಕಳೆವಡೆದೊಪ್ಪಿರ್ದರೊಲ್ದತನ್ಮಿಥುನಂಗಳ್॥ ।೧೩॥

ಇದುದಿವಸಂತಿಂಗಳಿದೆಂ। ಬುದನರಿಯದೆಸುರತದಂತವಾದತ್ತೊಂದೆಸಲೀ।ಯುಡೆವಾಗುಳ್ದಿಚ್ಚರಿಸುವತ। ತ್ಸದತಿಯಸಂಭೋಗಸುಖಮನಾಂತಂಪುವರಂ॥ ॥೧೪।

ಚಂ। ಸರಸದಬೈಗುಳೊರ್ಮೆ ಪರಿರಂಭದವೆಚ್ಚದಲೀಲೆಯೊರ್ಮೆ ಪೀವರಕುಚಮರ್ದನ ಪ್ರಿಯಮದೊರ್ಮೆ ನಖಾಂಕಿತದೊರ್ಮೆ ಚುಂಬನೋ । ತ್ಕರದವಿಳಾಸವೊರ್ಮೆ ಕರಣಂ ಗಳಪಲ್ಲಟವೊರ್ಮೆತಪ್ಪೊಳೊ । ಪ್ಪಿರೆನಿಜಕಾಂತ[illegible]ದನಾಕುವರಂ ಪರಮಾನುರಾಗದಿಂ॥

ವ॥ ಅಂತುತತ್ಕಾಂತೆಯೊಳ್ಸುರತಕೇಳೀವಿನೋದಂ ಗಳಿಂಸರಸವಚ ನರಚನೆಗಳಿಂ ಸಂಗೀತಸಾಹಿತ್ಯ ಪ್ರಸಂಗಂಗಳಿಂಪೊತ್ತುಗಳೆವುತ್ತಿರಲಿ ತ್ತಲೊಂದುದಿವಸಂ ವಿಕ್ರಮಚೋಳರಾಜೇಂದ್ರಂ ನಿಜರಾಜಧಾನಿಗೆ ಪೋಗಲ್ವೇಳ್ಕೆಂದುಯುವರಾಜನಂಬರಿಸಿಪೊರಮಡುವುದೆಂದುಪೇಳಲ್ಕಾ ಗಳ್॥ ॥೧೮॥

ಕಂ॥ ನೆಲವಿಂಯುವರಾಜಂತ। ಲ್ಲಲನೆಯುಬೆಂಬಳಿಯೊಳೋತುನಡೆವ ಸಖೀನಂ। ಕುಳವುಂಪೊರಮ ಡಿಸುವುದೆಂ। ದೊಲವಿಂಸಾವಾಸಿಗಳ್ಗೆ ಬೆಸಸಲ್ಕಾಗಳ್॥ ೧೯

ವ॥ ಅಂತುಸಾವಾಸಿಗಳನಿಯೋಗದಿಂ ಪೊರಮಟ್ಟು ಛತ್ರಚಾಮರ ದಡವಕೆಯುಕನ್ನಡಿಯು ಕಳಸದಪಡಿಗದಪಾವುಗೆಯುಮಜ್ಜನದ ವಿಜ್ಜಣೆ ಯುಸೆಜ್ಜೆಯುಬೋನದ ಕಜ್ಜಾಯುದಪರಿಯಾಣದ ಮುಡಿಯಿಕ್ಕುವವೊ ಲೆಗಟ್ಟುವತುಡುಗೆ ಗಳಂತೊಡಿಸುವಡಿಯೂ ಡುಪತೊಡೆದಟ್ಟುವಾರತಿ ಯನೆತ್ತುವನಿರಿಪಿಡಿದು ಡಿಸುವಘಟ್ಟಿಮುಗುಳ್ದು ವತುಷಾರೋದಕದನಾ ನಾವಿನಿಯೋಗದರೂಪಾತಿಶಯುಮಪ್ಪ ವಿಳಾಸಿನೀಜನಮುಂ

ಮತ್ತಂ॥ ಕವಿಗಮಕಿವಾದಿವಾಗ್ಮಿಗಾಯಕ .ವೈಣಿಕವಂಶಕಾರವಾ ರ್ದಂಗಿಕಾದಿರಸಿಕಸಮುದಯುಮುಂ ಪರಿಹಾಸವು ನೋಡರಿಪಮೂಕ ಬಧಿಕಥರ ಏಬ್ಬರಕುಜ್ಜವಾಮನ ಕಿರಾತಗಡುಳಜಡಕಂಜಾದಿರಂಜ ತನಿಕಾಯುಮುಂ ಕರಿತುರಗವರೂಥಂಜಿರಸಿಶಿಬಿಕಾಂದೋಳನಾದಿವಾ ಹನಸಮೂಹಮುಂ ಚಿತ್ರಚೇನಾಂಬರರತ್ನಾಭರಣ ಕನಕರೌಪ್ಯಭಾ ರಕಾಗೃರಪ್ಪಕಿಂಕರ ನಿಕರಮತಿಸಂಭ್ರಮದಿಂದೊಡನೇಳ್ತರಲ್ಮಸ್ನಪ ಹಿಳಾಸಮೇತಂ ಸಂತಸದಿಂವಿರಾಜಿತನಾಗಿ ನಿಜತಾತನೆಡೆಗೆಬರೆವರೆ

ಕಂ। ಬರೆಕಂಡಾಯುವರಾಜಂ। ಬೆರಸುಮಹಾಬಳಸಮೇತವತಿಭರ ದಿಂಭೀ। ಕರತರದಿಂರವಮುಣ್ಮ। ಲ್ಕರಿಯೂರಪುರಕ್ಕೆ ಚೋಳಭೂಪ ತಿತಳರ್ದ॥ ॥೨೦॥

ವ। ಅಂತುತಳರ್ದುನೆಳಲ್ನೀರ್ದಾಣಂ ಗಳೊಳ್ಬೀಡಂಬಿಡುತ್ತಂಕರಿ ಯೂರ್ಗೆಬಂದು

ಕಂ। ವರಬುಧರಪರಕೆಯಂತ। ತ್ಪುರನಾರೀಜನದಮಂಗಳಾರತಿಗಳ ನಾ। ದರಿಸುತ್ತಾಮಿಯಿಂತಂನಿಜ। ಪುರಮಂಪೊಕ್ಕು ತುಳಸುಖದಿನಿರ್ದಂ

ಚೋಳಂ| ||೧೮||

ವ|| ಅಂತುಕರಿಯೂರ ವಿಕ್ರಮಚೋಳರಾಯಂ ಪರಮಾನಂದಸುಖ
ದೊಳಿರ್ಪಲ್ಲಿ

ಉ|| ಒಂದುದಿನಂಮನೋಜಸರೂಪ ನೆನಿಪ್ಪಕುಮಾರನಾಗಳಾ|ನಂ
ದದಿನಾತ್ಮ ತಾತನಸಭಾಸದನಕ್ಕ ತಿಸಂಭ್ರಮಂಮಿಗ| ಲ್ಕಿಂದುವಿನಂತೆ
ಗುಜ್ವಲಿಪಸತ್ಕಳೆಗಳ್ಪೊರಪೊಣ್ಮು ತಿರ್ಪನಂ|ಮುಂದೆಸಮಸ್ತವಂದಿನಿ
ಕರಂ ಪೊಗಳುತ್ತಿರೆಬಂದನರ್ಥಿಯಿಂ|| ೧೯||

ವ| ಅಂತುಬಂದಾಸ್ಥಾನಮಂಟಪಮಂಪುಗುವಾಗಳ್

ಚಂ| ರಭಸದಿರಾಜಲೋಕವಿದ ರೇಳುತಿರಲ್ಕನವೊಲ್ದುಬಂದಿಳಾಪ್ರ
ಭುಗತಿಭಕ್ತಿಯಿಂಪೆ ರಗಿಪಾದಸಮೀಪದ ಪೀಠದಲ್ಲಿಸ|ದ್ವಿಭವಮನಾಂ
ತು ವಾಸವನಪಾರ್ಶ್ವದೊಳಿರ್ಪಜಯಂ ತನೆಂದದಿಂಸಭೆಗೆಸುರತ್ನದೀ
ಪವೆನಿಪಿಂತಿರಲೊಪ್ಪಿದನಾಕುಮಾರಕಂ|

ವ| ಅಂತೊಪ್ಪುವಕುಮಾರನ ವದನಾರವಿಂದಮಂನೋಡಿಸಂತೋ
ಷಾಬ್ಧಿಯೊಳೋಲಾಡಿ ವಿಕ್ರಮಚೋಳರಾಜಂ ಗಾಂಗೆಯಾಮಾತ್ಯ
ನೊಡನಿಂತೆಂದಂ|

ಮ|| ಅಧಟಂದಾಂತರಿಭೂಭುಜ ಪ್ರಕರಮಂಸಂಗ್ರಾಮದೊಳ್ಗೆಲ್ದು
ಶೌರ್ಯದಪೆಂಪ್ಪೋರ್ಜಿತಮಪ್ಪಭೂಭರ ಮುಮಂದೋರ್ದಂಡದೊ
ಳ್ತಾಳ್ದಸತ್ವದಪೆಂಪಾಯ್ತು ಕುಮಾರಕಂಗೆಘರದಿಂದಂಯೌವರಾಜ್ಯಾ
ಭಿಷೇಕ| ದಮಾಂಗಲ್ಯಮನಿಂದುಮಾಳ್ಪೆ ನೊಲವಿಂ ದೆಂದಂಮಹೀವಲ್ಲ
ಭಂ| ||೨೧||

ಕಂ| ಧರಣೀಭಾರಮನಿದನಾ:| ದರದಿಂಯುವರಾಜನಲ್ಲಿನಿರವಿಸಿಬಳಿ
ಕಾಂ| ಗಿರಿಜಾವರನಧ್ಯಾನದೊ| ಳಿರುತಿರ್ಪೆಂಸುಖದೊಳೆಂದುಭೂಪಂ
ನುಡಿದಂ| ||೨೨||

ವ| ಅಂತದಂಕೇಳ್ದು ತದ್ರಾಜಂಗೆ ಮಂತ್ರಿವರನಿಂತೆಂದಂ

ಕಂ|| ಒಡೆಯರ್ಪೇಳ್ದುದುಕಜ್ಜಂ| ಕಡುಚೆಲ್ವಂಕುವರನಧಿಕಧರ
ಣಿಯನೊಂದೇಕೊಡೆಯಿಂದಾಳ್ವಪೊಡರ್ಪಿದೆ| ಕಡುವುದುಯುವರಾ
ಜಪಟ್ಟದುತ್ಸವದೋದವಂ| |೨೩|

ವ| ಎಂದುಸಚಿವೋತ್ತಮನುಡಿಯ ವಿಕ್ರಮಚೋಳರಾಜೇಂದ್ರನಂತ

ತ್ಕಾರ್ಯಮಂ ಮನದೊಳ್ಕೈಕೊಂಡು ನಿಜಕುಮಾರನಪ್ಪ ಪಗಲ್ಗೋಳಿಂ
ಗಿಂತೆಂದಂ||

ಕಂ|| ಗುರುವಚನಮಲಂಘ್ಯಮದಾ| ಗಿರೆ ಕೇಳ್ವುದು ಕಂಡ ಸರ್ವಸ್ವ
ಣಿಮುಭರವುಂ | ಧರಿಯಿಸಿಸೀ ಸಿರಲಾಂಶಂ |ಕರಮೂರ್ತಿ ಧ್ಯಾನದಲ್ಲಿಸು
ಖದಿಂದಿರ್ಪಂ|| |೨೮|

ವ|| ಎಂದು ಜನಕಂ ನುಡಿಯುಲ್ಕೆ ತತ್ಕುಮಾರಂ ಕೈದಾವರೆಯುಂ ಮುಗಿದಿಂ
ತೆಂದಂ|

ಕಂ||ಧರೆಯಂ ತಾಳ್ವೊಡಹೀಶ್ವರ| ನೆರಡನೆಯೊಳ್ನೀ ವಡಲ್ಲದೆನ್ನಳವೇ
ಭೂ| ವರನಿಮ್ಮ ತನುಜನೆಂಬೀ | ವರಸತ್ವದಿ ಕೊಟ್ಟನಿಯಮಮಂತಾ
ಳ್ದಿರ್ಪಂ| |೨೯|

ಸ್ವಾಗತವೃತ್ತಂ| ದೇವರಾವಚಿಸನೀವುದದಂಮ | ಜ್ಜೀವದಂತೆಪರಿ
ಭಾವಿಸೆತೋರ್ಪಂ| ದೋವುಗೆಂದಿಟಮೆನುತ್ತೆ ಕುಮಾರಂ ಭಾವದಿಂ
ಜನಕನಾಜ್ಞೆಯನಾಂತಂ| |೩೦|

ವ| ಎಂದು ನಂದನಂ ಕೈಕೊಂಡುದರ್ಕಾನಂದ ಸಂದೋಹಂಮಿಕ್ಕು
ರಾಜೇಂದ್ರಂ ಸಚಿವೇಂದ್ರಂ ಬೆರಸು ಮಂಗಳಮಹೋತ್ಸಾಹಕಾರ್ಯಕ್ಕೆರಗಿ
ಸಲದು ಜ್ಯೋತಿಷ್ಕರಂ ಬರಿಸಿ ಪಟ್ಟಾಭಿಷೇಕಕ್ಕೆ ಶುಭದಿವಸಮಾವುದೆಂದು
ಬೆಸಗೊಳಲ್ಕಿಂದೇ ಶುಭ ಮುಹೂರ್ತಮೆಂದು ಪೇಳಲ್ಕೈಕೊಂಡಾಕ್ಷಣಂ
ಗೃಹಮಪತ್ತರನಂ ಕರೆದು ರಾಜಮಂದಿರಮನಲಂಕರಿಸಿ ತತ್ಸಮಯೋಚಿ
ತಮಪ್ಪ ಮಂಗಳೋಪಕರಣಂಗಳಂ ಸಮ ಕಟ್ಟುವೆಂದು ನಿರೂಪಿಸಲ್ಸ
ರಂಭದಿಂ ನೆಗಳುತ್ತಿರೆ ಮತ್ತಮಾಗಳ್

ಕಂ| ಎಲೆ ಸಚಿವ ಮುಂಪೆ ಧರಣೀ| ವಳಯಮನಾಳ್ವಲ್ಲಿ ದುರ್ಯಶಂಪೊರ್ದದ
ವೋ| ಲ್ಪಲೆ ತಿಳಿಪು ಸೂನುಗಂನಿ | ರ್ಮಳಬುದ್ಧಿಗಳಪ್ಪತೆರದಿನೆಂದಂಭೂ
ಪಂ|| |೩೧|

ವ|| ಎಂದು ನುಡಿದು ತದ್ಭೂಪಾಳನಾಜ್ಞೆಯಂ ಕೈಕೊಂಡು ಸವಿನಯ
ಕ್ಕೆಳ್ತಂದು ಮಂತ್ರೀಶ್ವರಂ ವಿನಯದಿಂದೆಲೆಯುವ ರಾಜನಾನಾನೀತಿಶಾ
ಸ್ತ್ರವಿಶಾರದ ನಪ್ಪನಿನಗೆ ಬುದ್ಧಿ ಪೇಳ್ದು ತಿಳಿಪುವುದಿಲ್ಲವಾದೊಡಂ ಪೇಳ್ವೆ
ನದನೋತು ಚಿತ್ತೈಪುದು|

ವೃ|| ನಿರಿಯಿಂದಂ ಕಮು ನೋಕ್ಕಿಮೆಯ್ಮ ರೆದುಪುಂದಂ ಕಾಣಿರ್ಪ

ರ್ಯಹೀ| ಶ್ವರರೆಂದೆಂಬುದುಸತ್ಯಮಲ್ಲದೊಡೆಜೀವಾಯಾವಥಾಕೆಂದು
ಮುಪ್ಪುರವೆಂದುಗ್ಗಡಿಸುತ್ತೆ ಪಜ್ಜೆಯಿಡುವಾಗಳ್ಸೇವಕಂ ಮುಂದೆನಿರ್ಭ
ರವೆಂದೆಚ್ಚರಿಸುತ್ತೆ ಪೋಪರೆನಲಾನೇನೆಂಬೆನಾಶ್ಚರ್ಯಮಂ| |೨೮||

ಕಂ|| ಗರಪೊರಲಿವಂತೆಪುಂದಿ | ರ್ದರನರಿಯದೆವಂದಿಸಲ್ಕೆನೋಡ
ಲ್ಕಿತ್ತೊಳ್ | ತ್ಕರಮಂನುಡಿಯಿಸದುಕ | ಮರೆದಿರುತಿರ್ಪರ್ಸಿರಿಯಗರ್ಬ
ದಿಂದುರ್ಬೀಶರ್||
||೨೯||

ಸಿರಿಯೆಂಬಸುರೆಯಸೊರ್ಕಿಂ| ಪಿರಿದುಂಪೊಯ್ಮ್ಕರೆದುಕಾಲವನರಿಯ
ದನಿಂದಾ| ಸುರದಿಂಪೊರೆಯುಳಿದೊಪ್ಪು | ತ್ತಿರವರಿಸದೆಮುಂದುಗಾಣದಿ
ರ್ಪಭೂಪರ್|
||೩೦|

ಶ್ರುತಲಕ್ಷಣಮಂಪರಸ| ದ್ಗತಿಯಂಸತ್ಯಮನುದಗ್ರಗುಣಮಂದಾ
ನೋ| ನ್ನತಿಯುಂನೂನಾಚಾರದ | ಮತಿಯಂಸಿರಿತೊರೆವಳ್ನೃಪಾಳ
ರ್ಗಳೆಯೊಳ್||
೩೧||

ಕನಕದಪೆಸರ್ಗೀಶಂನೆ| ಟ್ಟನೆದತ್ತೂರಮನೆತಾಳ್ದುಮರುಳಾದಂತಾ
ನೆನೆನಿಜಕನಕದದೆಸೆಯಿಂ | ಮನುಜಪರ್ರಾಳಪ್ಪರೆಂಬುದೊಂದಚ್ಚ
ರಿಯೇ!
೩೨|

ಅತಿಸಂಚಳೆಯತಿನಿಷ್ಕಳೆ| ಯತಿಲಾಭೋಪೇತೆಯತಿಮದೋದ್ಧತೆ
ಯತಿದು | ರ್ಮತಿಯುತೆಯೆನಿಪಾಶ್ರೀಯುಂ | ಕ್ಷಿತಿಪತಿಕೇಳ್ಕಡಿಕೊಂ
ಡತಾಮಿಂತಿರ್ಪರ್
|೩೩||

ನೆರೆಸನ್ನಿಪಾತವಡಸಿದ ! ತೆರದಿಂಕೇಳದೆಸಂಪುಂತುನೋಡದೆಪಿರಿ
ದೆ| ತ್ತರತತ್ತರದಿಂನುಡಿವು | ತೆಬೆರತಿರ್ಪರ್ಸಿರಿಯಮದದಿನರಸುಗಳಿಳೆ
ಯೊಳ್||
೩೪

ಬಿಡದಾಳನೊಡೆಯನೆನಿಕು | ತ್ತೊಡೆಯ ನನಾಳೆನಿಸುತಿಳಿಸುತಂನ
ಗುತಿರ್ಪ| ಕೆಡುಘೊತ್ತೆಯುಪ್ಪಲಕ್ಷ್ಮಿಯ | ವಿಡಂಬಮಂನಚ್ಚ ವರಸು
ಗಾವಿಲನಲ್ತೆ||
||೩೫||

ಅದೆಂತೆಂದೊಡೆ

ಸಿರಿಕನಸಿನಂತೆಜವ್ವನ| ದಿರವಮುಸುರಚಾಪದಂತೆತನುಬುದ್ಬುದದಂ
ತಿರೆಬಯಲೆಂಬುದನರಿಯದೆ|ಪರವಶನಪ್ಪರಸನೀಕ್ಷಿಸಲ್ಕಡಬರಸಂ||

ಇಳೆಯೆಂಬಹುರಿಯೆಂಬಳ್ | ಪಲಬರುವನುಭವಿಪಸೂಳೆಯಾರ್ಜಗ

ಜಗದೊಳ್| ನೆಲೆಗೊಳಲೆಲ್ಲೆಲ್ಲಿಯುಮಚಂಚಲೆಯುರ್ತನಗಾದರೆಂಬನ
ಪತಿಗಾಂಪಂ|| |೪೭|

ಪೊರಕಪೆನಾನಾವಿಧಿಯೊ| ಳ್ಪರಿಪುದುದೋರಕಿದೊಡೆಪ್ರೋಷಧ
ದಿಂದಂಬ್ಯೈ| ತಿರಿಸಲ್ಮಸಿಯಪ್ಪುದುಘನ | ವಿರದೆಂದುಂಬರಿದೆನಚ್ಚಿಕಿ
ಪಭೂರ್ಪರ್|| |೪೮|

ಅದುಕಾರಣವಿೂಸಿರಿಪ್ರೋ ! ಗದೆತನಗಿಪ್ಪಲ್ಲಿಸಕಲಸುಖಮಂಸತ್ಪಾ
ಣ್ಯದಪೆರ್ಚ್ಚಂನೆರೆಗಳಿಯಿಸು | ತೊದವಿದಕೀರ್ತಿಯೊಳೆಬಾಳ್ವನಾತನ
ಧನ್ಯಂ|| ೪೯

ಅದೆಂತೆಂದೊಡೆ

ಬೆಳಗಿದಕನ್ನಡಿಯೊಳೆರವಿ| ಯೊಳಪುಗುವಂತೆಲೆನರೇಂದ್ರಸುತನಿನ್ನಿ
ಯನಿ| ರ್ಮಳಹೃದಯದೊಳಾನೊಲವಿಂ| ತಿಳಿಪಿದಘನತರದಬುದ್ಧಿನಿ
ಲ್ದುದುಸಹಜಂ| ||೫೦||

ಪರಕಿಪೊಡವಿವೇಕಿಗಳ | ಪ್ಪರಸರ್ಗೆಹಿತೋಪದೇಶಮಂ ಪೇಳಲ್ಕಾ
ಸುರದಿನುರಿದೇಳ್ವರಲ್ಲದೆ| ನಿರುತಂನಿನ್ನಂತೆಕೇಳಬಲ್ಲವರೊಳರೇ||

ವ|| ಅನರಿಂದಾಂಪೇಳ್ವಲಕ್ಷ್ಮೀವಿಡಂಬನ ಮಧಿಕತರಭೂಪಾಲರ್ಗ
ಲ್ಲದೆನಿನ್ನಂಪೊರ್ದದಾಗಿಸದುಪದೇಶಮಂ ಕೈಕೊಂಡುಸಧೃತಿಯಿಂ
ಯುವರಾಜಪಟ್ಟಾಭಿಷೇಕಮಂ ತಾಳ್ದುಸಕಲರಾಜಕಾರ್ಯಧುರಂಧರನ
ಗಿಚತುಸ್ಸಮುದ್ರ ಮುದ್ರಿತ ಧರಿತ್ರಿಯನೇಕಛತ್ರದಿಂ ತಾಳ್ವುದಂತ
ಮಲ್ಲದೆಯುಂ

ಕಂ|| ಸಿರಿಯುವಿಡಂಬಕ್ಕೊಳಗಾ| ಗಿರದೆಲೆಯುವರಾಜವಿಮಳಕೀರ್ತಿ
ಸಮೇತಂ| ಪರಿಹಾಸಕ್ಕೊಳಗಾಗದೆ || ಪಿರಿಯರ್ಪ್ರೊಗಳ್ವಂತೆಬಾಳ್ವು
ದಾಚಂದ್ರಾರ್ಕಂ| |೫೧|

ವ|| ಎಂದುನುಡಿದಗಾಂಗೇಯಾಮಾತ್ಯನಮಧುರವಚನಸುಧಾರಸದಿಂ
ತೃಪ್ತನಾದಂತೆಯುಂನಿರ್ಮಳನಾ ದಂತೆಯುಂಪರಮಾ ನಂದಹೃದಯ
ನಾಗಿಪೇಳ್ದಸದುಪದೇಶಮಂಕೈಕೊಂಡಿರ್ಪಸಮಯದೊಳ್ಮೌಹೂರ್ತಿ
ಕರ್ಬಂದುಸುಮುಹೂರ್ತಂಸಾ ರ್ತಂದುದಿನ್ನೇಳಿಮ್ಬೆಂದುಬಿನ್ನಪಂ
ಗೆಯ್ಯಲ್ಕೆ ಸಂತೋಷಮನೆಯ್ದಿ ವಿಕ್ರಮಚೋಳ ರಾಜೇಂದ್ರಂನಿಜಕು
ಮಾರಂಗೆಪಟ್ಟಬಂಧಕ ಮಂಮಾಳ್ಪನೆಂದಾತ್ಸುಕ್ಯಂಮಿಕ್ಕತಿರಭಸದಿಂ

ಸೆಯಲ್ಕಾಸ್ಥಾನ ಮಂಟಪದಿಂದೇಳ್ವ ಗಳ್ನಾನಾ ವಿಧರ ತ್ನಖಚಿತ್ರಕು ಪಲಂಗಳ್ಗಂಡಮಂಡಳದೊಳ್ಪೊಳೆದಾಡೆಯುಂತಾರಾಹಾರಂಗಳ್ವಿಶಾಲವ ಕ್ಷಸ್ಥಳಂಗಳೊಳ್ನಲಿದಾಡೆಯುಂಝು ಣಝುಣಿಸುತ್ತೆಚರಣಂಗಳೊಳ್ತೊಂ ದೊಡರುಗಳುಲಿದಾಡೆ ಯುಂಪರಮೆ ಗಳ್ನರು ಗಂಪಿನಪ್ಪೂ ದ್ಭುರುಂಬಂಬಿ ಟ್ಬುಝುಂಕರಿಸುತ್ತೆ ನಭಕ್ಕೆ ನೆಗೆದಾಡೆಯುಂಮ ಹಾಸಂಭ್ರಮದಿಂದೊ ಡನೇಳ್ವಮಾಂಡಳಿಕದಂಡನಾಥ ಸಾಮಂತವರ್ಗದೊಳಂಕಂಕಣಝುಣ ತ್ಕೃತರವಂಗಳೆಸೆಯಲ್ಬೀಸುವಚಾಮರಗ್ರಾಹಿಣಿಯರೊಳಂ ಲೀಲೆಯಿಂ ದಡಿಯಿಡುವವೇಳೆಯೊಳ್ಸಿಂಜಿತಂಗುಡುವತಿತ್ನರಂಜಿತಮಂಜೀರಕೋಪ ತಾಂಘ್ರಿಗಳವಿಲಾಸಮಂಮೆರೆವವಿಲಾಸ ನೀಜನಂಗಳೊಳಂ ಕಮನೀಯ ರೂಪಾತಿಶಯಧರರಾಜಕುಮಾರ ಸಂದೋಹ ಕಿರೀಟಮಾಣಿಕ್ಯ ಮಾಲಾ ಪ್ರಭಾಪಟಲದೊಳಂಗೊಂದಣದಿನಡೆವಸಡಗರಕ್ಕೆ ಬೆಚ್ಚಿ ಪಳುಕಿನನೆಲೆಗ ಟ್ಟನೊಳ್ ಕೆದರಿದಪೂವಲ್ಲಿಗಳಂ ಬಿಟ್ಟುಮೇಲಕ್ಕೆರ್ದ ಚಂಚಚ್ಚಂಚ ರೀಕ ಸಂಚೆಯದಿಂ ಚರಂಗಳೊಳಂ ಮುಂದೆನಿಂದುಗುಣಿ ವೃಂದಮಂ ಪೊಗಳ್ವಮಂಗಳಪಾಠ| ಕಪ್ರಕರಧ್ವಾನ ದೊಳಂಜಯ ಜೀಯಪ್ಪಾ ಯವಧಾರೆಂದಡಿಗಡಿಗುಗ್ಘಡಿಪ ಪದವರರಕಳಕಳದೊಳ್ಬಂದ ನೇಕರಾ ಜಲೋಕಂಬೆರಸೊಳಗಂ ಪೊಕ್ಕುನೋಳ್ಪನ್ನೆಗಮಲ್ಲಿ||

ಕಂ| ಪರಿಪರಿಯಚಿತ್ರಪತ್ರೋ| ತ್ಕರಮೆಯ್ದಲ್ಗೃಹಮಪತ್ತರಂಮುಂ ಸಮೆದಾ| ಸರುಚಿರರತ್ನಸಮೂಹದಿ | ವಿರಚಿಸಿದ ಭಿಷೇಕಮಂಟಪಂಕ ರಮೆಸೆಗುಂ|| ||೪೨||

ವ|| ಅಂತೆಸೆವಭಿಷೇಕಮಂಟಪ ದೊಳ್ವಕ್ರಮುಚೋಳ ರಾಜೇಂದ್ರಂ ನಿಜಪುತ್ರನಂ ಮೂರ್ತಿಗೊಳಿಸಿಭೂರಿಭೇರಿಮುರಜಡಿಂಡಿ ಮಕಹಳಪ ಟಹಪಟುರವಂಗಳೆಸೆಯಲ್ಮಂಗಳ ಪೀಠಮನಳಂಕರಿಸಿಮೆಂದುನಿಜಸೌಂ ದರೀ ಸಂದೋಹಕ್ಕೆನಿಯಮಿಸಲ್ಕಾಗಳ್

ಚಂ|| ಪರಸಿಕುಮಾರಮಸ್ತಕಮನೊತ್ತಿ ನಖಾಗ್ರದಿಪಿಕ್ಕೆಬಳ್ಕಿಕೇ| ಕರರುಚಿಪರ್ಬಿ ಘಮರ್ಜಜಲ ಮುಣ್ಕೆಕುರುಳ್ನಿಮಿರ್ದಾಡೆಕೂಡೆಪೀ|ವ ರಕುಚಮಂಡಲಂ ತೊನೆಯೆಹಸ್ತ ಯುಗಂಗಳಲಾಘವಂ ಪೊದ್ದೆರಚೆ ಕ್ಕುರಂಗಳಂ ಸುದತಿಪೂಸಿದಳೊಲ್ದು ಸುಗಂಧತೈಲಮಂ|| ||೪೪||

ಚಂ|| ಚಳಧಳಕಾಲಿಯುಂಕೆಂಪಕೆ ಸೊತ್ತಿಸಮುಜ್ವಳರತ್ನ ಕಂಕ

ಣಂ| ಗಳನಿರಪೇರ ನೂಂಕಿನಿರಿಯಂ ಪರಜಾನುಗಳಿಂದಿರ್ಪಂಕಿಮಂ ೯
ಳಮಮವಾರಿಯಿಂ ಮೆರೆವಹೊಂಗಳಸಂಗಳನಾತ್ಮ ಹಸ್ತದೊಳ್ತಳೆದ
ಷೇಕದೇವತೆಯರಂತಿರೆ ಕಾಂತಿಯರೊಪ್ಪಿತೊಪ್ಪಿದರ್|| |೮೫|
ಕಂ|| ಶಶಿಕರದಿಂನೀರೇರುವ! ಶಶಿಕಾಂತ ಪ್ರತಿಮೆಯಂದದಿಂಘವರ್ಷಾ
ಬು| ಪ್ರಶಮಿತತಿಲಕಮದಾಗಿರೆ| ಶಶಿಮುಖಿಮಳಯು ಜದಜಳಮನೊ
ವಿಂಸುರಿದಳ್| |೮೬|
ವ| ಅಂತುಮಂಗಳಾಭಿಷೇಕಸ್ನಾನ ರಸದಿಂತೊಯ್ದು ನೆನಲ್ಕಾಗಳ
ಕಂ|| ಜಳರುಹಮುಖಿಯೊರ್ಬಳ್ಪೊಂ| ಗಳಸದಿಕುವ ತಂಗೆಘುಸೃಣ
ಜಳಮಂಸುರಿದಳ್ |೮೭|
ನಿರುಪಮವಸಂತರಾಜನ|ವರಭೋಗಶ್ರೀಯುತೆರ ದಿನಖಿಳಸುಗಂಧೋ
ತ್ಕರದಿಂಪೊರೆದೋರ್ಪಂಗನೆ 1 ಧರಣಿಪತನಯಂ ಗೆಸುರಭಿಜಳಮಂ
ಸುರಿದಳ್|| |೮೮|
ಅಂತುಮಂಗಳಾಭಿಷೇಕಂಗೆಯ್ದು ನಂತರಂ
ಸುರುಚಿರ ದುಕುಲಧಿರತ್ನಾ| ಭರಣಂಗಳನುಟ್ಟುತೊಟ್ಟು ಸೃಗ್ವ
ಯಲೊಡಂ| ವರಸಚಿವಂಕೈಗುಡೆಬಂ | ದರಸುಮಗಂ ಸಿಂಹಪೀಠದೊ
ಳ್ಕುಳ್ಳಿರ್ದಂ|| |೮೯|
ಆಸಮಯದೊಳ್|
ಉ|| ದುಂದುಭಿನಿಸ್ವನಂನೆಗಳೆಗಾಯಕ ಗೀತರವಂಗವುಪ್ಪೆಸಾನಂ
ದದಿವಿಪ್ರರುಚ್ಛರಿಪವೇದ ನಿನಾದಗಳಿಂದಮಾನಿನೀ ವೃಂದದಮಂಗಳಾ
ರತಿಗಳೆತ್ತೆಮಹೀಪತಿತನ್ನ ನಂದನಂ | ಗಂದನುರಾಗ ದಿಂಪರಸಿಕಟ್ಟಿದ
ನೊಲ್ದಧಿರಾಜಪಟ್ಟಮಂ|| ||೯೦|
ಅಲ್ಲಿಂಬಳಿಯಂ
ಕಂ|| ಕರಿಕುಳಮಂಹರಿಚಯಮಂ| ವರೂಥತತಿಯಂನಟೌಘಮಂ
ಕೋಶಮನು| ರ್ವರೆಯಂನಿಜಸೂನುಗೆವಿಭು| ನಿರವಿಸಿತಾನಧಿಕಹ
ರುಷಮಂತಳೆದಿರ್ದಂ|| |೯೧|
ತತ್ಸಮಯದೊಳ್
ಕಂ|| ನರೆತೋರಿದವರನುಳಿವ| ತರ್ಪರುಣಿಯರೆಂದೆಂಬರದುವೆಸತ್ಯ
ತದಪ್ಪು| ವರನಂಬಟ್ಟಂತಾಶ್ರೀ| ಭವನಿಂ...ನಲ್ಲಿಗೆಯ್ದೆ ವಳ

ಗಳ್‌|| |೫೨||

ಅಂತೆಯಿರ್ದ್ದ ರಾಜ್ಯಶ್ರೀಯಂ ತಾಳ್ದಾ ಚೋಳಮಹಿಪನಿಂದಂ ವಿಭುನಿಷ್ಟಿಂತತೆಯಂ ತಾಳ್ದಂತಾಂ| ಕಂತುಹರಧ್ಯಾನ ಪಲ್ಲಿ ಸುಖದಿಂದಿರ್ದಂ||

ಇತ್ತಲ್‌

ಪಿತನಾಜ್ಞೆಯಿಂದ ಪೂಗಳ್ಗೆ ಇರುಗೆ ಭುಜದಗ್ರದಲ್ಲಿ ಕೇಯೂರಮನಾಂ| ತತಿರಂಜಿಪಂದದಿಂತತ್‌| ಕ್ಷಿತಿಯಂತ ಚೋಳನೃಪತಿತಾಳ್ದಿ ಸೆದಿರ್ದಂ|

ಪರಮುಖದೊಳ್‌ ವಾಕ್ಶ್ರೀ ಪೀರುರದೊಳ್ ಮಿಗೆ ಚಿರತೆ ವೆತ್ತ ರಾಜ್ಯಶ್ರೀಯುಂ| ವರಭುಜದೊಳ್ ಜಯಶ್ರೀ | ಸಿರುತೇನೆ ಲಸಿತ ವಿರಾಜಿ ಪಂತ ಚೋಳಂ ೫೩||

ವ|| ಅಂತು ಸಕಲ ಭೂಭಾರಮಂ ತಾಳ್ದು ಸತ್ಪ್ರತಾಪದಿಂ ಚಿರತರ ಮಪ್ಪೇಕಬುದ್ಧಿಯಿಂ ಮನದೊಳ್ದೃಢೀಕರಿಸಿಯುಂ ಕರ್ತವ್ಯಮಕರ್ತವ್ಯಮೆಂಬ ದ್ವಿತೀಯಮನರಿದು ಕಾರ್ಯಮಂ ಪ್ರವರ್ತಿಸಿಯುಂ ಶತ್ರುಮಿತ್ರೋದಾಸೀನರೆಂಬ ತ್ರಿವರ್ಗಮಂ ಸಮೀಕರಿಸಿಯುಂ ತ್ಯಾಗಸತ್ಯಶೌರ್ಯಮೆಂಬ ಮಹಾಗುಣತ್ರಯಮನಂಗೀಕರಿಸಿಯುಂ ಉತ್ಸಾಹಪ್ರಭು ಮಂತ್ರಮೆಂಬ ಶಕ್ತಿತ್ರಯಮನಲಂಕರಿಸಿಯುಂ ಸಾಮದಾನಭೇದದಂಡಮೆಂಬುಪಾಯ ಚತುಷ್ಕಮಂ ತನ್ನೊಳಳವಡಿಸಿಯುಂ ಶಬ್ದಸ್ಪರ್ಶರೂಪರಸಗಂಧಮೆಂಬ ಪಂಚೇಂದ್ರಿಯವನೊತ್ತರಿಸಿಯುಂ ಮಾತಾಪಿತಾಗ್ನಿ ಗುರುದೈವಮೆಂಬ ಪಂಚಗುರು ಪರಿಚರ್ಯಾತತ್ಪರನಾಗಿಯುಂ ಸಂಧಿವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಮೆಂಬ ಷಡ್ಗುಣವಿಕಾರದನೆನಿಸಿಯುಂ ಕಾಮಕ್ರೋಧಲೋಭಮೋಹಮದಮತ್ಸರಮೆಂಬರಿಷಡ್ವರ್ಗಮನಥಃಕರಿಸಿಯುಂ ದ್ಯೂತಮದ್ಯಪಿಶಿತವೇಶ್ಯಾಪಾಪರ್ಧಿಚೌರ್ಯಪರದಾರಮೆಂಬ ಸಪ್ತವ್ಯಸನಮಂ ನಿರಾಕರಿಸಿಯುಂ ಅಭಯಸನ್ಮಾನದಾನಂಗಳಿಂ ಸದ್ಭೃತ್ಯವ್ರಾತಮಂ ಸ್ವೀಕರಿಸಿಯುಂ ನಿರ್ಧನರಪ್ಪನಾಥರಂ ನಿಜ ಮೂಲಧನದಿಂ ಪರಿತೋಷಿಸಿಯುಂ ಕಾರ್ಯಕಾರಣಮನರಿದು ಬುದ್ಧಿವೇಳ್ವ ಪ್ರಧಾನವರ್ಗದೊಳ್ ಸಂಭಾವಿಸಿಯುಂ ಸನ್ಮಾನದಾನಗುಣಂಗಳಿಂ ಪಲತೆರದ ನಿಯೋಗಿಗಳನನೇಕವ್ಯಾಪಾರದೊಳ್ನಿರವಿಸಿಯುಂ [illegible] ಯುಂ ಸಾಪ

ತ್ರಿಪುತ್ರದಾ ಯಾಧ್ಯ ಚಿಂತನಗೆ ನಿಶ್ಚಿಂತತೆಯಂ ವಿಚಾರಿಸಿಯುಂ ಸಮು ಚಿತಸನ್ಮಾನೋಪಚಾರಂಗಳಿಂದಂತಃಪು ರಮಂಪರಿ ತೋಷಂಬಡಿ ಯುಂ ಅಂತ. ಸಕಲಸಾಮ್ರಾಜ್ಯಮಂ ನಿಷ್ಕಂಟಕತ್ವದಿಂ ಪಾಲಿಸು ರ್ದನಂತುಮಲ್ಲದೆಯುಂ

ಕಂ|| ಚೋರಂಗಳ್ ದುಷ್ಟನೆನಿಸಿದ| ಕೋಣಂಗಳ್ ಶಿಷ್ಟನೆನಿಸಿತ್ತೋಕ್ಪ್ರಭು ದುಷದ್ರೋಹ್| ಘೋರವಾಣಿಂದಪು ನೃಪತಿಯೊಳ್ | ಕ್ರೂರತೆಯುಂ ಜಗಳೊಳ್ಮ್ಪುಂಜಪಡಿಪರ್ದ| |೫೯|

ಅತಿಶಯದಬಲ್ಪಿನಿಂದಂ|ಕ್ಷಿತಿಯರಿಯಲ್ಕಂಡುದುಷ್ಟನಿಗ್ರಹಶಿಷ್ಟ ಪ್ರ ತಿಪಾಲನೆಯುಂ ಮಾಡುತ್ತ್ತತುಳಿ ತಬಳಚೋಳರಾಜ ನೆಸೆವುತ್ತಿರ್ದಂ|

ಅದಲ್ಲದೆಯುಂ|

ಆವದಿನಂವಿಭುತನ್ನಯ| ಮಾವಂಭಕ್ತರ್ಗೆ ಬೇಡಿದುದನಿತ್ತು ವಿಂ| ಕೈವಲ್ಯಕನೆಯ್ದಿದನೆನು| ತಾವಗವಿಶ್ವೇಶ್ವರನಭಕ್ತರಂನಂಬಿರ್ದ ಪು| ಜಪದರುದ್ರಾಕ್ಷವಿಭೂತಿಯೆಂಬಿ ವನೊರಲ್ದಾಂತಿ ರ್ದಸದ್ಭಕ್ತ ರಂ| ಮೃಡರೂಪರ್ನಿಜಮೆಂದು ಭಾವಿಸುತ ಮತ್ಯಾನಂದ ಸಂದೋ ಹದಿಂ ಷೋಡಶೋಪಚಾರದಿಂ ಪೂಜಿಸುತ್ತ ಮತ್ಯಧಿಕಭಕ್ತ್ಯುದ್ರೇಕ ದಿಂಬೇಡಿದು ಕುಡುತಿರ್ದಂ ರಿಪುರಾಜಭಂಜನಪಗಲ್ಚೋಳಾಖ್ಯ ಭೂಪಾಲಕಂ| ಕಂ|' ಎಡೆಗುಡದೆಚೋಳಧರೆಯೊ| ಳ್ಮೃಡಭವನಂಗಳನನೇಕಮು ದಿನದಿನದೊಳ್ |ಬಡೆಸಮನಿಸುತೀನಿಯಮಂ|ಬಿಡಿದುಪಗಲ್ಚೋಳಭೂ ಪನೆಸೆವುತ್ತಿರ್ದಂ|| |೬೦|

ಅಂತೀನಿಯಮದಿಂದಿರ್ದಲ್ಲಿ

ಗದ್ಯ: ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜ ರಂಜಿತ ಪಾದಪಂಕಜಶ್ರೀಮತ್ಪುಲಿಗೆರೆ ಯಪುರಾಧಿಪ ಶ್ರೀಸೋಮನಾ ಥಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪು ರಾತನರ ಚಾರಿತ್ರದೊಳ್ಪಗಲ್ಚೋಳಭೂಪಾಳನ ಪಟ್ಟಾಭಿಷೇಕ ಸ್ಥಾನವರ್ಣನಂ

ಏಕೋನವಿಂಶತ್ಯಾಶ್ವಾಸಂ



## ಇಪ್ಪತ್ತನೇಆಶ್ವಾಸಂ

### ಕಂಗುಲಿಕಲಿಯಾಂಡರ ಕಥನಂ

ಜನನುತಶರಣರಕಿಂಕರ |ನೆನಿಪಮಹಾಭಕ್ತಿ ಕಂಗುಲಿಯಕಲಿಯಾಂಡನ|| ಗನುರಾಗದಿಗಣಪದವಿ| ತ್ತನುಪಮುಸೋಮೇಶನೊಲ್ದು ಪಾಕೆನಪ್ಮಂ| |೧||

ಚಂ| ಹರನನಿವಾಸಮೆಂದೆನಿಪಚೋಳಧರಿತ್ರಿಯೊಳುದ್ಘಕೀರ್ತಿಯಂ ಧರಿಯಿಸಿಪೆಂಪುವೆತ್ತುಧನಧಾನ್ಯ ಸಮೃದ್ಧಿಗಳಿಂದನೇಕ ಭಕ್ತರನಿಳಯಂಗಳಿಂ ಬಹುಳಲಿಂಗನಿಕೇತನ ಸಂಕುಳಂಗಳಿಂ ಕರಮೆವಿ ರಾಜಿಸುತ್ತಿ ಪದಪಿಂಕಡವೂರನಿಪೊಂದು ಸತ್ಪುರಂ] |೨

ಕಂ| ಪಿರಿದೆಸೆವಾಪುರದಾಣ್ಮಂ | ಹರಕಿಂಕರನೆನಿಸಿಕಂಗುಲಿಯಕಲಿಯಾಂಡಂ| ನೆರೆಧನಧಾನ್ಯಸಮೃದ್ಧಿಯಿ| ನುರುವಿ ಭವಮನಾಂತುಮೆರೆದನಾಕಡವೂರೊಳ್|| ||೩||

ನಯದಿಂಗುಗ್ಗಳಧೂಪದ | ನಿಯಮಂಬಿಡದಲ್ಲಿ ಕಂಗುಲಿಯ ಕಲಿಯಾಂಡರ್|ನಿಯಮಂತಾಳ್ದಿ ಮಹೇಶ್ವರಭ| ಕ್ತಿಯೊಳೊಲವಿಂದೊಪ್ಪುತಿರ್ದರದನೆಪೊಗಳ್ವೆಂ| ||೪||

ವ| ಅಂತೀಪರಿಯನಿಯಮಮಂಪಿಡಿದುಕಡವೂರಧಿಪತಿಯುಪ್ಪಶಿವಲಿಂಗಕ್ಕೆನಿಚ್ಚಂನಿಚ್ಚಮೆರಡು ತೊಲೆಧೂಪಮಂ ಸಮರ್ಪಿಸುತ್ತಂಬಂದ ಲಿಂಗವಂತಮಹೇಶ್ವರರ್ಗೆ ಬೆಸಕೆಯ್ವುತಿರುತಿರ್ದನಂತುಮಲ್ಲದೆಯುಂ

ಚಂ| ದಿನದಿನದಲ್ಲಿಲಿಂಗಕೆರಡುಂ ತೊಲೆಧೂಪಮನರ್ಪಿಸುತ್ತಿರಲ್ಘನರಜತಾದ್ರಿಯಂಮುಸುಕೆ ಶೈಲಜೆಮುಖ್ಯಗಣಂಗಳೆಯ್ದಿಕಂಪಿನಸೊಗಸಿಂಗೆಮೆಚ್ಚಿ ತಲೆದೂಗಲಿಳಾತಳದಲ್ಲಿ ಕೀರ್ತಿವೆತ್ತನನುಪಮ ಭಕ್ತನೀ ನಿಯಮಮಂಪಿಡಿದಿರ್ಪ ನುದಾರವೃತ್ತಿಯೊಳ್| |೫|

ಕಂ|| ಹರಪೂಜೆಗೆಯ್ವುತಿಂತೀ | ಪರಿಯಿಂದಂಪಲವುವತ್ಸರಂಭಕ್ತಿಯಿ ಗ| ಳ್ವರಧೂಪನಿಯಮಮಂಬಿಡದಿರುತಿರ್ದಂಕರೂರ್ತರ್ ಕಂಗಲಿಯಕಲಿಯಾಂಡಂ| |೬|

ದಿನದಿನದೊಳ್ಪ್ರಪಕ್ಷಂ| ಧನಮೆಲ್ಲಂತೀರೆವೃತ್ತಿ ವರ್ತನೆಗಳ್ನಿ! ಟ್ಟನೆ

ತೀರೆಧೀರತನದಿಂ| ಮನೆವನಿತಾಂತೀರದಿರ್ದನಂತಾ ಭಕ್ತಂ|| ||೭
ವ|| ಅಂತೀಪರಿಯಲ್ಲಿಗುಗ್ಗಳಧೂಪದನಿಯಮಮಂ ಪಿಡಿದಿರ್ಪಕೆಂಗು
ಲಿಯಕಲಿಯಾಂಡರ ಮನಮನೊರದು ನೋಪ ಲ್ಕೆಂದಿಂಗು ಧರಂಬ
ತನಮಂಪತ್ತಿಸೆ||
ಕಂ| ಪರಿಕಿಪೊಡೆಬಡತನಂಪ। ತ್ತಿರೆನಿಯಮದಧೂಪಕರ್ಥಮದು
ದೊರಕದಿರಲ್| ಪಿರಿದುಪ್ಪವಾಸಂಬಡುತಾ| ದರದಿಂಘಂದಿಂದ ವಿದ
ನಾಶಿವಭಕ್ತಂ| ||೮
ಪಲವುಂಕೆಲವುಪವಾಸಂ|ಸಲೆಪತ್ತೆತೀಲ್ಕೆಲಿಂಗನಿಯಮದಧೂಪಕ್ಕೊ
ಲವಿಂಘನಧನಮಂಘಳಿ || ಸಲೆಂದುಪೊರಮಟ್ಟನಾತ್ಮಪುರಮಂಭಕ್ತಂ
ವ| ಅಂತುಪೊರಮಟ್ಟುಕಂಗುಲಿಯ ಕಲಿಯಾಂಡಂನಾನಾಶಿವಪುರಂ
ಗಳಂಪರಮಾನುರಾಗದಿಂನೋಡುತ್ತಂ ತಿರಿಪಿನಂಡನಮೆಂಬಪುರಕ್ಕೆಬಂ
ದಿರ್ದನ್ನೆಗಂ||
ತರಳವೃತ್ತಂ| ತಿರಿಪಿನಂಡಪುರಾಂತದೊಳ್ಕಲಿಚೋಳಭೂಪತಿನಿರ್ಮಿ
ಸಿಂ ಪರಶಿವಾಲಯಮೊಂದನರ್ಥಿಮಿಗಲ್ಕೆ ಬಂಧುರಕಾಂಚನೋತ್ಕ
ರದಿನಿರ್ಮಿಸೆನೋಡಲುತ್ತರ ದಿಗ್ವಿಭಾಗಕೆಲಿಂಗಮಾ ಸ್ವರದೆಕೊಂ
ರೆಕಂಡುಚಿಂತಿಸಿಬಾತಿಯಂ ನೆರೆತಾಳ್ದಿದಂ| ||೧೧
ವ|| ಅಂತುಖತಿ ಯಂತಾಳ್ದಿಂತಪ್ಪದಿ ವ್ಯಲಿಂಗಂಕೊಂಕಿರ್ಪ ದಾದ
ಕಟೆನುತ್ತೆಡಬಲ ನನಗುಳ್ಳ ಹಾ ರೆಯಂದೊತ್ತಿ ನೋಡಲ್ಮಿಡುಂಕ
ಪುದಂಪಗಲ್ಚೋಳರಾಜಂ ಕಂಪಚ್ಚರಿವಟ್ಟಾಸಮಯದೊಳ್||
ಕಂ| ಪೊಸಹಜ್ಜಗಳಿಂಲಿಂಗಮ| ನಸಪಸದಿಂಸುತ್ತಿಮೂರುಘಟೆಯಾ
ನೆಗಳಿಂ | ಮಸಗಿಕಲಿಚೋಳವಿಭುತೆಗೆ | ಯಿಸೆದಿಟದಿಟಯೆನುತೆಪರಿ
ದುಮುಗ್ಗಿದುವಾಗಳ್|| ||೧೨
ಅಂತದನೀಕ್ಷಿಸಿಕಲಿಚೋ| ಳಂತನ್ನಯಮಂತ್ರಿಗೆಂದನಕಟಕಲಿ
ದೆಂ| ದುಂತೆರಳದಚಲಲಿಂಗವ|| ನಿಂತಲ್ಲಾಡಿಸುವೆ ನೆಂಬನಾಂಮದು
ಳಲ್ತೇ|| ||೧೩
ಎಂದುಮತ್ತಮಿಂತೆಂದಂ||
ವ|| ಹರಿಬೊಮ್ಮಾದಿಗಳಸಾಧ್ಯಮಪ್ಪ ಶಿವಲಿಂಗಮನಾಂಸ್ಥೈತಿರಿಪಿನ
ದೆಂಬುದೆನ್ನಳಪಲ್ಲದೆ ದಕ್ಷೆ ... ಮಮಂಕಂಡನಗೇ

ಚಂ॥ ಕರೆದೆಡೆಬರ್ಪನಾಲಯದ ಬಾಗಿಲೊಳಿರ್ಪನಳುಂಬದಿಂ ಕರಾಂ। ಬುರುಹದೊಳಿರ್ಪ ನಾಡರದೆ ಬೆಂಬಳಿಯೊಳ್ಪರುತಿರ್ಪ ನದ್ರಿಜಾವರ ನೆನಲಿಂತು ಭಕ್ತರೆಸಮರ್ಥರವರ್ಗಳ ಕೈಗಳಿಂದವಿೂ। ವರಶಿವಲಿಂ ಗಮಂ ಸಸಿನೆಗೆಯ್ಸುವೆನೆಂದೆನುತಿರ್ದ ನಾನೃಪಂ॥ ।೧೩।

ವ॥ ಅಂತುಪಗಲಿರ್ಪೞಿರಾಜಂ। ನಿಜಮಂತ್ರಿಯಪ್ಪಗಾಂಗೇಯನೊ ಳ್ನಿಶ್ಚಯಿಸಿ ನಾಲ್ಕುಂಗಾವಿದಪೊನ್ನಪೊಟ್ಟಣ ಮಂಶಿವದ್ವಾರದವಮುಂ ದೆಕಟ್ಟರಿಸಿಚರರಂಕರೆದು ತದ್ವೃತಾಂತಮಂಪೇಳ್ದು ನಿಯಾಮಿಸಲ್ಕಾ ಗಳ್॥

ಕಂ॥ ಹಿಂಗಡೆಬಡಗಲ್ತೊಂಕಿದ। ಲಿಂಗಮನುರತಿರ್ದಿಕಿತ್ತುಪೊಸ ಪೊಟ್ಟಣದೀ। ಪೊಂಗಳಪಡೆವ್ರಧೆನುತ್ತೆಜ। ನಂಗಳ್ಗೆಚರಾಳಿಸಾರುತಿ ರ್ದತ್ತಾಗಳ್ ।೧೪।

ವ॥ ಅಂತುಸಾರುವಚರರಮಾತಂ ಕೇಳ್ದು ಕಂಗುಲಿಯಕಲಿಯಾಂಡ ನನಂತಸಂಬಟ್ಟೆನ್ನ ಕಜ್ಜಮಾದುದೆನುತ್ತಂ ಪೊರಮಟ್ಟಾಗಳ್।

ಹರಿಣೀವೃತ್ತಂ॥ ಚಲದಿನಿಯಕ್ಕಾತ್ತಮಿಕ್ಕೆಂದು ನಿಲ್ಲದೆಬಂದುಕಂ। ಗುಲಿಯಕಲಿಯಾಂಡಂ ಕಂಡಾಲಿಂಗಗೇಹದಬಾಗಿಲೊಳ್। ಛಿಲ್ಕಲವು ಮಂಬಿಗಲ್ಕಟ್ಟಿರ್ದಪೊನ್ನವೊಟ್ಟಣವಂ ಕರಂನಲಿದುಪರಿದಂಥೂಪಕ್ಕಾ ಯ್ತೆಂದೆನುತತ್ತ್ರವೇಗದಿಂ॥ ।೧೫।

ವ॥ ಅಂತುತಾಂಪರಿದಪೊಟ್ಟಣದ ನಾಲ್ಕುಸಾವಿರಪೊಂಗಳಂಕೊಂಡಂ ಗಡಿಯಂ ಪೊಕ್ಕಾಗಳ್

ಕಂ। ತಳಃವಿಡಿಯುದೆತಂದಾಪೊಂ। ಗಳನೊಲವಿಂಕೊಟ್ಟುಕೊಂಡ ಕೊಂಡನಿಜನಿಯಮದಗುಗ್ಗುಳಧೂಪದಪೊರೆಗಟ್ಟಸಿ।ಥಳಿಲನೆಶಿವಮಂ ದಿರಕ್ಕೆಬಂದಂಭಕ್ತಂ। ।೧೬।

ವ।ಅಂತುಬಂದುತತ್ಶಿವಮಂದಿರಮಂಪೊಕ್ಕುಪರಮಾನುರಾಗದಿಂದಾ ಗಮೋಕ್ತಿಯಿಂ ವಿಭೂತಿರುದ್ರಾಕ್ಷಿಗಳಂ ತಾಳ್ದು ಮಾಶಿವಲಿಂಗಕ್ಕತು ಳಭಕ್ತಿಯಿಂ ನಾನಾಪುಷ್ಪಸಂಕುಳದಿಂ ದತ್ಯುನ್ನತಮಪ್ಪಪೂಜೆಯಂಕ ಟ್ಟಕಂಗುಲಿಯಕಲಿಯಾಂಡಂನೋಡಿಹಾರೈಸುತ್ತುಬಿನಕೊರ್ಬಿಪಲವುದಿ ನವನಿಯಮದ ಗುಗ್ಗುಳಧೂಪಮನೊಟ್ಟಪೊತ್ತಿಕ್ಕಿ ಬಹಳಪರಿಮಳವ ನವಧರಿಪುದುದೇನಾವೆನುತಂದಂಡ ಪ್ರಣತನಾಗಿನಿಂ ದಿರ್ದುಕರಕಮ

ಳಂಗಳಂ ಮುಗಿದಾಗಳ್‌||

ಕಂ| ಸ್ಮರಹರಪುರಹರತರಣಿಜ| ಹರಗಂಗಾಧರನಗಾತ್ಮಜಾವರಕ
ರುಣಾ| ಕರಶಶಿಶೇಖರಜಯುಜಯ| ಕರುಣಿಪುದೆನ್ನಿಷ್ಟಸಿದ್ಧಿಯಂಭೂ
ತೇಶಾ| |೧೬|

ವ| ಅಂತುನುತಿಗೆಯ್ದಾಗಳ್ ಶಿವಲಿಂಗಪ್ರಸಾದ ಮಂಕೊಂಡುಬಿ
ನಲಿವುತ್ತಂವಿಕ್ಕಪೊಂಗಳಂಶಿವಭಕ್ತರ್ಗಿತ್ತು ಮನಂತರಂತದ್ಭಕ್ತಂ
ಗದೆಸೆಗೆ ಕೊಂಕಿರ್ದಲಿಂಗಮಂನೋಡಿಸ ದ್ಭಕ್ತಿಯಿಂದೆ ಲಿದೇವಸಲವು
ದಿವಸವಿಂಪರಿಯೊಳ್ಪಾಗಿರಲ್ದೀವರಸಕೋಮಳಶರೀರಂ ನೋಯುತ್ತಿ
ನ್ನಭಕ್ತರ್ಗೆಸಸಿ ನವಾಗಿರ್ಪ ನೆಂಬುದಂತೋರಲಾ ಗದೆನುತ್ತಂ
ತ್ತದೊಳ್ಪರಿಶ್ರೇದಮಂ ತಾಳ್ದಾಗಳ್| |೧೭|

ಕಂ| ಪಳಿಯಂಬಿಗಿದುಟ್ಟತಿನಿ| ರ್ಮಳಭಸಿತಮನೊಪ್ಪಿದೇಹದು
ಳ್ತಳೆದಾಗ| ಳ್ಥಳಥಳಿಪಬೊಮ್ಮ ಹಾಸಮು ನಿಳೆಬೆದರಲ್ಕೊರಳೊಳ್
ಕೊಂಡಂಭಕ್ತಂ |೧೮|

ವ ಅಂತದಂಪಗ ಲ್ಕೊಳರಾಜ ನಚ್ಚರಿ ವಟ್ಟೀಕ್ಷಿ ಸುತ್ತಿರಲ್ಕಂ
ಲಿಯಕಲಿಯಾಂಡಂ ವೀರೋದ್ರೇಕಭಕ್ತಿಯಿಂ ಕೊಂಕಿದಲಿಂಗದಪ
ರಸಾದಾರ್ದರ್ಬೊಬ್ಬಿರಿವುತ್ತಾಗಳ್

ಸ| ಅಥಟಂದಂಪೊಸಪಟ್ಟು ನೂಲಗುಣದಿಂತಲ್ಲಿಂಗಮಂ ಸುತ್ತಿ
ಟ್ಟದತದ್ಗ್ರೀವದ ಬೊಮ್ಮಹಾಸಮನದಂ ಸ್ಯೈತಾಗೆನುತ್ತಾರ್ದಸ
ದಿದೊಡಾ ಕೊಂಕಿದ ಲಿಂಗವೊಲ್ದೊಡನೆ ಬಂದಂತಾಕ್ಷಣಂ ಚೆಲ್ವ
ವೆತ್ತಿರ್ದಿ ರ್ಪೊಳ್ಸೈತಿರೆ ಕಂಡು ಪೆರ್ಚಿನಲಿದಂ ತದ್ವೀರಮಾಹೇಶ್ವರಂ|
ಆಗಳ್

ಕಂ|| ತಳುವದೆಸ್ಯೈತಾಗೆಮಹೋ! ತ್ಪಳರಿಪುಘರನಂದುಕಂಗುಲಿಯಕಲಿ
ಯಾಂಡಂ| ತಳೆದಿರ್ದಬೊಮ್ಮಹಾಸದ || ಗಳವುಂಪಿಡಿದೊಲ್ದುರೂಪು
ದೋರಿದನಾಗಳ್| ||೨೦

ಪಿಂಗಳೆಜಟಿಬಾಂದೊರೆಯುರೆ| ದಿಂಗಳ್ಫಣಿಗಣ್ಣಳಿಸೆಪಪಂಚವೋ
ಗ|| ಳ್ತುಂಗದಶಬಾಹುರಂಜಿಸೆ| ಲಿಂಗಂಗಿರಿಜಾತೆಗಾಗ ಳಂದಿಂತೆಂದ
ತನ್ನಯಘೋಪದನಿಯುಮಕೆ| ಪೊನ್ನಂಕೊಂಡುರ್ವಿಯರಸನಿತ
ಸುತಿರಲಿಂ| ದೆನ್ನಯಕೊಂಕುಗಳೆದವೆಸ| ರಿನ್ನೆಂತಂಗಾರ್ಸಮಾನ

ಧನುವೀಶಂ। ೨೧।

ವ॥ ಅಂತುಮಹೇಶಂ ಕಂಗುಲಿಯ ಕಲಿಯಾಂಡರಭಕ್ತಿಯನೆರವಣಿಗೆಯಂ ಪೊಗಳ್ದು ಕೊಂಡಾಡುತಿರ್ಪಾಗಳ್॥

ಕಂ। ಘೋರನೆಪೂಮಳೆಗರೆಯಲ್ । ಘೋರಂತಮರಾನಕವ್ರಜಂಗಳ್ಮೊಳಗಲ್। ಚಾರುಮಣಿಪುಷ್ಪಕಂಗಿರಿ। ಜಾರಮಣನನಿಯಮದಿಂ ದೆಬಂದುವುತ್ತಾಗಳ್॥ ॥೨೨॥

ವ॥ ಅಂತುಬಂದದಿವ್ಯವಿಮಾನದೊಳ್ಕಂಗುಲಿಯಕಲಿಯಾಂಡರಂ ಶಂಕರಂ ಪರಮಕರುಣದಿಂ ಕುಳ್ಳಿರಿಸಿ ನಿಯಾಮಿಸಲ್ಕಾಗಳ್

ಚಂ। ತೊಳಪವೃಷೇಂದ್ರಕೇತು ನಭದೊಳ್ಮೆರೆಯಲ್ದಿವಿಜಾಂಗನಾಳಿಮಂ। ಗಳಮಯನೃತ್ಯಮಂ ಪ್ರಕಟಿಸಲ್ಕಸುರಾಗದಿ ದೇವಪಾತಕಾವಳಿ ಪೊಗಳಲ್ಕೆ ತತ್ಪರಮಭಕ್ತಸಮೇತ ವಿಮಾನಮುಂಬುಮು ಜ್ವಳರಜತಾಚಳಕ್ಕಿರದೆಬಂದುದು ಭವ್ಯಮಹೋತ್ಸವಂಗಳಿಂ ॥೨೩।

ವ॥ ಅಂತುಬಂದ ಕಂಗುಲಿಯ ಕಲಿಯಾಂಡಂ ಬೆರಸು ಕೈಲಾಸಸಭಾಮಂಟಪದೊಳ್ಗಿರಿಜಾರಮಣ ನೋಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ। ಇಂದುಧರನೊಲ್ದುಸುಮನೋ। ವೃಂದಂಪೊಗಳಲ್ಕೆ ಕಂಗುಲಿಯಕಲಿಯಾಂಡಂ। ಗಂಪುಗಣಪದಮನಿತ್ತಾ। ನಂದದಿನೆಸೆವುತ್ತಮಿರ್ದನಾಸ್ಥಾಯಿಕೆಯೊಳ್॥ ॥೨೪।

ಭರದಿಕಂಗುಲಿಯಕಲಿಯಾಂ। ಡರನಭವಂರಜತಗಿರಿಗೆ ಕೊಂಡೊಯ್ದಲ್ಕ। ಚ್ಚರಿವಡುತೆಪಗಲ್ಗೊಳಂ। ಕರಿಯಾರ್ಗಂಬಂದಿಳಾಧಿಪತ್ಯದಿಮೆರೆದಂ॥ ॥೨೫॥

ಇದು ಸಕಲ ಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜ ಶ್ರೀಮತ್ಪಾಲಿಗೆರೆಯಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪತ್ರಿಷಷ್ಟಿಪುರಾತನರಚಾರಿತ್ರದೊಳ್ಕಂಗುಲಿಕಲಿಯಾಂಡ ಮಾಹೇಶ್ವರಕಥಾವೃತ್ತಾಂತಂ ವಿಂಶತ್ಯಾಶ್ವಾಸಂ



# ಇಪ್ಪತ್ತೊಂದನೆಯ ಆಶ್ವಾಸಂ

## ಊರ್ಧ್ವಶಿಲೆಯಾಂಡರಕಥನಂ

ಊರ್ಧ್ವಶಿಲೆಯಾಂಡವಿಭುವಿನ| ಕೂರ್ಪಿನಭಾವಕ್ಕೆ ಮೆಚ್ಚಿ ಗಣಪದ
ವಿತ್ತಾ| ಸರ್ವವಿಭೂಷಣಗಣಮುಖ|ದರ್ಪಣಸೋಮೇಶ ನೊಲ್ದು ಪಾ
ಲಿಕೆನಮ್ಮಂ|| ||೧

ಪರಮಾನಂದದಿ ಚೋಳೋರ್ವರೆಯೊಳ್ವರಯೋಗಿವೇಷಮಂ ತಾ
ಳ್ದಿತ್ತು| ದರದಿಂ ಭಕ್ತರಸಂಗದೊಳ್| ಇರುತಿರ್ಪಂ ನೋಳ್ಪೊಡೂರ್ಧ್ವಶಿ
ಲೆಯಾಂಡಾಖ್ಯಂ| |೨

ವ|| ಅಂತೀಪರಿಯೊಳೂರ್ಧ್ವಶಿಲೆಯಾಂಡಶಿವಯೋಗಿ ಚೋಳದೇಶದೊ
ಳ್ಪರಮಾನಂದದಿಂದಿರುತ್ತಮೊಂದು ದಿವಸಂ|

ಕಂ|| ಕಾಗದೊಳಾತ್ತಲ್ದವಲಾಕುಳ| ಮುರುತರದಿಂದಾಂತಯೋಗಪ
ಟ್ಟಗಕಾಶಾಂ| ಬರಮೆಸೆಯಲ್ಸಿಲೆಯಾಂಡಂ| ಕರಿಯೂರ್ಗಂಬಂದನು
ತ್ಸವಂಮಿಗಲಾಗಳ್|| ||೩

ವ|| ಅಂತುಬಂದೂರ್ಧ್ವಶಿಲೆಯಾಂಡ ಶಿವಯೋಗಿತತ್ಪುರದಪೊರಪೊ
ಳಲನೆಳಲೊಳಿರಲಿತ್ತ ಲ್ಕರಿಯೂರಧಿಪತಿಯಪ್ಪ ಪಗಲ್ಚೋಳರಾಜಂಮ
ಹಾಭಕ್ತಿಯಿಂ ಶಿವಲಿಂಗಪ್ರತಿಷ್ಠೆಯಂ ಮಾಳ್ಪೆನೆಂದುಶಿಲ್ಪಶಾಸ್ತ್ರವಿದ
ರ್ಪ್ಪಾಚಾರ್ಯರಂಬರಿಸಿ ದಿನದಿನದೊಳ್ಮಹೂರ್ತಂ ಕರ್ವರಸು ನೆಲಗಟ್ಟು
ಶೋಧಿಸಲ್ಕುದ್ಯೋಗಮಂತಾಳ್ದಿರ್ಪಾಗಳ್||

ಕಂ|| ಧರಣಿಪತಿನೃಪಶಿವಮಂ|ದಿರಮಂಮಾಳ್ಪನುವನೂರ್ಧ್ವಶಿಲೆಯಾಂ
ಡಂಕೇಳ್ದು ರುತರಹರುಷದಿತನ್ನಂ|ತರಂಗದೊಳ್ಬಗೆದನತುಳಕಾರ್ಯ
ಮನಾಗಳ್|| ||೪

ವ|| ಅಂತಾಕಾರ್ಯಮಂಮನದೊಳ್ನೆನೆದು ಮಾಶಿವಾವೇಷದಿಂದೂರ್ಧ್ವಶಿ
ಲೆಯಾಂಡಾಖ್ಯ ಶಿವಯೋಗಿಮತ್ತಮಾಪಗಲ್ಚೋಳರಾಜಂ ದೇವಾಲಯ
ಮಂ ಸಮೆಯಿಸುವತಾವಿಂಗೆಬಂದೊಂದ ಶೋಕಭೂರುಹದತಣ್ಣೆ
ಲೊಳ್ಕುಳ್ಳಿರ್ದಾಗಳ್||

ಕಂ|| ನರಪತಿಧರೆಯೊಳ್ ಶಿವಮಂ| ದಿರಮಂಸಮೆಯಲ್ಕೆ ತನ್ನದೇಶ

ದೊಳಾಂಬಿ॥ ತ್ತ್ರಿಪೆಂ ಶಿವಗೃಹಮನೆನ। ತ್ತಿರಂದುದ್ಯೋಗಿಸಿ ಶಿವೈಕ್ಯನಿರ
ಲಂತಾಗಲ್॥ ೫॥

ವ॥ ಅಂತೂರ್ಜಿತಶಿಲೆಯಾಂಡಾಖ್ಯ ಯೋಗಿನಿಜದೇಹದೊಳ್ ಶಿವಗೃಹ
ಮಂ ವಿರಚಿಪೆನೆಂದುದ್ಯೋಗಿಸಿರಲಿತ್ತಲ್ ಪಗಲ್ಗೊಳರಾಜಂ ತದ್ದೇಶದೊಳ
ಗುಳ್ಳ ವಾಸ್ತುವಿದ್ಯಾನಿಪುಣರೆನಿಪ ವಿನ್ನಾಣಿಗಳ್ವೆರಸು ಸುಮುಹೂರ್ತ
ದೊಳ್ ನೆಲನಂ ಶೋಧಿಸಿ ಪಚ್ಚೆಯ ಪಾದಶಿಲೆಯುಂ ಬಿಗಿದು ವಜ್ರಸ್ತಂಭಂ
ಸ್ಥಾಪನಂಗೆಯ್ದು ಸುವರ್ಣದ ಭಿತ್ತಿಯಂ ನಿರ್ಮಿಸಿ ಚಂದ್ರಕಾಂತದ
ತೊಲೆಗಳಂ ಪಾಸಿ ನೀಲದ ಜಂತೆಗಳನಿಕ್ಕಿ ಪುಷ್ಯರಾಗದ ಲೋವೆಯಂ ವಿ
ರಚಿಸಿ ಮೌಕ್ತಿಕದ ಸೂಸಕಂಗಳ ನೆಳವಡಿಸಿ ಪದ್ಮರಾಗದ ಕಳಶಮಂ ಕೆ
ತ್ತಿಸಿ ಶಿವಾಗಮಿಕಾಚಾರ್ಯರಿಂ ಶಿವಲಿಂಗಪ್ರತಿಷ್ಠೆಯಂ ಮಾಡಿಸಿ ಪಂಚ
ಮಹಾವಾದ್ಯ ಸಂಭ್ರಮದೊಳ್ ಪರಮಹರುಷದಿಂ ಭಕ್ತಿಮಿಗೆ ನೆರೆದಿರ್ದ
ಮಾಹೇಶ್ವರರ್ಗೆ ಬೇಡಿದ ಪೊಂಗಳಂ ಕೊಟ್ಟು ಸಂತುಷ್ಟಿವಡಿಸುತ್ತಿರಲಿತ್ತಲ್

ಮ॥ ಪಿರಿದಾವೇಶದ ಭಕ್ತಿಯಿಂದ ಮೊಲವಿಂತದ್ದೇಹದೊಳ್ ದೇವ
ಮಂದಿರಮಂ ನಿರ್ಮಿಸಿ ಭಾವದಿಂದೆ ಶಿವಲಿಂಗಸ್ಥಾಪನಂಗೆಯ್ದು ಸಾದ
ರದಿಂ ದುರ್ಜನತೆ ಕೊರ್ಬಿ ತೂರ್ಜಿತಶಿಲೆಯಾಂಡಂ ನಲ್ಮೆಯಿಂ ನರ್ತಿ
ಸುತ್ತಿರೆ ಕಂಡರ್ಬೆರಗಾಗಿ ಬಂದು ಬೆಸಗೊಂಡ ಪೂರ್ಜನ ಡಾಕ್ಷ್ಯರ್ಗ
ದಿಂ। ।೬॥

ವ॥ ಅಂತಾಪೌರಜನಪುರಜನಂಗಳ್ಬೆಳಸಿಬರಿದೆನಲಿವು ನರ್ತಿಸುವ
ಕಾರಣವೇನೆಂದು ಬೆಸಗೊಳುತ್ತಿರ್ಪುದಂ ಪಗಲ್ಗೊಳರಾಜಂ ಕಂಡು
ತಾನಲ್ಲಿಗೆಯ್ದುವಂದಿದೇಂ ಶಿವಯೋಗಿಗಳೆ ಪಿರಿದಪ್ಪ ಸಂಭ್ರಮದಿಂದ ಬರ್ಬಿ
ಕೊರ್ಬಿರ್ಪ ಕಾರಣಮಿದೇನೆಂದು ಬೆಸಗೊಳೆ ಯೋಗೀಶನಿಂತೆಂದಂ॥

ಕಂ॥ ಧರೆಯೊಳ್ ಲಿಂಗಾಲಯಮಂ। ಧರಣಿಪ ನೀಂ ಸಮೆಸಿದಂದದಿಂ
ದೆನ್ನ ಕಳೇ। ವರದೊಳ್ ಶಿವಮಂದಿರಮಂ। ವಿರಚಿಸಿದುತ್ಸವದಿ ನಲಿವು
ತಿರ್ದಪೆನೆಂದಂ॥ ॥೭।

ವ॥ ಎಂಬಾ ಮಾತಿಂಗೆ ಶಿವಯೋಗಿಗಳೆ ಕೇಳಿಮಾ ಡಿ ಮಾಡಿದ ಶಿವಲಿಂಗ
ಮಂದಿರವ ಚೆಲ್ವಂ ಜಗಮೆಲ್ಲಂ ಕಂಡತ್ತು ನೀಂ ದೇಹದೊಳ್। ಮಾಡಿದ
ಶಿವನಿಳಯಮಂ ನಾರುಂ ಕಂಡುದಿಲ್ಲಮೆನಲೆನ್ನೊಳ್ಪೊ ಡಂತೆ ಪೇಳ್ವೆ ನೆಸು
ತ್ತಾಗಳ್।

ಕಂ॥ ಧರಣೀನಾಥಂನೋಡು। ತ್ರಿರೇಕೂರಲಗಿಂದಮೂರ್ಪ್ವಶಿಲೆಯಾಂ
ಡಂನಿರ್ಭರಭಕ್ತಿಭಾವದಿಂತ। ನ್ನಿರವಮಧ್ಯಮನಿರಿದುಸೀಳ್ದುತೋರಲ್ಕಾ
ಗಳ್॥ ।೮।
ಚಂ। ಒದವಿದಪಚ್ಚೆಯಿಂ ಸಮೆದವೇದಿಕೆವಜ್ರದಕಂಭಮಿಂದುಕಾಂ
ತದತೊಲೆನೀಲದಿಂನೆಗಳ್ದ ಜಂತೆಸುವರ್ಣದಭಿತ್ತಿ ಪುಷ್ಯರಾ । ಗದಪ್ರೋ
ಲೋವೆಮೌಕ್ತಿಕದಸೂಸಕ ಮಗ್ರದೊಳೊರ್ಪ್ವಪದ್ಮರಾ।ಗದಕಳಶಂ
ರಾಜಿಸುತೆದೇಹದೊಳೊಪ್ಪಿ ತುಳಿಂಗಮಂದಿರಂ॥ ।೯।
ಕಂ॥ ನರಪತಿಕಂಡಚ್ಚರಿಯಿಂ। ಪರವಶನಾಗಲ್ಕೆ ಶರಣನೊಡಲೊ
ಗಣಮಂ। ದಿರದಿಂದಂಪೊರಮಟ್ಟೀ। ಶ್ವರಿಯಾಳ್ದಂಮೆಚ್ಚಿರೂಪುದೋ
ದನಾಗಲ್॥ ।೧೦।
ಎಳೆವೆರೆಬಾಂದೊರೆಕೆಂಜಡೆ, ತೊಳಗುವನೃಕರೋಟಿಮಾಲೆಫಸಿತಂ
ಫಣಿಕುಂ। ಡಲಯುಗಮುರಿಗಣ್ಗಳ್ಕಂ।ಗೊಳಿಸೆಶಿವಂದಿವ್ಯಮೂರ್ತಿಯಿಂ
ದೆಸೆದಿರ್ದಂ॥ ।೧೧
ವ॥ ಅಂತೆಸೆವದಿವ್ಯಮೂರ್ತಿಯಂ ಕಂಡುಭಯಚಕಿತಹೃದಯನಾಗಿ
ಪರಮಾನಂದಾಶ್ರುಜಳಪೂರಿತನಯನನಾಗಿಪೊಗಳಲ್ಕರಿಯದೆಗದ್ಗದಕಂ
ಠನಾಗಿಭಕ್ತಿಯಿಂ ಚರಣಕಮಲದೊಳ್ಪಗೆಗೆಡದಿರ್ದೂರ್ಪ್ವಶಿಲೆಯಾ
ಡಾಖ್ಯಸಂಪೂರ್ವತೀವರಂಪಿಡಿದೆತ್ತಿ ಕುಳ್ಳಿರಿಸಿವಜ್ರದೇಹಮಪ್ಪಂತೆಪೆ
ಯ್ದುಡವುತ್ತಂ ನಂದಿನಾಥಂಗಿಂತೆದಂ।
ಕಂ॥ ಧರೆಯೊಳನೇಕರ್ಮನ್ನರ।ಪಿರಮಂನಿರ್ಮಿಪರದಲ್ಲದಾತ್ಮಶರೀ
ರಾಂ ತರದೊಳಿನಗಾಲಯಮನಾ ।ದರದಿಂವಿರಚಿಸಿದಿವಂಗಡಾರ್ಪೊ
ರೆಧರೆಯೊಳ್। ।೧೨।
ವ॥ ಎಂದಿಂದುಧರನಾನಂದದಿಂಕೋಂಡಾಡುತ್ತಂತಾಂ ಏರಿಸಿದದಿವ್ಯ
ವಿಮಾನದೊಳೊರ್ಪ್ವ ಶಿಲೆಯಾಂಡ ನಂಕರೆದುಕುಳ್ಳಿರಿಸಿಪುಷ್ಪಕ ವಿ
ನಿಯುವಿಸಲ್ಕಾಸಲ್।
ಕಂ। ಪುರಹರಶರಣಾನ್ವಿತಮಂ। ಬರವರೆಯಮರಿಯರನೃತ್ಯದಿ
ಧ್ರೂವಳಿಯಿಂ। ಸುರುಚಿರಮಣಿಪುಷ್ಪಕಮಾ । ದರದಿಂರಜತಾಚಳಕ್ಕೆ
ಬಂದುತ್ತಾಗಲ್॥ ।೧೩
ವ॥ ಅಂತುಬಂದೂರ್ಪ್ವಶಿಲೆಪೂರ್ವಾನ್ವಿತಂ ಪ್ರಮಥಗಣಂಬೆರಸುಗಿ

ರಿಜಾವರನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್
ಕಂ॥ ಉರಗಾಧೀಶಂಪೊಗಳು। ತ್ತಿರೆಘನತರಕ್ಕೆಪೆಯೊಳೂರ್ಜಶಿಲೆ
ಯಾಂಡಂಗಂ। ಪರಮಪದವಿತ್ತುಮೆರೆದಘ। ಕರಿಹರಿಯಿನಿಪಘವನೆಸೆದ
ನಾಸ್ವಾಮಿಕೆಯೊಳ್। ।೧೩।
ಗಿರಿಜೇಶನೂರ್ಜಶಿಲೆಯಾಂ। ಡರನಾಕೈಲಾಸಗಿರಿಗೆಕೊಂಡೊಯ್ದ
ಲ್ಕೆ। ಚ್ಚರಿವಡುತೆಪಗಲ್ಗೋಳಂ। ಕರಿಯೂರೊಳ್ಸುಖದಿನಿರುತಿರಲ್ಕಂ
ತಾಗಳ್॥ ।೧೪॥
ಗದ್ಯ॥ಇದುಸಕಲಸುರನಿಕರಮುಕುಟ ಮಾಣಿಕ್ಯ ಮಾಲಾಮರೀಚಿಪುಂ
ಜರಂಜಿತಪಾದಪಂಕಜಶ್ರೀ ಮತ್ಪಾಲಿಗೆರೆಯ ಪುರಾಧಿಪಶ್ರೀ ಸೋಮ
ನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷ
ಷ್ಟಿಪುರಾತನಚಾರಿತ್ರ ದೊಳೂರ್ಜಶಿಲೆಯಾಂಡಮಾಹೇಶ್ವರ ಕಥಾವೃ
ತ್ತಾಂತಮೇಕವಿಂಶತ್ಯಾಶ್ವಾಸಂ



## ಇಪ್ಪತ್ತೆರಡನೆಯಆಶ್ವಾಸಂ

### ಇರಿಭಕ್ತರಕಥನಂ

ಪರಮತಹರನೆನಿಪಿರಿಭ। ಕ್ತರಘನವೀರಕ್ಕೆಮೆಚ್ಚಿಗಣಪದವಿತ್ತಾ ದ
ರದಿನುರವೆರೆದಪುಲಿಗೆರೆ। ಪುರಪತಿಸೋಮೇಶನೊಲ್ದುಪಾಲಿಕೆನಮ್ಮಂ
ಕಂ॥ ಅಂತಾಕಲಿಯುಗಗಂಬಳ,ವಂತಂವೀರಾವತಾರನೆನಿಸುತ್ತೊ
ಪ್ಪಿಂ। ಕಂತುಹರಭಕ್ತಿಯಿಂವಿ। ಕ್ರಾಂತಿಯಿನಿರಿಭಕ್ತನೆಂಬ ನೋರ್ವಂ
ಬಂದಂ॥ ।೨।
ವ॥ ಮತ್ತಮಾಗಳ್।
ಕಂ॥ ಶರಣಜನಕಲ್ಪವೃಕ್ಷಂ। ಶರಣಾಗತಪಂಜರಂಸುಭೂಭುಜವಿ
ನುತಂ। ಶರಣಜನಾಂಭೋನಿಧಿಪಿಮ। ಕರನೆನಿಸುತ್ತಿಪ ನಪರಿನಿಂ

ದೀಭಕ್ತ್ರಂ॥ ॥೨

ಶಿವನಿಂದೆಗಳಂ ಕೇಳಂ। ಶಿವಥಾಯೆಂದೆಂಬದೂರನಾಲಿಸಿಕಾದ್ಯ ಶಿವಭಕ್ತಿಯುಪದವಿಲ್ಲದ। ಭವಿಗಳನೊಲ್ಲಂಪ್ರತಾಪನಿಧಿಯಿರಿಭಕ್ತ್ರಂ॥

ವ॥ ಅಂತ ಪ್ರತಾಪನಪ್ಪಿರಿಭಕ್ತ್ರಂ ಒಂದುಕರಿಯೂ ರಥಿಪತಿಯಪ್ಪ ವಲಿಂಗಕ್ಕೆ ನಾನಾವಿಧ ದರ್ಶನೆಯಂ ಮಾಡಿದಂಡ ಪ್ರಣಾಮವಂ ಮಾಳ್ದುಕೈಗಳಂ ಮುಗಿದೆಲೆಖಂಡಪರಶುವೆ ಕೇಳ್ ಸದಾಚಾರನಿಪು ತಾಚಾರಗಣಾಚಾರ ವೆಂದಾಚಾರಗತ್ರಯಂಗಳುವುದರೊಳ್ ಗಣಾಚಾ ರವೆಂಬುದುಗುರುಲಿಂಗನಿಂದೆ ಯಂಕೇಳದಿರ್ಪುದುದನಾಂ ಕೈಕೊ ಡಿರ್ದಪೆನದಕ್ಕೆತಕ್ಕು ಪಾಯುವಂಬಗೆ ದೊಂದುನಿಶಿತ ಪರಶುವಂಕ ದೆನಿದನಾಂನಿಮ್ಮ ನಿಯಮದಿಂ ಪಿಡಿದಿರ್ಪೆನಿಂದಕರ ನಿಳೆಯೊಳ್ಲಿಸಿ ನೀಳಲಮಂಪಾಲಿವುದೆನಗಿದೇರಾಜ್ಯಸಂಪದವೆನುತ್ತ ವಂಪೆಗಲೊಳ ತುಪೊರವಟ್ಟುವೀರೋಪ್ರೇಕದಿಂ ಬೀಳ್ಕೊಂಡುಬರುತ್ತಿದಿರೊಳ್ಬಪ ಲ್ಲಿಶಿವಭಕ್ತರನೊಸಲೊಳಿಸೆವ ಭಸಿತವುಂ ಕಂಡುಹಾರೈಸುತ್ತಂತಪ್ಪ ದೊಳಾಶೀರ್ವಾದವೆಂಬರಂತಲ್ಲಿಗೆ ಪರಿದುಪೋಗಿಶಿವನಿಂದೆಗೈದಪ ಕರಂಕಡಿದುಬಿಸುಡುತ್ತು ದ್ದಂಡವೃತ್ತಿಯಿಂತತಪ್ಪರ ದೊಳಿರುತಿರ್ಪ ನಂತುವಲ್ಲದೆಯುಂ॥

ಕಂ॥ ಪುರಹರನಭಕ್ತನಲ್ಲದ। ದುರುಳಂತಾನೋರ್ವನಂದುಬರುತ್ತಿ ತಃಗಳ್॥ ಸರಭಸದಿಂದಿರಿಭಕ್ತ್ರಂ। ವರಭಸಿತವನಿಡಲಿಕೊರಸಿದಂ ಮುಳಿಸಿಂದಂ॥ ॥೩

ವ। ಅಂತುದುರುಳನಪ್ಪ ಪರಸಮಯಿಕಡುಗೆರಳಿ ತನ್ನಫಣೆಯೊಳಿ ಟ್ಟ ವಿಭೂತಿಯುಂತಳುವದೊರಸಿಕೊಂಡಿರ್ದಿರಾಂತು ಜರಿದುಶಿವನಿಂದೆ ಗೆಯ್ಯುತ್ತಿರಲ್ಕೆರಲ್ಲಿರಿಭಕ್ತ್ರಂಕೋಪಾಟೋಪದಿಂದವನಮುಂಡಲೆಯು ಪಿಡಿದಾಗಳ್॥

ಕಂ॥ ಪರಸಮಯಿಗಳೀಕ್ಷಿಸುತಿರೆ; ವರಭಸಿತವನೊರಸಿಕೊಂಡ ಮೂರ್ಖನತಲೆಯಂ॥ ಪರಶುವಿನಿಂದಂಕಡಿದಿಳೆ। ಗುರುಳಿಚೆ ದಂಡಿ ವಿಜೆದರಲಂದಿರಿಭಕ್ತ್ರಂ॥ ॥೪

ವ॥ ಅಂತಿರಿಭಕ್ತ್ರಂಪರಶುವಿನಿಂತಲೆಗಡಿದು ಬಿದ್ದವನಗೋತ್ರಜನ ದಹಾಹಾಕಾರ ... ಕೊಂಪುದ

ಜವ್ವಾರವಮುಂದೆ ತಂದಿಳುಪಲದಂ ಕಂಡುದೌವಾರಿ ಕಂಪರಿದುಪೋ
ಗಿನಿಜಾಸ್ಥಾನವೊಳೊಡ್ಡೋಲಗಂ ಗೊಟ್ಟುಕುಳ್ಳಿರ್ದಪ ಗಲ್ಲೋಳರಾ
ಜಂಗೆಮೆಯ್ಯಿಕ್ಕಿ ಪೊಡವುಟ್ಟುತದ್ವೃತ್ತಾಂತವುಂಬಿನ್ನಪಂಗೆಯ್ಯಲ್ಕೀ
ಳ್ದು ಬರಲೆಂದುನಿಯಮಿಸಲ್ಕವಂ ಪೋಗಿಪುಗಿಸಲ್ಕವರ್ಬಂದಿದಿರೊಳ್ಸೆ
ಗಡೆದುಬಾಯ್ವಿಡುತೆದ್ದು ಕೈಗಳಂ ಮುಗಿದಿಂತೆಂದರ್।

ಕಂ। ನರನಾಥನೆಜಿತ್ತೈಪುದು। ಪುರರಿಪುವಿನಭಕ್ತನಲ್ಲವೆಂದೆಮ್ಮವ
ನಂ। ಪರಕುವಿನಿಂದಿರಿಭಕ್ತಂ। ನಿರಾಪರಾಧಿಯನೆಕೊಂದನೆಂದೆನುತಿ
ರ್ದರ್॥ ।೭।

ವ। ಎಂದುದೂರುತ್ತಿರ್ದವರಬಿನ್ನಪಮಂ ಕೇಳ್ದು ಶಿವಭಕ್ತಾಗ್ರಗಣ್ಯ
ನಪ್ಪಪಗಲ್ಲೋಳರಾಜಂತನ್ನಮನದೊಳ್ಮೆಚ್ಚಿಸಿವನಲ್ಲ ದನ್ಯದೈವಮಿಲ್ಲೆಂ
ದುಪರಸಮಯದವರಂ ಕೊಂದುಶಿವಭಕ್ತಿಯಂಮೆ ರೆದಿರಿಭಕ್ತನಧಂ
ಕ್ಕೆ ಸಂತಕಂಬಟ್ಟುವುತ್ತಂಡೂರಿದವರ್ಗೆ ತಾನುನ್ನತದಯಾಳುವಾಗ
ಲ್ವೇಳ್ಕೆಂದುಪಡಿಯರರಂಕರೆದುಬೇಗಂಪೋಗಿತದ್ಭಕ್ತನ ನೋಡಗೊಂಡು
ಬರ್ಪುದೆಂದು ನಿರೂಪಮಂ ಕುಡಲ್ಕವಂ ಪೋಗಿಯೆ ಲೆಮಹೇಶ್ವರಾ
ನಿಮ್ಮಡಿಗಳಂ ರಾಜೇಂದ್ರಂಬರ ವೇಳ್ಕೆಂದಟ್ಟಿದನೆಂದುಬಿನ್ನಪಂಗೆಯ್ಯ
ಲ್ಕೇಳ್ದು ಪಗಲೊಳ್ತಾಲ್ದ ಪರಕುವೆರಸವನೊಡನೆ ಬಂದಾಸ್ಥಾನಮಂಟಪ
ಮಂಪೊಕ್ಕುರಾಜಂಗಭಿ ಮುಖನಾಗಿ ನಿಂದಿರಲ್ಕಂಡಿತ್ತಂ ಬನ್ನಿಮೆಂದು
ಸಮೀಪಕ್ಕೆಕರೆದು ಕುಳ್ಳಿರಿಸಿಬಳಿಕಿಂತೆಂದಂ॥

ಕಂ। ಹರಭಕ್ತಾಗ್ರಣಿಕೇಳೀ। ನಿರಾಪರಾಧಿಯನದೇಕೆಕೊಂದಿರಿ
ಯೆಂಬ॥ ನೃಪತಿಗಿರಿಭಕ್ತಂಸೈ। ವರಬಳಗಂ ಮೆಚ್ಚೆನುಡಿ ದನಾಸ್ಥಾ
ಯಿಕೆಯೊಳ್ ।೮॥

ಚಂ॥ ನೊಸಲೊಳೆಭಸ್ಮವಿಲ್ಲದಿದಿ ರ್ಪೊಳ್ಬರೆಕಂಡೊಲವಿಂದ ಮಾಗಳಾ
ಘಸಿತಮನೊಪ್ಪಿಪೂಸಿತೊಡವಂ ತೊಡದೀಕ್ವರನಿಂದೆ ಗೆಯ್ದುಕೋಪಿ
ಸುತೆನಗಾಂತು ನಿಂತದವನಂಕಡಿದಿಕ್ಕಿ ದೆನುಂಟು ವಾಳ್ಪುದೇ ನುಸಿ
ರದನೆಂದೊಡಂದು ಮಿರಿಭಕ್ತನಮಾತಿಗೆಮೆಚ್ಚಿದಂನೃಪಂ ।೯॥

ವ॥ ಎಂದಾರಾಜನವಂಗೆಮೆಚ್ಚಿ ಪರಸ ಮಯಿಗಳಂಕೊಲ್ವುದಿದನಿ
ಯಮವೆನೆ ಈ ನಿಯಮಮಾದೊಡೆನಿಮಗೆ ಸಂದಿತ್ತಿನ್ನವಂವಿಭೂತಿಯ
ನಿಟ್ಟಿರೆಮರಳೇಳ್ವನೆಯೆಂದಮಾತಿಂಗಿರಿಭಕ್ತನಿಂತೆಂದಂ॥

ಕಂ|| ಪಿರಿದುಂಬಳಿಗಂವೆರಸೀ| ಶ್ವರಭಕ್ತಿ ಜುನಾಂತುಭಕ್ತವಿಚ
ಶಿವನಂ| ಹರಭಕ್ತರಕೃಪೆಯಿಂದಂ| ಮರಳ್ದಿತ್ತುವೆನೆಂದನೊಲವಿನಿಂ
ರಿಭಕ್ತಂ| ೧೧|
ವ| ಎಂದಿರಿಭಕ್ತಂನುಡಿಯಲ್ಕೀಲ್ದಪನಪಳಗವೆಲ್ಲಂನಿಜಸಮಯವು
ಬಿಟ್ಟುಮನೋಭಾವದಿಂಶಿವಭಕ್ತರಾಗಿಯೆಮ್ಮಯ ಶಿಶುವಪ್ಪೀತನಜೀ
ದಾನವಂಕೊಟ್ಟುರಕ್ಷಿಪು ದೆನುತ್ತಂವೆಯ್ಯಿಕ್ಕಿ ಬೇಡಿಕೊಳಲ್ಕರುಣದ
ದಾಗಳ್

ನರಪತಿಬೆರಗಾಗುತ್ತಿರ್ದ| ಧರೆಯೊಳ್ಬಿದ್ದವನಮೇಲೆನಿಜಚರಣಪು
ದರದಿಂದಿಡಲಾಗಲ್ಕವ| ನುರಿವೆದ್ದಿರಿಭಕ್ತನಂಘ್ರಿಗಾನತನಾದಂ| ೧೧
ವ| ಅಂತುತಾಂಜೀವಂಗೊಟ್ಟೆತ್ತಿದವನಂ ಕರುಣದಿಂನೋಡಿವಿಭೂ
ಯನಿಟ್ಟು ಶಿವಭಕ್ತಜನಂಮೆಚ್ಚೆ ಪರವಾದಿಗಳ ಕಣ್ಮುಚ್ಚಲಪನಬಳಗ
ಲ್ಲರಂಶಿವಭಕ್ತರಂಮಾಡಿಮೆರೆದಿರಿಭಕ್ತರಗಣಾಚಾರದಭಕ್ತಿಯಳ
ಕೌತುಕಂಬಡುತ್ತಾನಂದವುನೆಯ್ದಿ ಪಗಲ್ಪೊಳರಾಜನಿಂತೆದಂ||
ಕಂ| ಪರಸಮಯಿಗಳಂಕೊಲ್ವುದು ಬಿರಿದೀಭಕ್ತಂಗೆನುತ್ತೆವಿಭೂ
ರಿಸಲಾ| ಪುರದೊಳಗವರಿವರೆನ್ನದೆ| ನಿರುತಂಶಿವಭಕ್ತರಾದರದನೇ
ಳ್ವೆಂ! ||೧

ಅನಂತರಂ

ನರಪತಿಯುಂಬೀಳ್ಕೊಂಡಾ| ದರದಿಂದಿರಿಭಕ್ತನೀಶ್ವರನಭಕ್ತಿಯ
ನಾ| ಪುರದೊಳ್ನೆಲೆಗೊಳಿಸಿಸಮ | ಸ್ತರನೆಲ್ಲರಭಕ್ತರೆನಿಸಿಮೆರೆವುತ್ತಿ
ರ್ದಂ ೧೪
ವ| ಅಂತುಪರಸಮಯಿಗಳನುಂಟೆನಿಸಿ ಕೊಲಲುಂಕಾಯಲುಮೀಶ್ವ
ರಭಕ್ತರಲ್ಲದೆ ಪೆರರಿಲ್ಲೆಂಬುದಂತೋರುತ್ತಂ ಮಹಾಪ್ರತಾಪದಿಂಸತ್ಕೀ
ರ್ತಿವೆತ್ತಿರುತ್ತೊಂದುದಿವಸಂ ಪ್ರಭಾತಸಮಯದೊಳಿರಿಭಕ್ತಶಿವಲಿ
ಗಾರ್ಚನೆಯಂ ಮಾಡಿಪರಮಾನಂದದಿಂ ಪುರವೀಧಿಯೊಳ್ಬರುತಿರ್ಪ
ಗಳಿತ್ತಲ್||
ಕಂ|| ಮೊರೆದೆರಗುವಪರಮೆಗಳೊ! ತ್ತರವೇಳದಮುನ್ನ ಮೆಯ್ದಿ ಶಿವ
ಗಾಮಿಪೊದ| ಳ್ದಿರವಂತಿಗೆಸೇವಂತಿಗೆವಕಚಂಪಕಮುಖ್ಯ ಕುಸುಮತತಿ
ಯಂಕೊಯ್ದು ||

ಅಂತು ಕೊಯ್ದು

ಕರಿಯೂರಶಿವನಪೂಜೆಗೆ। ವರಕುಸುಮಂಗಳನೆತಂದುಕರಡಿಗೆಯುಂತುಂ। ಬಿರದೆಶಿವಗ್ರಾಮಿಯೆಂಬಂ। ಪುರದಂಗಡಿವೀಧಿಯೊಳಗೆ ಬರುತಿರ್ಪಾಗಳ್। ।೧೫।

ಮತ್ತಮಿತ್ತಲ್

ಧುರಗಲಿಚೋಳನಪಟ್ಟದ । ಕರಿವರನಾನೀಲಗಿರಿಯುನಿರ್ಝರಜಲದಂ। ತಿರೆಗಂಡಯುಗಳದಿಂದಂಪರಿವಮದಾಂಬುಗಳಿನೆಸೆದುದದನೇವೊಗಳ್ವೆಂ। ।೧೬।

ಮ। ವರದಾನಾಳವಗಂಧಲುಬ್ಧಮಧುಪವ್ರಾತಾರವೋಲ್ಲಾಸಿತಂ। ಕರವೋದಂಚಿತಬಿಂದುಜಾಳಕಯುತಂಸಂಚಾರಿತೋದ್ದಂಡಪುಷ್ಕರರವ್ಯಂಘನಕರ್ಣತಾಳಲಸಿತಂ ಶುಭ್ರಾಂಶುವಿಸ್ತಾರಿ ತೋಚ್ಚರದಂ ಲೋಹಿತಲೋಚನದ್ಯುತಿಯಿನುದ್ಯತ್ಕಂಧರಂಸಿಂಧುರಂ। ೧೭ ॥

ವ॥ಮತ್ತಮಾಗಜಂ ಸಪ್ತಮದಾವಸ್ಥೆಯೊಂದಾದ ಮದೋದ್ರೇಕದಿಂ ಮೆಯ್ಮರೆದು ಕಾಯ್ದಿಕ್ಷುದಂಡಮಂಕೀಳ್ವಂತೆಬಾಳ್ಗಂಭಮಂ ಕೀಳ್ತೀಡಾಡಿ ಬಿಸತಂತುವಂಪರಿವಂತೆ ಕಟ್ಟಿದನಿಗಳಂಗಳಂ ಪರಿದಿಕ್ಕಿಕಾಯ್ಪಂಕುಶಕ್ಕೆಶಂಕಿಸದೆ ಮಾವಂತರಂಮೆಟ್ಟಿಸೀಳ್ದು ಪೊಡರ್ಪಿನಿಂದಾರೆಕಾರರಂ ಬೆಂಕೊಂಡಟ್ಟಿಮುಟ್ಟಿನೆಲದೊಳ್ಪಿಟ್ಟೊರಸಿ ಕಟ್ಟಾಸುರದಿಂ ಪೊರಮಟ್ಟುಕೆಂಗಣ್ಮಸಗಿ ಪುರವೀಧಿಯ ಪಟ್ಟಶಾಲೆಯಕಲ್ಲ ಕಂಭಂಗಳಂ ಶುಂಡಾದಂಡದಿಂ ಪಿಡಿದುಕೆಡಪಿ ಗಜಾಸುರನಂತೆಚಾರಿವರಿವುತ್ತಂ ಬರ್ಪುದಂಕಂಡು ಪುರಜನಂಭಯಂಗೊಂಡು

ಚಂ॥ ಎಲೆವಲೆಪೋಗು ಪೋಗದಡಗಕ್ಕಟಡಂ ಗುರೆಬೇಗಬೇಗಸಾ। ತೆರ್ಲತೊಲಗೆಯ್ದಿತೆಯ್ದಿತಿರಿಯಿತ್ತಿರಿಯಿತ್ತಿಳೆಗಿಕ್ಕಲಿಕ್ಕಳಾರ್ದಲಿವ ಜನಂಗಳಂಮುಳಿದುಸೀಳ್ದುಡುಸೀಳ್ದುದೆನುತ್ತೆಭೀತಿಸಂ। ಕುಳರಿರದೋಡಲಟ್ಟಿಬರುತಿರ್ದುದು ತತ್ಪುರದೊಳ್ಮದದ್ವಿಪಂ ॥೧೮॥

ವ॥ಅಂತುಪೌರಜನಮನೊಕ್ಕಲಿಕ್ಕಿ ತಾಂಕಡಿಸುತ್ತಂಸೊಕ್ಕಿದಿಭೇಂದ್ರಂವೀಧಿಯೊಳಿದಿರಾಗಿಬರ್ಪಶಿವಾಗಮಿಯೆಂಬಶಿವಬ್ರಾಹ್ಮಣನಂಕಂಡು॥

ಚಂ॥ಪರಿದು ... ಶಂಕರ

ಜದಭಕ್ತನಪ್ಪ ಶಿವಗಾಮಿಯಹಸ್ತಕರಂಡವಮಂನಘ್ರಕ್ಕಿರದಿರದೆಯ್ದ
ತ್ತುಸುಮ ಸಂಕುಳಮುರ್ವಿಯೊಳೆಯ್ದೆ ಚೆಲ್ಲೆ ಕಂ.ಡುರುತರ ಮ
ಯ್ದಿ ಶಿವಥಾ ಶಿವಥಾ ಯೆನುತಿರ್ದನಳ್ಕರಿಂ|೧೯|
ಕಂ॥ಶಿವಪೂಜಾಗೆತಂದಲರ್ಗಳ|ನವನಿಗೆಕರಿಚೆಲ್ಲಿತಕಟ ಶಿವಥಾ ಯೆ
ತಂ.ಶಿವಗಾಮಿಬಿಡವೆ ವೋರೆಯಿಡೆ| ತವಕದಿನಿರಿಭಕ್ತನಿರವೆಕೇಳ್ದ
ದಂ | |೨೦|
ಅಂತೇಳ್ದುಂದುನೋಳ್ಪಸಗಳ್.|
ಧರೆಯೊಳ್ಚೆಲ್ಲಿದ ಪುಷ್ಪೇ| ತ್ಕರಮಂ ಪೊಡಗೆಡೆದುಬಿದ್ದ ಕರಡಿಗೆ
ಕಂ | ಡುರುತರಕೋಪವಿನಿಭಪುಷ್ಕರಮಂ ನಿಡಿಕಾಯ್ದು ಪರಶು
ಗೆದಾಗಳ್॥ ॥೨೧
ಚಂ॥ ಪರಶುವನೆತ್ತಿತತ್ಕರಿಯಶುಂಡಮನಿರ್ಕಡಿಗೆ ಯ್ದುವಾಡೆ
ಧರೆಗುರುಳಲ್ಕೆಪೊಯ್ದು ನಿಡುಮಧ್ಯಮ ನಿಕ್ಕಡಿಮಾಡಿಸೀಳ್ದು ಕಂ|
ಮನಳುಂಬದಿಂದರಿದುಕೊಂಡಿರಿಭಕ್ತನುದಗ್ರದೂಷಣೋತ್ಕರ
ಳ್ದು ಕಾಯ್ದುವಿಗೆಬೊಬ್ಬಿರಿದಾರು ತಮಿರ್ದನಳ್ಕರಿಂ॥ ॥೨೨
ವ॥ ಅಂತುಕಡಿಖಂಡಮಾಗಿಬಿದ್ದಿರ್ದ ಗಜೇಂದ್ರನಂಕಂಡಳಲು
ಮಾರೆಕರ್ವರಿದು ಪೋಗಿನಿಜಸ್ವಾಮಿಯಪ್ಪ ಪಗಲ್ಚೋಳರಾಜಂಗೆ
ಕದಿಂಮೆಯ್ದಿಕ್ಕಿ ಕೈಗಳಂಮುಗಿದೆಲೆದೇವಾ ನಮ್ಮಪಟ್ಟದಾನೆಯ
ರ್ವಭಕ್ತಂ ಕೊಂದನೆಂದುಬಿನ್ನಪಂಗೆಯ್ವಲಿ ನ್ನಾಸೆಯಂಕೋ
ತಂ ಮರ್ತ್ಯನಲ್ಲಿಂದರಿದೆದ್ದು ಭಯಭಕ್ತಿಯಿಂಪೊರಪಟ್ಟು
ಡೆಯಿಂ ಬರುತ್ತುಂತಾಶಿವಭಕ್ತನ ಪಾಪಿಯಾನೆಯೇನಂಮಾಡಿತ್ತೊ
ಪನೇಬಲ್ಲನೆನುತ್ತುಂ ಗಳಗಳನೆಯ್ದಿ ನೋಳ್ಪಗಳ್ ಗಜಾಸುರನಂ
ದು ಚರ್ಮವನುಗಿದರುದ್ರನಂ ತತಿರೌದ್ರಾಕಾರದಿಂಪರಶುವಂ
ರ್ದಿರಿಭಕ್ತನಂಕಂಡ ಡಿಯೊಳ್ಸೈಗೆಡೆದಿದೆ-ಲಿತಂಪೆ, " ಭೃತ್ಯಾ
ಧೀನಸ್ಸ್ವಾಮಿನೋದಂಡ,, ಮೆಂಬಜಗದನೀತಿಯಿಂದೆನಗಾದುದು
ರಣಮಿಗಜಕ್ಕೆ ತಪ್ಪಿಲ್ಲಮುಚ್ಚಿರವುನರಿವುದೆಂದು ತನ್ನ ಕೇ
ಡ್ಡಿರ್ದರಾಜಪಮರ್ಯನುಕಂಡು ಮನಂನೊಂದು॥
ಕಂ॥ ಇಂತಪ್ಪಭಕ್ತವರ್ಯನ | ದಂತಿಯನ ಕಟೇಕಕೊಂ
ಯಸತ್ವಂ| ಕಂತುಹರ ... |ಜಿತ ... ನುತ

ನಾಯಿರಿಭಕ್ತಂ ||೨೩||

ವ|| ಅಂತಳಲಿಬಳಲಿನಿಜಬುದ್ಧಿಗೆತನ್ನಮೇಲೆತಾಂಕಡುಕೆರಳ್ದಾಗಳ್

ಕಂ|| ಕಡುಗೋಪದಿಂದತನ್ನಯು | ಪೆಡತಲೆಯುಂಪೊಪೆದುಕಡಿವೆನೆಂದೆನುತಿರ್ದಾ, ಕೊಡಲಿಯುಕ್ಕೈಯುಂಪಿಡಿದಂ; ಮೃಡನಿರಿಭಕ್ತಂಗೆಕೂರ್ತುಮೆಚ್ಚಿದನಾಗಳ್|| |೨೪||

ಅಂತುಮೆಚ್ಚಿ

ಅಚ್ಚರಿಯಿಂದಿರಿಭಕ್ತನ| ನಿಚ್ಚಟಗಲಿತನದಭಕ್ತಿಯುಗ್ಗಳಿಕೆಗೆತಾಂ ಮೆಚ್ಚಿಶಿವಂಗಣತತಿನೆರೆ| ಪೆಚ್ಚುತ್ತಿರೆತನ್ನರೂಪುದೋರಿದನಾಗಳ್

ಕಿರುಜಡೆನದೀಶಶಿಸಣೆಗಣ್ಣರೆ, ಗೊರಳಹಿಫಸಿತವೆಡದಶಿವೆಗಜಡಜಿನಂ ಮೆರೆವಶಿವಸ್ಯೆದುಮೊಗದಿಂ | ಮಿರುಗುವದಶಭುಜದಿನೆಸೆದನಂಪೊಲಪಿಂದಂ|| ||೨೬||

ವ|| ಅಂತೀಶ್ವರಂನಿಜಮೂರ್ತಿಯ ನೋಪಿನಿಂದಿರಿಭಕ್ತಂಗೆ ತೋರಿದಾಗಳ್||

ಕಂ|| ಭರದಿಂದಿರಿಭಕ್ತಂಸಂ| ಕರನಡಿದಾವರೆಯೊಳೆರಗಿಸ್ಯೆಗೆಡೆದೆತಿಭ| ಕ್ತಿರಸಾವೇಶದಿನೀಶ್ವರ| ಪುರಹರಕರುಣಾಬ್ಧಿಜಯಯೆನುತ್ತಂ ಪೊಗಳ್ದಂ|| ||೨೭||

ವ|| ಅಂತುಪೊಗಳ್ದಿರಿಭಕ್ತನಂ ಕಾರುಣ್ಯಾವಲೋಕನದಿಂನೋಡಿ ನಂದಿನಾಥಂಗಿಂತೆಂದಂ||

ಕಂ|| ಹರಭಕ್ತಂಶಿವಧಾಮನೆ, ಪಿರಿದಂಜದೆನೃಪನಗಜವನಿರಿದಿಕ್ಕಿದನ| ಚ್ಚರಿಗಲಿರಿಭಕ್ತನೆನಲ್| ದೊರೆಮಾರೀತಂಗೆಧರೆಯೊಳೆಂದನುಮೇಶಂ|| |೨೮||

ವ|| ಅಂತುಮೇಶಸಿರಿಭಕ್ತನ ಗಣಾಚಾರದ ಫಲಮಂನಂದಿನಾಥಾದಿಪ್ರಮಥರ್ಗೆಪೇಳುತ್ತೊಲಸಿಂಬಾ ಪಗಲ್ಚೋಳಿಂಜನಸದ್ಭಕ್ತಿಗೊಲಿದ್ದಡಿಖಂಡಮಾಗಿಬಿರ್ದ ಪಟ್ಟದಾನೆಯುಂಜೀವಂಗೊಟ್ಟೆತ್ತಿಮುದದಮಸಿತ್ತಾನಂದಪದದ ನಾಗಿಪಾ. ಗಳ್,

ಕಂ, ತೊಳಪಮಣಿಕಳಶತತಿಯಿಂ | ಪೂರ್ವಪೃಷ್ವಜಪಿನಪುರಜಮಜಮುರವದಿಂ! ಒಳಸಿಸುರಿಂಪೆಸೆವು| ತ್ತಿಳೆಗೆಳ್ತು, ದಾತ್ತದಿವ್ಯಪುಷ್ಪಕಮಾದಳ್

ವ॥ ಅಂತುಬಂದದಿವ್ಯವಿಮಾನ ದೊಳಾನಂದದಿಂದಿರಿಭಕ್ತನಂಕೈಲ್ವಾ ಸಿಶಂಕರಂನಿಯಾಮಿಸಲ್ಕಾಗಳ್।

ಚಂ॥ ನೆರೆದೊಲವಿಂಸಿರೀಕ್ಷಿಸುತೆ ಜೋಳಧರಿತ್ರಿಯಭಕ್ತಜಾಳಪ ಚ್ಚರಿಪಡಲಂ ಬರಕ್ಕೆನೆಗೆದಾಯಿರಿಭಕ್ತಸಮೇತ ಪುಷ್ಪಕಂಸುರುಚಿ ಕಾಂತಿಯಂ ಕೆದರುತಂವೃಷಧ್ವಜವೊಪ್ಪೆ ತಾರಘೋಷರಕವು ರಾನಕಂ ವೊಳಗೆಬಂದುದುಮಂಗಳದುತ್ಸವಂಗಳಿಂ॥ ॥೬॥

ವ॥ ಅಂತುಬಂದುಕೈಲಾಸಸಭಾ ಮಂಟಪದೊಳ್ಪ್ರಮಥಗಣಂಗಳ್ ರಸೊಡ್ಡೋಲಗಂ ಗೊಟ್ಟುಕುಳ್ಳಿರ್ದಾಗಳ್॥

ಕಂ॥ ಪ್ರಮಥವರ್ಗದಮಂಪಡೆಯ। ಲ್ಕವುರಪ್ರಕರಂಪೊವಳ್ದುಪೊ ಳುತ್ತಿರೆಸಂ। ಭ್ರಮದಿಂದಿರಿಭಕ್ತಂಗಂ। ದುಮೆಯುರಸಂಪ್ರೀತಿಯಿಂದೆ ಗಣಪದವಿತ್ತಂ॥ ॥೭॥

ಅನಘನ-ನಕ್ಕ್ರಿಯೊಳಿರಿಭ। ಕ್ತನಗುಣಮಂಹ್ಯೆಮವತಿಗೆಪೇಳುತ್ತು ತಾ। ತನಸಂಗೀತರಸಕ್ಕಂ। ಮನವೀವುತೆಪ್ಪುತಿರ್ದನಾಸ್ಥಾಯಿಕೆ ಬೊಳ್। ॥೮॥

ಹರನತಿಕರುಣದಿನಿರಿಭ। ಕ್ತರನಾರಜತಾಚಳಕ್ಕೆ ಕೊಂಡೊಯ್ಯಲ್ಕಾ। ಚ್ಚರಿವಡುತೆಪಗಲ್ಪೋಳಿಂ। ಕರಿಯೂರೊಳ್ಸುಖದಿನಿರುತಿರ್ದ್ದ ತಾಗಳ್॥ ॥೯॥

ಗದ್ಯ। ಇದುಸಕಲಸುರನಿಕರಮುಕುಟ ಮಾಣಿಕ್ಯ ಮಾಲಾಮರೀಚಿಪು ಜರಂಜಿತಪಾದಪಂಕಜಶ್ರೀ ಮತ್ಪಾಲಿಸಿರೆಯ ಪುರಾಧಿಪಶ್ರೀ ಸೋಮ ನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪತ್ರಿ ಷ್ಟಿಪುರಾತನಚಾರಿತ್ರದೊಳ್ಪಗಲ್ಪೋಳರಾಜ ರಾಜ್ಯ ಪರಿಪಾಲನವರ್ಣ ನ-ಇರಿಭಕ್ತ ಮಾಹೇಶ್ವರ ಕಥಾವೃತ್ತಾಂತಂದ್ವಾವಿಂಶತ್ಯಾಶ್ವಾಸಂ



## ಇಪ್ಪತ್ತುಮೂರನೇಆಶ್ವಾಸಂ

### ಏನಾಧಿನಾಥರ ಕಥನಂ

ಏನಾಧಿನಾಥಗಂಥರ| ಣೀನುತಗಣಪದವನಿತ್ತುಮೆರೆದಪ್ರತಿಮ |
ಜ್ಞಾನನಿಧಿಪುಣ್ಯನಿಧಿಮಹಿ | ಮಾನಿಧಿಸೋಮೇಶನೊಲ್ದು ಪಾಲಿಕೆನ
ಮ್ಮಂ| ||೧|

ಕಂ|| ಪುರಹರಪದಭಕ್ತವ್ರಜ| ಕೆರೆದುದನೀಯಲ್ಕೆವೇಳ್ಕೆನುತ್ತರ್ಥ
ಮನಾ| ದರದಿಂದಾರ್ಜಿಸಲೆಂದಾ | ಕರಿಯೂರ್ಗೇನಾಧಿನಾಥನೆಂಬಂ
ಬಂದಂ|| ||೨|

ವ|| ಅಂತೇನಾಧಿನಾಥಂಬಂದು ತತ್ಪುರದ್ದೊಳೋಲೈಸಿಸೇವಕಾವೃ
ತ್ತಿಯಿಂದಾರ್ಜಿಸಿದ ರ್ಥವುದುಕಷ್ಟಮೆಂದಾ ಬುದ್ಧಿಯಂಬಿಟ್ಟುಚಿಂತಿ
ಸುತ್ತೊಂದು ರಾತ್ರಿಯೊಳ್‌ಶಿವಧ್ಯಾನದಿಂದಿರುತಿರ್ಪಾಗಳ್

ಕಂ|| ಮಣಿಮುಕುಟಂನಿಟಿಲದಕ್ಷ| ಣ್ಣಣಿಕುಂಡಲಮುಗ್ರಡಾಡೆಯಸಿ
ಫಲಕಂಚ| ಲ್ಲಣದುಡೆಪೊಂಪೊಡರೊಪ್ಪಲ್ | ರಣಧೀರನೆನಿಪ್ಪವೀರಭ
ದ್ರಂಬಂದಂ| |೩||

ಕನಸಿನಮುಖದೊಳ್ಬಂದೀ| ಶನನಿಯುವ ದಿವೀರಭದ್ರನಸಿಫಳಕಮ
ನಿತ್ತನುನಯದಿಂಪೋಗಲ್ದಿ ಟ್ಟನೆನಿಸ ಲ್ಕೇನಾಧಿನಾಥನೊಲವಿಂತಾಳ್ದಂ

ವ|| ಅಂತುಕನಸಿನೊಳ್ದಿಟವಾದ ಸಿಫಲಕಮಂಪಿಡಿದುಬಿ ಹಗನಲ್ಲಾ
ಚ್ಛಾದನಮಪ್ಪ ಭಸಿತವಿಲ್ಲದಶಸ್ತ್ರಜೀವಿಗಳಗಂಡ ನೆಂದುಕಾದಿಗಲ್ದುಧನ
ಮನಾರ್ಜಿಸಿಯೆನ್ನೊಡೆಯರಪ್ಪಮಾಹೇಶ್ವರ ಗೆಬೆಸಕೆಯ್ವೆನೆಂದೇನಾ
ಧಿನಾಥಂ ಸವರಕ್ಷ್ಮಾದ್ಯೋಗಥಿಂದಿರ್ದ ನಂತುಮಲ್ಲದೆಯುಂ|

ಕಂ|| ಪಿಡಿದಸಿಫಲಕಂಪೊಳೆಯ | ಲ್ತೊಡರ್ವರ್ಥಟರಗಂಡನೆಂಬಬಿರಿದಿ
ನಪೊಸಪೊಂ| ದೊಡರೆಡಗಾಲೊಳ್ಮೆರೆಯ | ಲ್ಕಡುಗಲಿಯೇನಾಧಿನಾ
ಥನಾರ್ಪಿಂದಿರ್ದಂ|| ||೪||

ಕಂ| ಭಸಿತಂತೀವಿರಲಾಗ| ಲ್ಪೊಸರುದ್ರಾಕ್ಷಿಗಳರಕ್ಕೆವಣಿಯೆಂದೆನಿ
ಸ| ಲ್ಮಿಸುಗುವದುಕೂಲದೊರೆಯಿಂ | ದೆಸೆವುತ್ತೇನಾಧಿನಾಥನುಬಾ
ತ್ತಿರ್ದಂ| |೬|

ಪರಭುಜದೊಳ್ಭಕ್ತಿಶ್ರೀ| ಯಿರೆಘಂಕದಪೊನ್ನ ಗೆಜ್ಜೆಘಂಟಿಗಳಲಿವ್ರ||

ತ್ರಿದಶಪತಿವಿದಿತಫಳಫಳಸು | ತ್ರಿದಶಲಿಯೆ ದೇವಾಧಿನಾಥನಾರ್ಗೆ ನೋಳ್ಪಡೆ |
ಹರಶರಣನುತಂ ನಿಜಮಂ | ದಿರದಿಂ ದೇವಾಧಿನಾಥನತಿಸಲ್ಲಕ್ಷಮನಾಂ
ತಿರದೆಪೊರಮಟ್ಟನತ್ಯಾ | ದರದಿಂ ಶಿವಭಕ್ತ ನಿತತಿಪೊಗಳ್ದಲ್ಕಾಗಳ್
ವಂದಿಜನಂಪೊಗಳಲ್ಕಾ | ನಂದದಿನೇ ದೇವಾಧಿನಾಥನತುಳಗೋತ್ತ್ರವಿ
ಪೊಂದೋಡಹರುಲಿಮಲ್ಕಂದೋಲ | ವಿಂದಂಬಜಾತಿವರ್ಗನತುಳಸಂಭ್ರಮ
ದಿಂದಂ | ||೯||

ನೊಸಲೊಳ್ವಿಭೂತಿಯಿಲ್ಲದೆ | ವಸುಧೆಯೊಳಸಿವಿದಿದಘಟದಗಂಧನೆ
ನಿಪ್ಪು | ಬ್ಬಸದಬಿರಿಪೆತ್ತ್ರಿನೆರೆಸಾ | ರಿಸುತಂ ದೇವಾಧಿನಾಥನೆತ್ತ್ರಯ
ರ್ದಂ || ||೧೦||

ವ|| ಅಂತೇವಾಧಿನಾಥನೆತ್ತರುತ್ತಿರಲಿತ್ತ ಲೋವರ್ಗವಸಾಸಾಳ್ದಗಣ್ಯ
ದೀವಿಗೆಯೊಳರಸಿನೆಲನಂ ನೋಳ್ದುತ್ತೂರಿಕೇರಿಕಾದುವ ಭಟರಂಗಾಣ
ನೆನುತ್ತುಕಿರ್ ಸೊಕ್ಕಿರ್ ಜಲಕಾರರಕರಭಭೀರುಂಡನೆಂಬ ಬಿರಿದಿನೆಸೆ
ಗಳಸಿಕೊಳುತ್ತಮೊಂದು ಗಳಯೆತುದಿಯೊಳ್ಮು ರುಪೊನ್ನಪೊಟ್ಟಣ
ಮಂ ಕಟ್ಟಿತನ್ನೊಡನೆಕಾದು ವಗೆಕೊಟ್ಟಪನೆಂದುಸಾರುತ್ತಂಪುರ
ದೊಳಗೆ ಬರುತಿರ್ಪನಂದುಬರ್ಕೊಬರ್ ದೇವಾಧಿನಾಥನಿದಿರಾಗಿಬ
ದಾಗಳ್ ||

ಕಂ|| ಸಂಗರಲುಪಟನಾರ್ಪರ್ಗೆ | ಜಂಗಮುಕೊಳ್ದಿಪನೆನುತಮುಸಮು
ತ್ತ್ರಮದಿಂ | ಲಂಘಿಸಿಗಳಯೊಳ್ಕಟ್ಟಿದ | ಪೊಂಗಳಪೊಟ್ಟಣಮನಿರದೆಪಿಡಿ
ದವಾಗಳ್ || ||೧೧||

ವ|| ಅಂತುಪೊನ್ನಪೊಟ್ಟಣಂಗಳು ಮಂವರಿದುತಂದುಶಿವಭಕ್ತರ್ಜನ
ಗಳ್ಗೆ ದೇವಾಧಿನಾಥಂಕಾದಲ್ಪುರಮಟ್ಟಾಗಳ್ ||

ಕಂ|| ಬಿರಿದಿನಭಟನಂಕರೆವುತೆ | ಪಿರಿದಪ್ಪಬಂಚೋವನ್ನ ಪನಮುಂದಿ
ದೆಡೆಯೊ | ಳ್ಕರಮೆಸೆವಕಳನನಾಗ | ಳ್ಪರದಿಂ ದೇವಾಧಿನಾಥನೊಲವಿಂ
ಪೊಕ್ಕಂ | ||೧೨||

ಅಂತುಪೊಕ್ಕು

ಕಳನೊಳ್ಪುಬನೆಗಪ್ರಸ್ತಂ | ಫಳಕವಗರ್ಫರಿಗಳುಲಿಯೆ ವಿದಿತೆಳಪು
ತ್ರಂ ಪೊರೆವಸಿಮುಂಜವಿಪ್ರತ್ರಾ | ವರ್ಗಳವಿಂ ದೇವಾಧಿನಾಥನಾಂತಿ
ರಿತ್ತಂ || ||೧೩||

ಪೆರ್ಬರೆಯುಂಪೊಯ್ಸುತ್ತಂ। ಬೆಬ್ಬಿರಿದಾಲುತ್ತೆ ವೀರಶೃಂಗಾರಮನಾಂ
ತುರ್ಬಿಪುಟನೆಗೆವುತಿರಲತಿ । ಗರ್ಬದಿಮಾರಾಂಕನೆನಿಪಭಟನೆೞ್ತಂ
ದಂ। ।೧೪।

ವ. ಅಂತುಮಾರಾಂಕನೆೞ್ತಂದುಕಳನಂಪೊಗಲ್ಕೇಣಾದಿನಾಥಂಮೂ
ದಲಿಸಿಮುಂಪೆಗದ ಭೂಮಾನಮನರಿದುದೂರಗತಿ ಚಿತ್ರಗತಿಗಳಂತೋ
ರಿಜತ್ತಾಯಿತಂಮಿಕ್ಕುಹಲಗೆಯು ಹಲ್ಲಣೆಯಂತೆರೆದು ನಾಲ್ಕುತೆರದಥಾ
ರೆಯುಂ ಮೂರುತೆರದನಿವಾರಣೆಯುಂ ನಾಲ್ಕುತೆರದಪವ್ರೊಯ್ಗಂಬಿತ್ತ
ರಿಸಿ ಖಡ್ಗಭ್ರಮಣಬಿನ್ನಾಣಮಂ ಬೀರಿಪಗಲ್ದೊಳರಾಜಂನೋಡಿಮೆ
ಚ್ಚುತ್ತಿರಲಾಗಳ್।

ಕಂ। ಪಿರಿದುಜನಮದ್ಭುತಂಬಡು। ತಿರಲಸಿಯಿಂದರಿಯುಸಿರಮ ನರಿ
ದಂತಾಗ । ಳ್ಪರದಿಂದಪ್ಪರಿಸುತ್ತಂ। ದುರುಗಲಿಯೇಣಾದಿನಾಥನಾರ್ಪಿ
ನೊಳೆಸೆದಂ॥ ।೧೫॥

ಖಳನತಲೆಕಿಡಿದುಭಯದಿಂ । ಕಳನೊಳ್ಬೀಳಲ್ಕೆಜೀವಮಂತದುತಾ
ರಾ। ಚಳಕಂಪೋಗಲ್ದೊಲಪಿಂ । ದಿಳೆಯುರಸಂಭಕ್ತನಂಮುದಂಮಿಗೆ
ಪೊಗಳ್ದಂ। ॥೧೬॥

ವ॥ ಅಂತುಪೊಗಳ್ದುಕೊಂಡಾಡುತ್ತಂಪಗಲ್ದೊಳರಾಜಂಗಜಮನೇ
ರಿಸಿಮೆರೆಯಿಸೆಪಲವುಪೊಂಗಳಂ ಮೆಚ್ಚುಗೊಟ್ಟುಕಳುಪಲ್ಕೇಣಾದಿನಾ
ಥಂ ನಿಜಮಂದಿರಕ್ಕೆ ಬಂದುಸಂಭ್ರಮದಿಂ ಶಿವಭಕ್ತರ್ಗೆಬೇಡಿದುದಂ
ಕೊಡುತ್ತಂ ದಾನಿಗಳ್ಗೀಶ್ವರನೆನಿಸುತ್ತಂತನ್ನ ಕೈಯೊಳ್ಕಡಿದಮಾ
ರಂ ಕನಗಳಮಂಶಿವಲೋಕಕ್ಕಯ್ದಿಸುತ್ತಂಪಿರಿದುಜಸಮನಾಂತೀಪರಿ
ಯೊಳ್ಪಲವುವತ್ಸರಂ ಪೋಗುತ್ತಿರುತ್ತಿರ್ದನಂತುಮಲ್ಲದೆಯುಂ॥

ಕಂ॥ ಧರೆಯೊಳಗಾವಂಗೆಲ್ಲದ। ಪರಿಗಂಡೇಣಾದಿನಾಥನೊಳ್ಕಾದಲ್ಮ
ತ್ಸರಿಸುತ್ತೆರಾಜಗುರುಸಾ। ಸಿರಪೊನ್ನಂಕಟ್ಟಿಕೊಂಡುಕಳನಂಪೊಕ್ಕಂ

ವ॥ ಅಂತುಪಗಲ್ದೊಳರಾಜಂ ನೋಡುತ್ತಿರಲ್ಕಳನಂಪೊಕ್ಕು ಪೆಳ
ಯೋಗಿಣೀ ಬಲಮಂಕೊಂಡುಸಪಸರಪಡಿಗಳ್ಬೆಸನಾಗಳಂಕದಕುಟಿಲ
ಮಂತ್ರತಂತ್ರಯಂತ್ರ ಬೇಳುವೆತಿಲಕತಿಗರುಬಸರುಚ್ಚು ಧೂಪಲೇ
ಪಕಪಳಚಿಪ್ಪುತೋಳದಂಡೆರಕ್ಕೆಯುಮಣಿಬ್ರಹ್ಮಸೂತ್ರಘಟಕಗತಿಸ್ತಂ
ಭನವೆಂಬಕಾ ವಿದ್ಯಮಂಪ್ರಯೋಗತ್ರಿಓರ್ವೋಳ್ಮಾರಾಂಕ ಮಪ್ಪುರಾಜಗು

ರ್ಣನಿಶಿತಾಸಿಯುಂ ತ್ರಿಶೂಲಪುತ್ತ್ರಂವಾರಾಂತರತ್ರಿಸ್ತ್ರ ವೇಷದಿಂದುಬ್ಬ
ತಂದರಿಯುಕುವುಂತ್ರವುಂ ಹರನಬಲದಿಂ ನಿವಾರಿಸಿವೀರಭದ್ರಂಗೆ
ಡವಾಟ್ಟೇಣಾಧಿನಾಥ ನಾತ್ಮಫಲಕಖಡ್ಗಂಗಳಂ ಜಡಿದುಮೆರೆವಾ
ಸ್ವಪಕ್ಷಪರಪಕ್ಷಹೆಲ್ಲಣೆ ನಿರ್ವಾದವುಂದಗತಿಚಾರಣಹೂರ ಣೋ
ಟಚರ್ವಟಪ್ಪೆಸರಪಕ್ಕೆಸಾದಿದಿಕ್ಕರಿ ವೃತ್ತಮುಮಧ್ಯಪುಜಘನ್ಯ
ರಣೆತದಗ ಕಂತದಗ್ಗೆ ತಾಳದಟ್ಟವೆಂಬನಾನಾ ವಿಧಖಡ್ಗಬಿನ್ನಾ
ಣಮಂ ತೋರಿಜರಿದಟ್ಟುಮುಟ್ಟೆ ಮಿಕ್ಕುಪೊಕ್ಕುಬೊಬ್ಬಿರಿದಬ್ಬರಿಸುತ್ತ
ಗಳ್॥

ಕಂ॥ ಬಿಡೆಸಾಟಿಹಿಂಚೆತಡೆಯುದೆ । ಕಡುಗಲಿಯೇಣಾಧಿನಾಥ
ಯಿಂಪೋಯ್ಯ । ಲ್ಕಡಿದರಿಯುಶಿರಮನುರ್ವಿಗೆ, ಕೆಡಹಲ್ಕೋಳ
ಜಮತ್ತಿರಲಾಗಳ್॥

ವ॥ ಅಂತಾ ರಾಜನುರುಮಂಕಡಿದಿಕ್ಕಿ ಜಯದಿಂತನ್ನ ಸಾಸಿರ ಪೋ
ಶಿವಭಕ್ತರ್ಗಿತ್ತೇಣಾದಿನಾಥ ಮಾಹೇಶ್ವರಂಪ್ರತಾಪೋನ್ನತಿಯಿಂ
ತಿರ್ದನಂತುಮಲ್ಲದೆಯುಂ॥

ಕಂ॥ ಅರಿಯೆಯೇಣಾದಿನಾಥಂ ।ಧರದೊಳ್ತ್ತವಿಸಲ್ಕೆ ಮುವನತನ
ಮುನಿಸಿಂ ದಿರದೆನಿಜಜನನಿಗರುಹ ।ಲ್ಪಿರಿದಳಲಿಂ ಕೋವ್ವರ ವನಪೋ
ವೇಳಲ್॥

ಎಲೆಮಗನೆಭಕ್ತವೇಷಂ। ಸಲೆಜೀವಂಭಸಿ ತವಿಟ್ಟರವನೀಶ್ವರನೆಂ।
ಲವಿಂಪೆಕಾಣ್ಬರದರಿಂ॥ ಗೆಲಲಕ್ಕಾಪಗೆಯ ನೆನುತೆಕುಟಿಲದಿ ನುಡಿದ

ವ॥ ಅಂತುಪಗೆಯುಮುಗಂಪೊಂಗಟ್ಟಿಸ್ಮರಿಸುವುದಂ ಕೇಳ್ದಾ ಹಾ
ನ್ನೊಡೆಯರಪ್ಪಮಾಹೇಶ್ವರರ್ಗೀವನೆನುತ್ತಂಬಂ ದೇಣಾದಿನಾಥಂ
ಗಳಪೊಟ್ಟಣಮುಂಪರಿದು ಕೊಂಡು ಪಗಲ್ಪೋಳ ರಾಜನಡೆಗೆಲ್ತಂ
ನಾಳೆಕಾಳಗಮೆಂದು ಪೇಳ್ದು ನಿಜನಿಳಯಕ್ಕೆಳ್ತಂದು ತಾಂತಂದ
ಳಂಮಾಹೇಶ್ವರರ್ಗಿತ್ತುಶಿವಲಿಂಗಧ್ಯಾನದಿಂದಂತಾಯಿರುಳಂ ಕಳೆದು
ರುದಿವಸದೊಳ್॥

ಕಂ॥ ಭಸಿತೋದ್ಧೂಳಿತತನುವಿಂ, ಪೊಸರುದ್ರಾಕ್ಷಿಗಳ ತೊಡಿಗೆ
ಪೊಂದೊಳಿರಿಂ। ಬಸ್ಟಸಲೆಕದಿನೆಸವುತೆಸರ। ಭಸದಿಂವೇ ಣಾದಿನಾ

ದೇಳ್ತಂದಂ॥ ೨೧।

ತರಳವೃತ್ತಂ। ।ಪರಮಭಕ್ತಸಮೂಹದೊಳ್ನಿಜಸತ್ವದುಗ್ರದೆಬಂದುಸ
ಚ್ಚರಿತಚೋಳನೃಪಾಳನೀಕ್ಷಿಸುತಿರ್ಪನಂಕಳದಲ್ಲಿಪೊ।ಕ್ಕರಿಭಟೇಭವ್ಯಾ
ಗೇಂದ್ರನಪ್ಪಮಹೇಶಕಿಂಕರನುರ್ಬಿಯುಬ್ಬರಿಸುತ್ತಂನಿಜಖಡ್ಗಮಂಜವಿ
ದುರ್ಬಿಚಾರಿಸುತೊಪ್ಪಿದಂ। ೨೨।

ವ॥ಅಂತುಬಿಂಕದಸಿಂಗರದೊಳಂಕದಕಳದೊಳ್ನಿಶ್ಯಂಕತೆಯಿಂ ದೀಕ್ಷ್ವ
ರಕಿಂಕರನಪ್ಪೇಣಾದಿನಾಥಂಘನಾರಾತಿಭಯಂಕರ ನೆನಿಸುತ್ತಿರ್ಪನ್ನೆ
ಗಮಿತ್ತಲ್!

ಮ॥ ಶಿರದೊಳ್ಕಂಠಕರಂಗಳೊಳ್ಕಟಿಲದಿಂರುದ್ರಾಕ್ಷಿಯಂ ತಾಳ್ದುನಿ
ರ್ಭರದಿಂಸರ್ವಶರೀರದೊಳ್ಭಸಿತಮಂಸಲ್ಲೇಪನಂಗೆಯ್ದುಶಂ।ಕರ ಪಾ
ದಾಂಬುಜಭಕ್ತನೆಂಬತೆರದಿಂಮಾರಾಂಕನುಬ್ಬುತ್ತಿತ,ತ್ಪುರದೊಳ್ಪೆರ್ಬ
ರೆಪೊಯ್ಸುತಂನಡೆತರುತ್ತಿರ್ದಂಘನಾಟೋಪದಿಂ। ೨೩!

ಕಂ। ನೆರೆವಾತ್ಮಮಿತ್ರಭಟರೊ। ತ್ತರದೊಳ್ಪರಿಗೆಗಳ ಮರೆಗಳೊಳ್ಸೀ
ಗುರಿಯ್॥ ಲ್ಲರಿಗಳನೆಳಲೊಳ್ತದ್ರಿಪು।ಪರಿವಾರಂಕಾಣಬಾರದಂತಿರೆಬಂದಂ।

ವ.ಅಂತುತನ್ನಂಪುಚ್ಚೆ ವಾಸುಂಕಿಟ್ಟು ತದ್ವೈರಿಭಟಂಬಂದಂಕದ ಕಳ
ನಂಪೊಲಗಂಡುಝಳಪಿಸುತ್ತೇಣಾದಿನಾಥನಿದಿರಾಗಿರ್ಪನ್ನೆಗಂ।

ಕಂ ಗಳಿಯೋಡಲ್ಪುಗೆಝುಲಗಂ,ಸೆಳೆದಕಟಮೃತವನೆತೋರಿವಿಷವೆರ
ದಂತಾ।ಗಳೆಭವಭಕ್ತಾಕೃತಿಯಂ। ತಳೆದಿಗದೇಣಾದಿನಾಥನಿದಿರೊಳ್ನಿಂ
ದಂ॥ ೨೪

ವ,ಅಂತಿದಿರಾಗಿ ನಿಂದಿರ್ದುಪರಿತಪ್ಪುಮೂರಾಂಕದಶಿವಭಕ್ತ ವೇಷಮಂ
ಕಂಡೇಣಾದಿನಾಥನಸಿಫಲಕಮಂಬಿಸುಟುಶರಣೆನುತ್ತಿಂತೆಂದಂ।

ಚಂ। ಶಿವಶಿವದೇವರಾವದೆಸೆಯಿಂನಡೆತಂದಿರಿಜೀಗಮೆನ್ನದೇ।ಹವನಿ
ರದೊಕ್ಕಲಿಕ್ಕಿಕಡಿದಿಕ್ಕಿ ವಿನೋದಮನಾಂಪುದೆಂಬತ। ಚ್ಛಿವಪದಭಕ್ತ
ನಂಕುಟಿಲನಪ್ಪರಿನಿಷ್ಕೃಪೆಯಿಂದಮಕ್ಕಟಾ। ತಿಖಿದಸಿಯಿಂದೆಪೊಯ್ದು
ತಣಿವಿಲ್ಲದೆಮುತ್ತಿರಿದಂರಣೋರ್ವಿಯೊಳ್। ೨೫!!

ಕಂ। ಇರಿದಲಗೊಡಲೊಳ್ಪುಳಕಂ। ಪೊರಮಡುವೊಲ್ಪೊಣ್ಮಲುರ್ಬಿಸಂ
ತಸದಿಂದಂ।ಕರೆಗೊರಲನೆಶರಣೆಂಬಾ। ಸರಗಲಿಯಂನೋಡಿವೈರಿಯುಸಿ
ಯಂಬಿಸುಟಂ। ॥೨೬॥

ಕಂ॥ ಅಲಗಂಬಿಸುಟಾಪಗೆಪೆರ| ತೊಲಗಲ್ಕೇಣಾದಿನಾಥನೀಶ್ವರಕ್ಷ ಷ|ಕ್ಕೆಲವಿಂದೊಡಲಂಕೊಟ್ಟಾ| ಫಲಕ್ಕೆ ಶಿವನೋತುರೂಪುದೋರಿದ ನಾಗಳ್| ೨೮|

ಮ.ಸ್ರ॥ ಒಲವಿಂದಾಕಾಶಮಂಮುಟ್ಟುವವಿಕಟಜಟಾಜೂಟದಿಂದ್ದೆ ವಗಂಗಾ|ಜಲದಿಂದರ್ಧೇಂದುವಿಂದಂದ ಹನನಯನದಿಂ ನಾಗರಿಂನೀಳ ಡಿಂದು|ಜ್ವಲಭಸ್ಮಾಲೇಪದಿಂಸಿಂಧುರದ ಜಿನದಿಖಟ್ವಾಂಗದಿಂ ಕೂಡಿ ಮಂ|ಗಳೆಯಿಂಪಂಚಾಸ್ಯದಿಂದಂದಶಭುಜದಿ ಶಿವಂಮೂರ್ತಿವೆತ್ತೊಪ್ಪಿ ದಂ॥ ೨೯|

ಕಂ॥ ಹರಮೂರ್ತಿಯನೊಲ್ದೀಕ್ಷಿಸು|ತಿರದಾಗಳರಣಕಮಲದೊಳ್ಪ ರಳುತ್ತಂ| ಪರವಶದೊಳ್ಭಕ್ತನಿರ| ಲ್ಗಿರಿಜಾವರನಲ್ಮೆಯಿಂದಮೆತ್ತಿದನಾ ಗಳ್|

ವ॥ ಅಂತುಪರಮಕೃಪೆಯಿಂದೇಣಾದಿನಾಥನಂ ಸದಾಶಿವಂಪಿಡಿದೆತ್ತಿಮೆ ಯ್ದಡವಿಮುತ್ತಮೊಗಳ್

ಕಂ॥ ಪರಿಕಿಪೊಡೆನ್ನಯವೇಷ| ಕ್ಕಿರದೊಲವಿಂತನ್ನ ದೇಹಮಂಕೊ ಟ್ಟಂತೀ| ಶರಣಂಗಾದೊರ್ಕೆಯೆಂದಾ|ದರದಿಂದಂನಂದಿಗೆಂದನಂದಗಜ ಕರಂ |೩೦|

ವ॥ ಅಂತೇಣಾದಿನಾಥನಭಕ್ತಿಫಲಮಂ ಕೊಂಡಾಡುತಿರ್ಪಾಗಳ್

ಕಂ॥ ಘನಮಹಿಮನೆನಿಸುವೇಣಾ| ದಿನಾಥನಂತಿವಿದಪಾಪಿತಾನೆ ತಲಿಪೋ| ದನಿರವೆಭಕ್ತಾಕೃತಿವಿದಿ| ಜೆನೆಸುಜನರವೈರವೇನನೀ| ದುಧರೆಯೊಳ್॥

ತಾನೇಸೆದುಬರಿಸೆಬಂದವಿ| ಮಾನದೊಳೇಣಾದಿ ನಾಥನಂಕೈ ಗೆಗಾ| ರೀನಾಥಂಕುಳ್ಳಿರಿಸಿಮ| ಹಾನಿಯುವುದಿನಿಯಮಿಸಲ್ಕೆ ಚಿತ್ತಾಗಳ್| ॥

ಸುರನಿಕರದಲರಮಳೆಯೊ| ಳ್ಸುರುಚಿರನವರತ್ನ ಖಚಿತ ದಿವ್ಯವಿಮಾನ ಹರಭಕ್ತಂಬೆರಸಾಗ| ಳ್ವರಕಜತಾಚಳಕೆಬಂದುದುತ್ಸವದಿಂದಂ॥

ವ॥ ಅಂತುಬಂದಪೀರವಮಹೇಶ್ವರ ನಪ್ಪೇಣಾದಿನಾಥಂಬೆರಸುಕರು ಣಾಕರನೆನಿಪಶಂಕರಂಪರಮಾನಂದದಿಂದಖಿಳ ಪ್ರಮಥಗಣಸಮೇತ ಕೈಲಾಸಸಾ ನಪಂಟಪ ಸೋಕೊಡ್ಡೋಲಗಂ ಕೊಟ್ಟುಕುಳ್ಳಿರ್ದಾಗಳ್

ಕಂ॥ ವಿೂನಧ್ವಜಪಿತನತಿಸು। ಮ್ಮಾನದಿಪೊಗಳಲ್ಕೆ ಮೆಚ್ಚಿ ಗಣಪದ
ಮಂಕೊಟ್ಟೇಣಾದಿನಾಥನಂಮೆರೆ। ದಾನಗಜಾರಮಣನೆಸೆದನಾಸ್ಥಾ
ಯಿಕೆಯೊಳ್॥ ೨೫॥

ಅನುಪಮಶಿವನೊಲ್ದೇನಾ। ದಿನಾಥನಂರಜತಗಿರಿಗೆಕೊಂಡೊಯ್ಯ
ಲ್ಕಾ। ವಿನುತಪಗಲ್ಬೋಳನೃಪಂ। ಮನವೊಲ್ಬಿರಗಾಗಿರುತ್ತಿರಲ್ಕಂ
ತಾಗಳ್॥ ॥೨೬॥

ಗದ್ಯ। ಇದುಸಕಳಸುರನಿಕರಮುಕುಟ ಮಾಣಿಕ್ಯ ಮಾಲಾಮರೀಚಿಪುಂ
ಜರಂಜಿತಪಾದಪಂಕಜಶ್ರೀ ಮತ್ಪಾಲ್ಕುರಿಕೆಯ ಪುರಾಧಿಪಶ್ರೀ ಸೋಮ
ನಾಥ ಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪ ತ್ರಿ
ಷಷ್ಟಿಪುರಾತನಚಾರಿತ್ರದೊಳೇಣಾದಿನಾಥ ಮಾಹೇಶ್ವರ ಕಥಾವೃತ್ತಾಂ
ತಂತ್ರಯೋವಿಂಶತ್ಯಾಶ್ವಾಸಂ



## ಇಪ್ಪತ್ತುನಾಲ್ಕನೆಯಾಶ್ವಾಸಂ

### ಪೊನೆಯಾಂಡರ ಕಥನಂ

ಚಂಡಭುಜಬಲದಕಲಿಪೊನೆ। ಯಾಂಡರ್ಗಾಶ್ರಕ್ಕೆ ಮೆಚ್ಚಿ ಗಣಪದ
ವಿತ್ತಾ। ಖಂಡಲಸುತನೆನಿಸಿದಫಣಿ। ಕುಂಡಲನೊಲ್ದೀಶನೊಲ್ದುಪಾ
ಲಿಕೆಸಮ್ಮಂ॥ ॥೧॥

ವ॥ ವಿಸ್ತರಮಾದೊನೆಯಾಂಡಂ

ಕಂ॥ ಸೋಗಯಿಪವಿಭೂತಿರುದ್ರಾ। ಕ್ಷಿಗಳಿಂದೊಪ್ಪುವರನೀಕನೆಂದೀ
ಕ್ಷಿಸುವೀ। ಬಗೆಯಿಂಶಿವೈಕ್ಯರಂನೆ। ಟ್ಟಗೆವುನ್ನಿಸುತಿರ್ಪನವುಮಾಕಲಿ
ಪೊನೆಯಾಂಡಂ॥ ।೨॥

ವ॥ ಮತ್ತ

ಕಂ॥ ಪಿರಿದಘಟುಮಿಗಲ್ಕೆೞ್ತಲೋ। ರ್ವರೆಯೊಳ್ ರಾವುತ್ತವೇಷಮಂ ತಾಳ್ದಿ ತಿವಿ। ಸ್ತುರಮುಖದಿಂ ನಳರೇಷಂ। ತರನುರೆಪಳಿವುತ್ತ ವಿವ್ವಣಾ ವೋನೆಯಾಂಡಂ! ॥೪

ವ॥ ಅಂತುರಾವುತ್ತವೇಷಮಂತಾಳ್ದು ವಿಭೂತಿಯಿಲ್ಲದೆಮುಳಿವತುರಂಗಿಗಳಗಂಡನೆಂಬ ಬಿರುದಿನಪೊಡರ್ಪಿಂ ಚೋಳಮಂಡಳದೊಳೆಲ್ಲಿಸಂಗ್ರಾಮಮುಂಟಲ್ಲಲ್ಲಿಗೆ ಪೋಗಿನಿಜತುರಗಮನೇರಿನಿಂದಿರ ಲುಭಯಬಲದೋಳಾರ್ತನರ್ತಮತಮುಗೆ ಪೇಳ್ಕೆಂದುಸಹಸ್ರಸಂಖ್ಯೆಯಪೊಂಗಳಂಪಡೆ ಪೇಗಿ ಯುವರಪಗೆಗಳಂತರಿದು ಒಳಿಕೆಯುದ್ಧಗೆಲ್ಲಮುಂಕೊಟ್ಟುನೆಗಳಿತನಮಂಬೀರುತ್ತಂ ಮೋನೆಯಾಂಡನಿರುತಿರ್ದನಂತುಮಲ್ಲದೆಯುಂ॥

ಉ॥ ಈ ತೆರದಿಂದಮತ್ಯಧಿಕಸತ್ವದಿ ನರ್ಚಿಸಿಭಕ್ತಸಂಕುಳ। ಕ್ಕೋತುಮುತೀವಹರ್ಷದೊದವಂಪಡೆಯಲ್ಕನವಿತ್ತಮಂಮುಹಾ। ಪ್ರೀತಿಯೊಳತ್ತು ಭಕ್ತಜನಕಲ್ಪಮಹೀರು ಹನೆಂದೆನಿಪ್ಪವಿ। ಖ್ಯಾತಿಯೊಳರ್ದನೊಲ್ದುಮೋನೆಯಾಂಡ ನತಿಪ್ರಬಳಪ್ರತಾಪದಿಂ॥ ॥೫

ವ॥ ಅಂತತಿಪ್ರಬಳತನದಿಂ ದಿರುತ್ತೊಂದು ದಿವಸಂ॥

ಕಂ॥ ಭಸಿತವಳವಟ್ಟಪ್ಪೈವರ। ಪೊಸರುದ್ರಾಕ್ಷಿಗಳರಕ್ಕೆವಣಿಯಾಗಿರಾ। ಜಿಸೆದುಗುಲದುಡಿಗೆಪೊಂದೊಪ। ರೆಸೆಯಲಿರ್ಕ್ಕೆಮೋನೆಯಾಂಡವೀರಸೊಪ್ಪಿದನಾಗಳ್॥ ॥೬

ವ॥ ಅಂತೊಪ್ಪುವಾಗಳ್।

ಕಂ॥ ಅನಿಲನನಹಿಪತಿರಿಪುವಂ। ಮನಧಿಂದಂಮಿಗಿಲೆನಿಪ್ಪಘನವೇಗ ಮನು। ಳ್ಳನುಪಮತುರಂಗವಂಕಲಿ। ಮೋನೆಯಾಂಡನಪದರ್ದು ಕರಿತರಕ್ಕೇಱೆತ್ತಂದಂ॥ ॥೭

ವ॥ ಅಂತೇಱೆತ್ತಂದುಕರಿಯೂರಂಪೊಕ್ಕುತುರಂಗದಿಂದವನಿತಳಕ್ಕವತರಿಸಿಮೊನೆಯಾಂಡಂ ದೌವಾರಿಕನಿ ವೇದಿತಾಸ್ಥಾನಮಂಪೊಕ್ಕು ಪನಲೆ ಚೋಳರಾಜನ ಸಂಮುಖಮಾಗಲ್ಕಾ ತಂಶಿವಭಕ್ತನಪ್ಪುದರಿಂಪತ್ತಿಗೆ ಕರೆದುಕುಳ್ಳಿರಿಸಿ ಸನ್ಮಾನಿಸಿ ನೀವಾರೆಂದು ಬೆಸಗೊಳಲ್ಕಾಂತುರಂಗಿಯೆಂದು ಪೇಳಲ್ಕೇಳ್ದು ಕಂತಸಂಬಟ್ಟಂತಪ್ಪಸುಭಟರೆನ್ನ ಪೊರೆಯೊಳಲ್ಪೇಳ್ಕೆಂದು ಸಹಸ್ರಸಂಖ್ಯೆಯಪೊಂಗಳಂ ಕೊಟ್ಟುಕಳುಪಿತಪ್ಪರಂ ಳ್ಳುಖದ್ದಿದಿರುತ್ತಿಪ್ಪನ್ನೆಗಂ

ಮ॥ ಸ್ರ॥ ನೆಲಸಿಂದಂ ಸಿಂಹಳಸ್ತ್ರೀಕಚದ ವಿಚಕಿಳಸೌಗಂಧ್ಯಮಂಬೀ
ರುತಂ ಸದ್ಬಳವದ್ವಾಮನೇಭ ವ್ಯಕಟಗಳಿತದಾನಾಂಬುವಂ ಸೂ
ಸುತಂ ಘೋಳತಳಕೆಲ್ಲಂ ದಾನವೀವೃತ್ತಿನಜನ ದೆಸೆಯಿಂ ಬೀದುದಾನಂದ
ಕಾರಂ ಮಳಯೋರ್ವಿಭೃದ್ವಿಹಾರಂ ಘನಸುರಭಿಮಳ ಚ್ಛೈತ್ಯಪೂರಂ
ಸಮೀರಂ॥ ॥೭॥

ಆಸಮಯದೊಳ್॥

ಚಂ॥ ಮೊದಲದಳಂ ಪೊದಳ್ದು ಬಿಡೆಪಾದರಿಯೊಳ್ತಲೆದೋರೆ ಚೂತ
ದೊಳ್ಮದದಿ ಶುಕಾಳಿ ಕೊಕ್ಕರಿಯೆ ಕೋಗಿಲೆ ಬಗ್ಗಿಸೆ ಪೇಪುದೋ ಕೆಷ
ಟ್ಪದತತಿ ಪೂತಮಲ್ಲಿಗೆಯ ಕೇತನವೆತ್ತೆ ವಿಯೋಗಿಜಾಲವೆ ಯ್ದೆದೆಗೆ
ಡೆತೆಂಬೆಲರ್ಪಲಿವ ನಾಯಕಪಾನ ವಸಂತನೆಯ್ದಿದಂ॥ ॥೮॥

ಮ॥ ಸ್ರ॥ ರಜನೀನಾಥಂಗೆ ನೈರ್ಮಲ್ಯತೆ ವಿಚಕಿಳಕಾಳವಾಮ್ರಕ್ಕೆ
ಪಂಚತ್ಫಳಂ ಭೋಗಿಜನಕ್ಕತ್ಯಂತರಾಗಂ ಪರಭೃತನಿಚಯಕ್ಕಂ ಸು
ಸ್ವರಂ ಚೈತ್ರಜದೋರ್ದಂಡಕ್ಕೆ ದರ್ಪಂ ಶುಕತತಿಗೆ ಮುದಂ ಪೆರ್ಚೆ
ಬಂದಂ ವನಶ್ರೀ ನಿಜಕಾಂತಂ ಕೀರ್ತಿವಂತಂ ವಿರಹಿ ನಿಕರಹೃತ್ಕುಂತನಂ
ತಾ ವಸಂತಂ॥ ॥೯॥

ಪಸಿರ್ವೆತ್ತೊಪ್ಪುವ ನಂದನಂ ಜನಪದಂ ಕೇಳೀನಗಂ ಕೋಟೆಕಂ। ತು
ಸಖಂ ಹಂಸನವಾತ್ಯಸೂರ್ಜಿತ ಸುಗಂಧಂ ಕೋಶಮುನ್ಮತ್ತಭೃಂಗ
ಸಮೂಹಂ ನಿಜಕಿಂಕರಾಳಿ ನಿರುತಂ ತಾಂಗೂಡಿ ಸಪ್ತಾಂಗ ರಾಜ್ಯಸ
ಮೇತಂ ಪಿರಿದೊಪ್ಪುತಿರ್ಪನೊಲವಿಂ ಚೈತ್ರಕ್ಷಮಾವಲ್ಲಭಂ। ॥೧೦॥

ಮತ್ತಂ।

ಕಂ॥ ಧರೆಗೆ ವಸಂತಾಗಮಮಂ ಪಿರಿದರಿ। ಪುವುದರಿನಾ ವಸಂತದೂತಿ
ಸತಾರ್ಗಂ। ನಿರುತವುದಾಯ್ತು ನಲಘೋರ್ಗೆ। ತ್ತರ ದಿಂಡದಿಪುರ್ಗತ್ತೆ
ಯೊಪ್ಪುತಿರ್ದತ್ತಾಗಲ್॥ ॥೧೧॥

ಮುನಿಸಿಂ ವಿರಹಿಜನಂಗಳ। ನನಿತಂತೆಗದಿಕ್ಕಿ ಬಿಡದೆ ಸುಡುವೆನೆ ಸು
ತ್ತಂ। ಮನಸಿಜನೊಟ್ಟದ ಪೆರ್ಗಿಚ್ಚಿನವೊಲ್ ಲದರ್ಪಲಾಶಸುಮತತಿ
ಯೆಸೆಗುಂ। ॥೧೨॥

ಅದಲ್ಲದೆಯುಂ

ಕಂ॥ ವನಲಕ್ಷ್ಮಿ ಸುರಭಿನಂಹೊಃ। ಜನಕೆಡೆಮಾಡಿರ್ಪ ಪೊನ್ನ ಬಟ್ಟ

ಲ್ಲಿಲ್ತು ವೆನಲಲರ್ದ ಕರ್ಣಿಕಾರದ। ಘನತರಕುಸುಮಾಳಿಕಣ್ಗೆಸೊಗ
ಯಿಸಿತೋರ್ಕುಂ॥ ।೧೪॥
ಚಂ॥ ವಿಸಿತಕೋರಕಂಕಲಿಕೆಬಿಚ್ಚಿ ಗೊನರ್ವೆಸಕಂದಳಿರ್ತನ
ನನೆವೊಗ್ಗೆ ಪೂಮಿಡಿಕನಲ್ಮಿಡಿಕಾಯುದೋರೆದೋರೆಸಲ್ಲಲಿತ ವೆನಿಪ್ಪ
ಣ್ಣು ತನಿವಣ್ಣ ವೆನಿಪ್ಪವರಿಂದೆ ಶಣ್ಗೆ ಪಂಗಳ ವೆನಿಸುತ್ತ ಪೊಪ್ಪಿ ದುದು
ಕಾಮನತೋಮರೆದಂತೆಮಾಮರಂ ।೧೮॥
ಅರೆಗಿಳಿವಿಂಡಿಗಿಕ್ಕೆಕಳಕಂಠ ಸಮೂಹದಜನ್ಮಭೂಮಿಷ। ಟ್ಚರ
ನಿಕಾಯುದೇಳ್ಗೆಯತವರ್ಮನೆ ಕಾಮನರಾಜಧಾನಿಸಂ, ಚರಿಸ
ರನುಕ್ಕಡವೆನಲ್ಕನವಪ್ಪಫಲಪ್ರದಾನದಿಂ ।ಪಿರಿದೆಸೆದತ್ತು ಪಾಥವಸತಿ
ಮರದಂಡದಿಬಂದ ಮಾಮರಂ॥ ।೧೯॥
ಮತ್ತಮಲ್ಲಿ
ಮ॥ ವರಚೂತಾಂಕುರಮಂ ಕರ್ದುಂಕಿಸೊನೆಯುಂಸಂತೃಪ್ತ ಮ
ದೀಂಟಕಂ ಧರರಂಧ್ರಂಘನಶುದ್ಧಮಾಗಿ ಪಿರಿದುಂಪ್ಪೈವೆರ್ಚೆಸಂತೋ
ಷದಿಂ ಸ್ಮರರಾಗಂದಳವೇರೆವಾಧವನ ದರ್ಪಂವಿಸ್ತರೆಸತ್ಕಾಕಳಿಸ್ವರ
ಮಂ ಬೀರೆವುಗಿಲ್ಪುಗಿಲ್ಕರೆದುದಂದುಬಿದ್ದರ್ದು ಪುಂಸ್ಕೋಕಿಲಂ॥
ಮತ್ತಂ
ಕಂ॥ ಲಲನಾನೀಕ್ಷದಪದಹತಿ । ಯುಲಕ್ಷ್ಯಕಂಪತ್ತ್ರಲಧಿಕತೆರಡನ
ಕ್ಕ್ರಂವಳವಂತಿರೆಕೆಂದಳಿರಿಂ। ತಳಿರ್ತಕಂಕೆಲ್ಲಿವಿಟಪಿಕಣ್ಗೆಸೆದಿರ್ಕುಂ॥
ತರುಣಿಯುರಾಲಿಂಗನದಿಂ। ನತರಾನಂದವುನೆಪಡೆವುದಚ್ಚ ರಿಯೆ
ಸೌಂ॥ ದರಿಯುದ್ವೊಲೆಗಳಸೋಂಕಿಂ । ಮರನೆನಿಸುವಕುರವಕಂ
ರ್ತನೆಸೆದಿರ್ಕುಂ ।೧೪॥
ಘನಕಾಮುಕನಂಪವನಂ। ಗನೆಯುಳಕಣ್ಬೆಳಗುಮೇಲೆಬೀಳಲ್ಕು
ದಿಂ । ತನುಪೆರ್ಚೆತಳ್ತುವರಚ್ಛೈ । ತ್ರನತಿಳಕದತೇದೆತಿಳಕವೆಸೆದಿರ್
ಕುಂ॥ ।೧॥
ಮತ್ತಂ
ಎಲ್ಲಾಕುಸುಮವನುಳಿದಳಿ। ಗಿಲ್ಲದೆನಿಂಬಾಯೆನುತ್ತೆ ಬಾಯ್ದೆರೆದ
ತ್ತು ಮ್ಮಲ್ಲಿಗೆಕರವಂತಿರೆಪೊಸ i ಮಲ್ಲಿಗೆಮುಲರೆಸೆದುವ ವಸಂತಾಗಮ
ದೊಳ್। ।೨॥

ಪರಿಮಳಪವನ ಕ್ಕೆಗೆಮುಪೊಸ । ಬಿರಿಮುಗುಳ್ಗಳಮೇಲೆಬಿಡದೆಪತ್ತಿ

ಳಗ! ಶ್ವರವನಲಕ್ಷ್ಮಿಯಮುತ್ತಿನ| ಹರಿನೀಲದತೊಡವಿನಂತೆ ಕಣ್ಗೆಸೆದಿ ರ್ಕು೦|| ೨೭

ಒಸಗೆವಿಗಲ್ತೆವನಸ್ತ್ರೀ | ವಸಂತಕಂಗುರೆಸಿವಾಳಿಸುವನವಪೀ ಷ| ಪ್ರಸರನೆನೆಕನಕಛಂಷಕ| ಕುಳುಮಂಗಳೊಳಂಕೆವೆತ್ತು ಕಣ್ಗೆ ಸೆದಿರ್ಕು೦|| |೨೮||

ವನಲಕ್ಷ್ಮಿಮಧುಗೆಪ್ಪುಗವುದ | ವಿನಿಹಿತನವಕನಕಚಷಕವುಂನೀಡ ಧಳೆಂ| ಪೆನಲಿರ್ದಗಿದಳಸವೇತ್ರಂ| ಕನಕಾಂಬುಜಮುಲರ್ದುಮೆ ದ ದಾ ತ್ರಿಳಿಗೊಳದೊಳ್| ೨೯|

ವ|| ಮತ್ತಂಚಿತ್ತಜನಭುಜಶ್ರೀಯಲರ್ದಂತೆ ವಿಚಕಿಳನಿಚಯಂ ವಿಕಾಸಮನೆಯ್ದಲುಂ ಮಲಯಾನಿಳನಲೀಲೆಯಂತೆಸುರಭಿ ಯಸಿರಿಬೀ ದಿವರಿಯಲ್ಲಂರತಿಯಚಿತ್ತಪ್ರಸನ್ನದಂತೆಪುನ್ನಾಗಮುನ್ನತವಾಗೆಯುಂ ಭೋಗಿಜನದಹರ್ಷಂ ಪೆರ್ಚುವಂತೆಮರುವಕವಚ್ಚ ರಿಯಾಗೆಯುಂವಿ ಯೋಗಿಪ್ರಕರದಾವನದಂತೆ ಜಾತಿಯವೊಗಂಕೊರಗಲುಂ ಪಾಂಥ ಸಂತತಿಯಂತಃಕರಣದಂತೆಮಡಲ್ತ ಮಾಲಲತೆಕತ್ತರಿಸಲುಂ ಸೌಂ ದರಿಯರಾನಂದದಿಂ ಪಾಡುವಹಿಂದೋಳರಾಗದಂತೆ ಲಳಿತಾಂದೋಳ ಚೇತ್ಕೃತಮುದಯಿಸಲುಂ ವಸಂತರಾಜನಕೀರ್ತಿ ಯಂತೆಬೆಳ್ದಿಂಗಳಪ್ರ ಜ್ವಲಿಸಲುಂ ಪರವಧುಯೋಗಿಜನದಹೃದಯದಂತೆ ಮಿಸುಪಬಿಸಿಲೆಸ ಕಂಪಸನ್ನಿಸಲತಿರಮಣೀಯವಸಂತದೊಳ್||

ಚಂ| ನಳನಳಿಪಿಕ್ಷುಕಾರ್ಮುಕನನೇರಿಸಿ ನೂತನಪುಷ್ಪಬಾಣಮಂ ಸೆಳೆದಳಿಮಾಲೆಯೆಂಬತಿರುಗಿಕ್ಕಿ ಮಹಾಘನದಿಂವಿಯೋಗಿಸಂಕುಳದೆರ್ದೆ ಯಿಂಧನುಚ್ಚಳಿಸಿನಿಲ್ಲದೆ ಪ್ರಯ್ವಿನವೆಚ್ಚು ಮೇದಿನೀತಳಕ್ಕಿರಿದಿಕ್ಕಿ ದಂಮದನಭೂಪತಿಕಾಯ್ದು ವಸಂತಮಾಸದೊಳ್|| ||೩೦||

ಚಂ| ಸ್ಮರನನಲಕಂಬುತಾಪಸ್ವರ ಮೋಲ್ದಿಗುತ್ತಿರೆ ದಗ್ಧ-ಭ್ರೋಧಮುತ್ತ ರವುನವಂಗನಾರತಿಗಳಂ ಬಯಸುತ್ತಿರೆಕೋಕಿಲಾಳಿ ಸೊಕ್ಕಿರದೆವುಗಿ ಲ್ಪುಗಿಲ್ಗರೆವುತುಬರ್ದೆತುಂಬಿಗಳ ತ್ತುಲಿತ್ತ ಸಂಚರಿಸುತಿರಲ್ಕಡಂ ಗಿಮ್ಮ ಧುಮಾಸವದಾವರಿಸಿತ್ತು ಧಾತ್ರಿಯೊಳ್|

ವ| ಅಂತಾಮಧುಮಾಸದೊಳೊಂದು ದಿವಸಂ

ಕಂ|| ಸುರಪನವಿಭವಮನಾಂತೀ| ಶ್ವರಕಿಂಕರನೆನಿಪಚೋಳರಾಜಂ

ಮುದದಿಂ| ದರಸುಸಾಮಂತಸಚಿವ | ವರಸೊಡ್ಡೋಲಗದೊಳಿರ್ದ
ನತಿಸಂಭ್ರಮದೊಳ್|| |೨೬|
ವ|| ಅಂತಾಸಮಯದೊಳ್|
ಮ|| ಸ್ರ|| ಕಳಕಾಂಚೀಕಿಂಕಿಣೀ ಸಂಕುಳಬಿಡದುಲಿಯಲ್ಕಾರವಂ
ಲ್ದಾಡೆಸತ್ಕೋ ಮಳನಿಧಿ (?) ಕಂಚುಕಂವಾಪೂರ್ವಳಿಯೋ ಸಿತಹಸ್ತಾ
ರುಣ ದ್ಯೋತಿಯಿಂದಂ ತಳೆದಿಪ್ಪಾವೇತ್ರದಂಡಂಪವಳ ದಸಳಿಯಂ
ತೊಪ್ಪಿಸಲ್ಲೀಲೆಯಿಂ ಭೂತಳನಾಥಾಸ್ಥಾನಮಂ ಮೋಹಿಸುತಮಿರದ
ಬಂದಳ್ಪ್ರತೀಹಾರಿಯೊರ್ವಳ್| |೨೭||
ವ| ಅಂತುಬಂದುಗುರುಕುಚ ಭರದಿಂಬಳ್ಕುತೆಮಣಿಕುಟ್ಟಮತಳನಿ
ಹಿತಕರತಳೆಯಾಗಿಸವಿನಯದಿಂದಿಂತೆಂದಳ್
ಕಂ|| ಜನಪತಿಕೊರ್ತವಧರಿಪುದು | ವನಪಾಲಂಬಾಗಿಲಲ್ಲಿಬಂದಿರ್ದ
ಪನೆಂ| ದೆನೆಬರವೇಳೆನಲವಳ್ಪೋಂ | ಕೆನೆಬಗೆಮಿಗೆಪೋಗಿಭರದಿಕಳು
ಪಿದಳಾಗಳ್| |೨೮|
ವ| ಅಂತಾಪಡಿಯಾರತಿಕಳುಪಲ್ವನ ಮಹತ್ತರಂಬಂದಾಸ್ಥಾನಮಂ
ಪೊಕ್ಕಾಗಳ್|
ಸುರಹೊನ್ನೆಯಚೂಸಂಪಗೆ| ಯರಳಬ್ಜದಮೊಗ್ಗೆದವನದೊಳ್ಪೊಡೆ
ತಾಂಕುರಮೆಂಬಿವನರಸಂಗಾ||ದರದಿಂವನಪಾಲನಿತ್ತುವಿನಮಿತನಾದಂ
ವ| ಅಂತುವಿನಮಿತನಾಗಿ ಕರಕಮಳಮುಕುಳತಾಂಜಲಿಪುಟನಾಗಿ
ವನಮಹತ್ತರಂ ಭಯಭಕ್ತಿಯಿಂತದ್ಭೂಪಾಳಂಗಿಂತೆಂದಂ||
ಕಂ| ತರುಣಿಯನಬ್ಜನಿಬಯಸುವ | ಪರಿಯಿಂವನಲಕ್ಷ್ಮಿನಿಮ್ಮಚರ
ಣಂಬಯಸು| ತ್ತಿರುತಿರ್ಪಳರಸಬಂದಾ / ದರದಿಂವನಕೇಳಿಯೊಳ್ವಿನೋ
ದದಯೆಯಿಂ|| |೨೯|
ವ| ಎಂದುವನಮಹತ್ತರಂ ಬಿನ್ನಪಂಗೆಯ್ಯಲ್ಕೇಳ್ದು ಪಗಲಿಪ್ಪಿಳರಾ
ಜಂ ತದ್ವನಪಾಲಂಗುಡಲಿತ್ತು ಬಂದಪೆನೆಂದುಕಳುಪಿತತ್ಸಭಾಭವನ
ದಿಂದೆರ್ದಂತಃಪುರದೊಳಯಿಂ ಕೆಬಂದುಜಲಜ ಲಿತದಶಶಿಕಾಂತದಸೆ
ಜ್ಜೆವನೆಯುಮುಂ ಬೆಸೆವರತ್ನಮಂಟಪದೊಳ್ಕಟ್ಟಿರ್ದ ಚಿತ್ರಚೀನಾಂಬರ
ದತೆರೆಸೀರೆಯಿಂ ಕಂಚುಕಿಯನೇಗಪಲೊಳ ಪೊಕ್ಕುಸಿತಾಬ್ಜದೊ
ಳ್ಕಿರೆವಸಿರಿಯಂತೆದುಕೂಳದಿಂ ಪಕ್ಷ ವಡಿಸಿದಾ ಶಯ್ಯಾತಳದಿಂದಿದಿ

ರ್ದನೆ ಸೋಮಪ್ರಭಾದೇವಿ ಯುತಕರ ಪಲ್ಲವಮಂಪಿಡಿದೇಳಲೀಯದೆನಲ್ಮೆ
ಯಿಂತಾಂನಮಿಸಿ ಪದೊಳ್ಮಿಳ್ಳಿರ್ದಾಗಳ್|

ಕಂ| ತೊಳಗುವತನ್ನ ಗುಗೊರ್ನೆಯಿಂ|ಚೆಳದಳಕಾವಳಿಯನೊಪ್ಪಿ|
ನೇವರಿಸುತ್ತುಂ| ಗಳದಮಣಿಹಾರಮಂ ಕರತ, ಳದಿಂತಿರುಪುತ್ತೆ ರಮ
ಣಿಗಂದಿಂತೆಂದಂ |೨೧|

ಚಂ ಜಳರುಹವಕ್ತ್ರೆ ಭೃಂಗ ಕುಳಕುಂತಳೆ ಚಂಪಕನಾಸೆ
ಮತ್ತಕೋ| ಕಿಳರವೆ ಕೀರವಾಕ್ಯೆ ವರಕೋಕ ಪಯೋಧರೆ ಕೇತಕೀನ
ಖಿ, ಪ್ರಲಸಿತೆ ನೀಂಪೊದಳ್ದು ವನಲಕ್ಷ್ಮಿಯ ಸಾಮ್ಯವನಾಂತುದಕ್ಕೆ ಕೋ
ಮಳವನಕಿಂತು ಪೋಗಿವನ ಕೇಳಿಯನಾಡಿಪಮೆಂ ದನಾನೃಪಂ

ವ| ಅಂತು ಕರ್ಣಾಮೃತಸ್ಯಂದಿಗಳೆನಿಪ ನಿಯನವಾಕ್ಯಮಂ ಕೇಳ್ದು
ಸೋಮಪ್ರಭಾದೇವಿ ತಾಂಪನನನೊಳ್ಪರ್ಥಿಯಿಂದರ ಹಸಿತಮು
ಖಿಯಾಗಿ ವರಾವಲೋಕನದ ಚೆಲ್ವಂ ಬೀರುತ್ತುಂ ಮಹಾಪ್ರಸಾದವೆಂ
ದೊಡಂಬಡಲ್ಕಾಗಳ್|

ಕಂ| ಮಡದಿಯನುಡಿನೃಪತಿಗೆಕಿವಿ| ದುಡಿಗೆರೆದದ್ಯೋತಿತಮುಗೆಚಂ
ದನದಣ್ಪಂ| ಕಡೆಗಣ್ಣೆಗದುಗಳದೊಳ್| ಬಿಡದೆಸೆವಲತಾಂತಮಾಲಿ
ಯೆನಿಸಿತ್ತಾಗಳ್| ||೨೨|

ವ| ಅಂತತಿಹರುಷಾತ್ಸುಕ್ಯ ಹೃದಯನಾಗಿಪಗಲ್ಪೋಳರಾಜಂವನ
ಕೇಳಿಗೆಪೋಗಲೆಂದು ತನ್ನಪೆಂಡವಾಸಂಗಳಂ ಶೃಂಗಾರಂಗೆಯ್ದು ಬರ
ಲ್ವೇಳ್ದು ಸತ್ಪ್ರಿಯದಿಂ ಕಂಚುಕಿಯರ್ಗೆ ಬೆಸಸಲ್ಕಾಗಳ್

ಕಂ| ಪತಿಯಾಜ್ಞೆಗಖಿಳಸತಿಯ | ರ್ನುತಪಸ್ತ್ರಾಭರಣದಿಂದೆಮೆರೆ
ವುತ್ತೊಲವಿಂ| ರತಿನಾಥನಪಡೆಯೆಂಬಂ| ತತಿಮೋಹನವೃತ್ತಿಯಿಂದೆ
ನೆರೆದೇಳ್ತಂದರ್|| |೨೪|

ವ| ಅಂತುಶೃಂಗಾರವ್ಯಂತೇಳ್ತಂದ ಪೆಂಡವಾಸದತಂಡಮಂ ಪಗ
ಲ್ಪೋಳರಾಜಂ ಕಂಡುಹಾರೈಸಿವಸಂತವನಕೇಳೀ ಪ್ರಸ್ತಾವಭೇರಿ
ಯಂ ಪೊಯ್ಸಿಸಂಭ್ರಮದಿಂ ನಿಮ್ಮನಿಮ್ಮವಾಹನಂಗಳ ನೇರುವುದೆಂ
ದುನಿಯಮಿಸಲ್ಕಾಗಳ್

ಕಂ|| ಕರಿಣಿಗಳಮೇಲೆಕೆಲಬರ್| ತುರಗಂಗಳಮೇಲೆಕೆಲಬರನೆಸಿವಾಂ

ದೋಳಪೆ| ಆರವರೆಬರ್ಸತಿಯರ್ತಾರ್ಗಂ| ಪಿರಿದೊಲವಿಂದೇರಿವ
ದರತಿಸಂಭ್ರಮದಿಂ| |೪೫|

ವ| ಮತ್ತಮನಂತರಂ ವಗಲ್ದ್ಜೋಳರಾಜಂ ವಣ್ಣಿಬಂದಿರ್ಗಾಳ
ದ್ರನ ಸಮೀಪಕ್ಕೆಳ್ತಂದಾಗಳ್||

ಕಂ|| ಸುರಗಜವಮಂಶಚಿಳರನಾ| ಸುರಪತಿನಲವಿಂದಮೇರುವಂದ
ನಂತಾ| ವರಸೋಮಪ್ರಭೆಗೂಡಿಭ| ವರಸನವರ್ವೇರಿಪೊಡಳ್ದುಜೋ
ಳನೃಪಾಳಂ| ||೪೬|

ಮತ್ತಮಾಗಳ್

ಕಂ|| ಸುಮಿಹಿರಮಂಡಳಮಾಸಂ| ಭ್ರಮುವಂನೋಡಪ್ಪಹಸ್ರಮು
ಖದಿಂಬಂದಂ| ತಮಳಾತಪತ್ರತತಿಭೂ | ರಮಣಂಗೆಪಥಾಸಿಕಾಡು
ಕೊಪ್ಪಿದುದಿಂಗಳ್| ||೪೭|

ಘನತರಸಂಭ್ರಮದಿಂದಂ| ಜನದವಿನೋದಕ್ಕೆ ತಕ್ಕಪರಿಜನಸಹಿ
ತಂ| ವನಿತಾತತಿವೆರಸುಮನೋ| ಜನತೆಂದಿಂತಳರ್ದನಂದುಜೋ
ಳನೃಪಾಳಂ| |೪೮|

ವ| ಅಂತುಸರ್ವಸಂಭ್ರಮವೆಸೆಯೆ ವ್ವಗಲ್ದ್ಜೋಳರಾಜಂನಿಜಪುರದಿಂ
ತಳರ್ದುವನಪರಿಸರಕ್ಕೆಳ್ತಂದು ನೋಳ್ಪಾಗಳ್||

ಚಂ| ಸುರುಚಿರಪಲ್ಲವಂತೆರೆಲತಾವಳಿಗಳ್ಸ ಆಪುಷ್ಪಸಂಕುಳಂನೊ
ಮಿಡಿಬುದ್ಬುದಂವಿಚಕಿಳಂ ಪೊಸಮುತ್ತುಮಶೋಕವಿದ್ರುಮಂ ವ
ಬದರೀಫಳಂ ಮಣಿಸರೋಜಮುಶಂಖಮು ನೋಕಕೋಕಿಳ ಸ್ವನ
ದುಘೋಷವಾಗೆವನವುಬ್ಧಿಯು ವ್ವೋಲ್ವಿರಿದೊಪ್ಪಿತೋಗುಗಂ|

ವ|| ಅಂತಾವನೋಪಕಂಠದೊಳ್ಪಗ ಲ್ಜೋಳರಾಜಂನಿಜಸೌಂದರ
ಸಂದೋಹಂಬೆರಸು ಸಿಂಧುರಸ್ಕಂಧದಿಂದ ವನೀತಳಕ್ಕವತರಿಸಿವನವಿ
ಹಿಕೇಳೀಯೋಗ್ಯಮಪ್ಪ ಕತಿಪಯಪರಿಜನಂತದ್ವನದ್ವಾರಮಂಪೊಕ್ಕ
ಗಳ್||

ಮ|| ಸ್ರ|| ವಿಲಸನ್ನೇತ್ರಾಂಶುಮಿಂಚಂ ದೆಸೆಗೆಕರೆಯೆಸೋಮಪ್ರ
ಮುಖ್ಯಸತ್ಸ್ತ್ರೀ| ಮುಳಕಾಂತಾವೃಂದಮತ್ಯುತ್ಸವದೆ ಬಳಸಿರಲ್ಪಿ
ಕಾಮಧ್ಯದೊಳ್ಪ |ಜ್ವಲಿಸುತ್ತಿರ್ಪಂದು ವೆಂಬಂತೆಸೆವುತೆವನಸ
ರ್ಗವಂ ತ್ರಿಪುಮುಕ್ತಂಲಲಿತೋರ್ವೀ ಜಾತಮಂನಿಟ್ಟಿಸುತೆನಡ

ನಂತಾಗಳಾ ಚೋಳಭೂಪಂ॥ ॥೪೦॥

ವ॥ ಅಂತಾಪಗಲ್ಚೋಳರಾಜಂ ನವುರ್ದಸಚವಂಪೆರಸುನಡೆದುನೋಳ್ಪಗಳ್॥

ಚಂ॥ ತಳಿರ್ಗಳಿತೋರಣಂವಿಸುಪಲರ್ಗುಡಿವೂಗೊಳನುದ್ಧ ದರ್ಪಣಂ ವಿಳಸಿತಬೀಜಪೂರಕವೆ ಪೊಂಗಳಸಂಗಿಳಿಪಾಠಕಂಪಿಕಂ ಸ್ಖಲಿತಗಾಯಕಂಲತೆಗಳಂ ಗನೆಯುಭ್ರ್ರವುರಸ್ವರಾನಕಾವಳಿಯನೆಭೂಷನಂ ಪ್ರಿಯದಿನಂಬಿದಿರ್ಗೊಂಡನ ಗಾಧವಾಧವಂ। ॥೪೧॥

ವ॥ ಅಂತಾವಾಘವಂ ಪ್ರಿಯದಿನಿದಿರ್ಗೊಂಡುವಂಕೈಕೊಳುತಾನಂದದಿಂಸೋವುಪ್ರಭಾದೇವಿಯು ವೆರಸುಪಗಲ್ಚೋಳರಾಜಂಪರಿಹಾಸಕನಕರವುಂಪಿಡಿದು ತದ್ವನದಸಿರಿಯಂನೋಡು ತಂಬರ್ಪಾಗಳ್ಮಂದೊಂದೆಸೆಯೊಳ್।

ಕಂ॥ ಪುರುಡಿಪವುಲ್ಲಿಗೆಗಳಾ। ಸುರದೆಸಿಜಾತಿಯೊಳೆನೆರೆದಿರ್ದನು ತೆದಿಬ। ಕ್ಕುರಿವೊಕ್ಕುಪೊರವುಡುವವೆನ। ಲ್ಕಿರದೆಸೆದುವುವುತ್ತದಲಗಳೊಳಗಳಿನಿಕರಂ। ॥೪೨॥

ಮತ್ತಂವುಂದೊಂದೆಡೆಯೊಳ್।

ಕಂ॥ ಸ್ಮರನಿಳೆಯೊಳ್ಪರಿಕಳೆಯಿಂ। ಪರಿವುಳದೊಳ್ಪೊರೆದುಬಿತ್ತಿಬುವುರ್ದಂಪೊಯ್ದಾ॥ ದರದಿಂಬೆಳೆಸಿದಕಳಂಕಂ। ಧರಿಯಿಸಿಕರ್ಪೂರಕದಳಿಯೆನಿಸುತ್ತೆಸೆಗುಂ। ॥೪೩॥

ವ॥ ಅಂತುಕಂಪುತಂಪುವಿಂ ಪುಪೆತ್ತಕರ್ಪೂರಕದಳಿಯಂಕರ್ಪೂರಗೌರವಪದಾಬ್ಜಭೃಂಗ ನಪ್ಪಪಗಲ್ಚೋಳರಾಜಂನೋಡುತ್ತಂನಡೆದುವುಂದೊಂದೆಡೆಯೊಳ್।

ಕಂ॥ ವರಫಲಪಿತರಂಶೀಲಂ। ಧರಣಿಪಭೋಗಾನುಕೂಲವುರುಶುಕಲೀಲಂ ಪರಭೃತಪಾಲಂವೆರೆದುದು ಪರಿಗಾಯದ್ಭೃಂಗಮೂಲವುಪ್ಪೃತರಸಾಲಂ। ॥೪೪॥

ಚಂ॥ ಅಲರ್ಗಳಬಂಡುಭೂಸಿದವಿಭೂತಿತಳಿಗಳೆಕಾಷಿಶಾಖೆಗಳ್ ಲಲಿತಜಟಾಕಳಾಪವಿಡಿದಿರ್ದಫಳಾವ್ಯಯ ಕ್ಷಮಾಲೆಕೋಗಿಲೆಗಳಪಂಚಮಸ್ವರಮೆಮಂತ್ರಮಳಿಧ್ವನಿ ಪಾಡುಕೀರಸ್ತಾವ್ರಲಿನು ತಿಯಾಗೆ ಒವುನಿಯುಂ ಬೊಳ್ಳಿದಂ ದೊಂದಮಾಮರಂ॥ ॥೪೫॥

ವ|| ಅಂತಾಮನೋಹರಮಪ್ಪ ಮಾಕಂದಮಂ ಸೌಂದರೀ ಸಹಿತಂ ಚೆರಸುಪಗಲ್ತೊಳರಾಜಂ ನೋಡುತ್ತಂನಡೆವಾಗಳ್ಮಂದೊಂದೆಡೆಯೊಳ್||

ಮ|| ಸ್ರ|| ಪರಿಪಕ್ವಂಪೆತ್ತಪಣ್ಣಂನೆಖದಿ ನಿರಿದುಸೋರ್ವಾರಸಾಸ್ವಾದನಂಗೆ ಯ್ದುರೆಗಣ್ಣಂಪುಚ್ಚಿಪಕ್ಕಂ ನಿಪಿರ್ದೆಳಲೆಮಹಾನಂದಮಂತಾಳ್ದು ಮತ್ತ್ಯಾಸುರದಿಂದಂ ಸೊಕ್ಕಿಕೀಳ್ಕೊಂಬಿನೊಳಿತಡಕಮೆಟ್ಟುತ್ತ ಕೂರ್ತೆರ್ಗೆಡುತಂನು ಣೆಗ್ಗಿರಳಂಸ್ಯೆಕೆತ್ತಿ ಪೇಳ್ಪೇಳಿನುತೆ ಗಳಪಿದತ್ತಾಮ್ರಪೊಳಾತ್ತಾಮ್ರತುಂಡಂ | ೪೬

ವ|| ಅಂತಾಗಿಳಿಯಲೀಲೆಯುಂ ಭೂಪಾಳಂನಿಜವಲ್ಲಭೆಗೆತೋರುತ್ತು ನಡೆವಾಗಳ್ಮಂದೊಂದೆಡೆಯೊಳ್|

ಕಂ|| ತೊಳಗುವಪೊಸಬೆಳ್ದಿಂಗ| ಳ್ಪೊಳೆಸಿದಸುರಭೂಜದಂತಿರಲರ್ದ ಲಗಾಳಿಸುಜ್ವಳಿಸುತಿಡಿದಿರ್ದವಲ್ಲಿಗೆ | ಗಳನುಪ್ಪೆಡೊಳಿರ್ದುದೊಂದು ಫಲತರಸಾಲಂ|| ||೪೭||

ಮ|| ಸ್ರ|| ಮಧುಪುಷ್ಪಶ್ರೇಣಿಚಾಪಂ ಬಹುಳಪರಿಮಳಂಸದ್ಗುಣಂ ತುಂಬಿಬಾಣೋತ್ಕರಮೊಪ್ಪುತ್ತಿರ್ದಪಕ್ವಾಮ್ರತ ಫಳತತಿಭೂಷಣಪರ್ಣಾಳಿವಸ್ತ್ರಂ ಪರಪುಟ್ಟಾನೀಕವೆಲ್ಲಂ ಪಡೆಲತೆರತಿಯಾನಲ್ಮನೋರಾಜನೆಬಂ| ತಿರೆನಾನಾಭೋಗಜಾಳಂಮೆರೆದುಮವಿರಹಿ ವ್ರಾತಕಾಳಂಪನಾಳಂ| ೪೮

ಮತ್ತಮಲ್ಲಿ

ಚಂ|| ಸುರುಚಿರಗುಚ್ಛಮಾಳಾವಳಿಗಳ ಸ್ರುಪೋಳಾದಿಸಮಂತು ಕೇಸರೋತ್ಕರನನೆಸೂಸಿನುಣ್ಪೆಸೆವಕಂದಳಿಪೊರ್ಗಂಗಲಿ ನೊಳ್ನುಸುಳ್ದರಲ್ಗಳಬಂಡನುಂಡುಕಡುಸೊಕ್ಕಿಮುದಂಮಿಗೆವ ಕ್ಕವೆತ್ತಿರುಂ| ಕರಿಸುತಮುಂಬಿಸಂಚರಿಸುತಿರ್ದ್ದುವು ವಳಿಪ್ರಜಮುದ್ಭಚೂತದೊಳ್ ||೪೯||

ವ|| ಅಂತುತುಂಕರಿಪಳಿಗಳಬಳ್ಳಿಯುಂ ಪಗಲ್ತೊಳರಾಜಂನೋಡಿ ಹಾಸ್ಯೈಸುತ್ತಂ ಪೋಗೆಪೋಗೆಮುಂ ದೊಂದೆಡೆಯೊಳ್

ಕಂ|| ಪಸಲಕ್ಷ್ಮೀಗಮಧುರಾಜಂ| ಮುನಪೊಲ್ದಿತ್ತಿಸಿದಮಿಸುಪಪಪ್ಪೆಯಕೊಡೆಯೆಂ| ದೆಸೆಚಲ್ಪಂಬೀರುತ್ತಂ| ಘನತರದಿ ತಲ್ತಬಾಳಚೂತಮದೆಸಗ್ಗುಂ|| ||೫೦||

ವ॥ ಅಂತಾಬಾಲಚೂತದಚಲ್ವಂ ಪಗಲ್ಕೋೞಲರಾಜಂನೋಡುತ್ತಂ ಪೋಗೆಪೋಗೆಮುಂದೊಂದು ತೆರಪಿನೊಳ್ಮೃಗಮದದಿಂಸಮೆದಕುಟ್ಟಿಮತಳಂಗಳಂ ಚೆನ್ನದಪಂಕದಸಾರಣೆ ಗಳಂಸಮ್ಮತಮಪ್ಪಪನ್ನೀರಚಳಯಂಗಳಂ| ಮೇಲಿಕೆದರಿದಕರ್ಪೂರದಪಳುಕಿನಪ್ರೂವಲಿಗಳಂ ಪಟ್ಟೆಸಿಕಟ್ಟಿದ ಬಾಳವೇರತೇರ್ಗಳಿಂಸೆಳನಳಿಸಿಪೊಳೆವಬಾಳೆಯಕಂಭಂಗಳಿಂ ಪುನ್ನಾಗದವಿಸುಪಲಗೂಂಚಲಜಂತೆಗಳಿಂಪೂಗೌಂಗಿನವಿಸುಪತೊಲೆಗಳಿಂ ದವನದಮೇಲ್ಕೊವ್ವದಕೆಗಳಿಂಬಕುಳಕುಟ್ಮಳದ ಸೂಸಕಂಗಳಿಂ. ವಿಸುಪಪೊಂದಾವರೆಯಘಟ್ಟಿಗಳಿಂಸಿಂದುವಾರದಚಾಮರಂಗಳಿಂ ತರುಣಕದಳೀದಳದ ಮೆಲ್ಕಟ್ಟುಗಳಿಂಕಂಡರಿಸಿ ದತಮಾಲಪತ್ರದಚಿತ್ರಂಗಳಿಂ ಅಸುಗೆಯವಿಸುಪಪೊಸಗುಡಿಗಳಿಂವಿಚಕಿಳಪ್ರಸೂನಪ್ರಸರದತೋರಣಂಗಳಿಂ ಕಣ್ಗೆಕೌತುಕಂಬೆತ್ತೆಸೆವ ಕಂಪಿನಕಾರಾಗೃಹಮೆನಿಪವ ಸಂತಕೇಳೀಸದನ ಮಂಪಗಲ್ಕೋೞಲರಾಜಂಸೋವುಪ್ರಭಾದೇವಿಯು ವೊರ್ದಲಾದ ರಾಣಿವಾಸಂಗಳ್ಪರಸೊಳಗಂ ಪೊಕ್ಕಲರ್ವಾಸಿನೊಳ್ಕಳ್ಳದರ್ಪಮದನವೀಣೆಯೆಂಬ ಗಾಯಕಿಯಮೊಗಮಂ ನೋಡಲ್ಕವಳರಸನಿಂಗಿತಮನರಿದು ವೀಣೆಯಂತೆಗೆದುಬಾಜಿಸುತ್ತಾಗಳ್

ಚಂ॥ ಶ್ರುತಿಗಮನಂಬಜಾವಣೆನಯಂಪಳಿಖಗ್ಗಣೆಘಾತುರೀತಿಕಂ ಬತವನುಜಾಯಿಶುದ್ಧಿ ಗತಿಯೊಪ್ಪಿರೆ ಶುದ್ಧವಸಂತರಾಗಮಂನುತಿಯಿಗೆ ಮಾಡಿಸತ್ಕ್ರಮದ ಗೀತಚಯಂಗಳನುರ್ವಿಪಾಡಿದಳ್ ಕ್ಷತಿಪತಿಮೆಚ್ಚೆವಾಮದನ ವೀಣೆಯನಿಪ್ಪಸುಜಾಣೆರಾಗದಿಂ॥ ॥೫೧॥

ವ॥ ಅಂತಾಗಾಣೆಯಪಾಷಂ ಕೇಳ್ದುಹಾರೈಸಿಮಚ್ಚು ಗೊಡುತಿರ್ಪರಾಜನಪರಿವೃತದೊಳಿರ್ಪ ಕಾಂತಾಜನಂಪುಷ್ಪಾಪಚಯದೊಳ್ಮನಸ್ಕರಾಗಿ

ಮ॥ ಕುರುಳಂಸಂವರಿಸುತ್ತೆಜೋಲ್ವಮುಡಿಯಂ ಸೈತಿಕ್ಕುತಂಜಾರುತಿಪ್ಪುರುಸಂವ್ಯಾನಮನುದ್ಧಪೀ ಪರಕುಚಕ್ಕಂಸಾಚರ್ತಂಕಾಂಚಿಯಂ ಕರದಿಂದಂಕಣಿಗೆತ್ತುತಮ್ಮಿನುಪಹಾರಂ ತೂಗಲೊಪ್ಪಿತ್ತುನಿರ್ಘರದಿಂದಾಗಳಿ[illegible]ತ್ತಿ[illegible]॥ ೫೨

ಕಂ॥ ಶಶಿಮುಖಿಯುರಚರಣಂಗಳ। ವಿಶದಮಣಿಪ್ರಸರಚಿತ್ರನಖರಾಪಂಡಶಡಿಶೆಯನೆಯ್ದಿ ರತಿನಾಥಶರಾಸನಟಂಕೃತಕ್ಕೆಸಮಮೆನ್ನುರ್ದನಾರ್॥ ೫೩

ನುಡಿಗೆಗಿಳಿದನಿಗೆಕೋಗಿಲೆ ಮುಡಿಗೆಮಯೂರಂಪಯೋಧರಕ್ಕೆಥಾಂಗಂ। ನಡೆಗೆಮರಾಳಂಸೋಲ್ತು। ಯ್ದೊಡನೆಬರಲ್ಕಡೆದರಲೆಯುರ್ಣಗೊಯ್ಯಲ್॥ ೫೪

ವ॥ ಅಂತಬಯಲೆನಡೆದುನೋಡಲೊಳ್ಕುದ್ಯಾನ್ಗಳಂತಂದು॥

ಕಂ। ಎಳೆಮಾವಂಗಭವಂವಿಚ। ಕೆಳತೆರತಿಯೆಂದುಮಾಡಿನಿಜಭಕ್ತಿಮಿಗಲ್ತುರ್ಪಟ್ಟಪರಿಮಳದಲ। ಗಳನರ್ಚಿಸಿದರ್ಲತಾಂಗಿಯರ್ನಲಿದಾಗಳ್॥ ೫೫

ವ। ಅಂತರ್ಚಿಸಿಗಂತಾಂಗಿಯರ್ಮತ್ತಮಾಗಳ್।

ಮ॥ ತುದಿಗಾಲಂಥರೆಗೂರ್ಚಾರುಭುಜಮಂಸ್ಕೈತೆತ್ತಿಶಾಖಾತ್ಯಮಂಪದಪಿಂ ವಾಮಕರಾಗ್ರದಿಂಪಿಡಿದುತಗ್ಗಿಕ್ಕುತ್ತಿ ಕಂಕೆಲ್ಲಿಭುಜದಪುಷ್ಪಸ್ತಬಕಂಗಳಂನಿಜನೆ ಖಪ್ರದ್ಯೋತಿವಿಭ್ರಾಜಿಸ ಲ್ಪಿದತೀರತ್ನಮದೋರ್ವಳರ್ಥಿಮಿಗೆತಾಂಕುಯ್ವಳ್ಮಹಾಲೀಲೆಯಿಂ॥ ೫೬

ಮತ್ತಮೊವಳ್॥

ಕಂ॥ ಪಿರಹಿದ್ವಿರದಪನಂಗಜ್ಞ। ಹರಿಸೀಳಲ್ಕಿದಿರ್ದ ತೋರಮುತ್ತಗಳಂತಾ। ದರದಿಂಡಮಾಯ್ದರತಿಯುಂ। ತಿರೆಬಕುಳದಕುಟ್ಮಳಂಗಳಂಸತಿಕೊಯ್ದಳ್॥ ೫೭

ಪರಿಮಳವಿರಹಿತಪಕ್ಮಂ। ನಿರುತಂಲವಣಾಬ್ಧಿ ಜಂಗಳೆನೆ ತಂಮುಕ್ತಿತ್ಕರಮುಂಪಳವೃತ್ತಿಪಾಗ। ಸುರಹೊನ್ನೆಯ ಕುಟ್ಮಳಂಗಳಂಸತಿತಿರಿಪಳ್

ಮ॥ ಮತ್ತಮೊವಳ್ಬದರೆ

ಕಂ॥ ತರುವಡರ್ದೀಕ್ಷಿಸಲಲ್ಲಿ ದುರ್ಗರಗಂಗಳ್ಕುಡಿಯುನುಗ್ರಸಿಖಿಯಿಸುತಂಬಿದ್ದಿರದೋಡೆನಗುತಾ। ವರವಘುಚಂಡನವತಳಿಗಗಳಂ। ನೆರಕೊಯ್ದಳ್॥ ೫೮

ಮ॥ ಮತ್ತಮೊರ್ವಳ್

ಕಂ॥ ... ಯಂನೆ। ಬಿರಯಿಸುತಂಕೋಪನೀಪತ

ಲರ್ದ್‌ಸೆದಿಪರ್ಾ| ಸುರಗಿರಿಯುಕುಸುಮೋತ್ಕರವುಂ, ಸರಸಿಜದಳನಯ
ನೆಕೊಯ್ದ್ಳುತ್ಸವದಿಂದಂ||

ಮತ್ತವೊರ್ವಳ್

ಮಲಿನಾಂಗಂಮಧುಪಂಚಂ | ಚಲನಳಿಯೆಂದಟ್ಟಿಲೀಯುದವುಳಿತೆ
ಮಿಂತಾ ನಲರ್ದ್‌ಸೆವಚಂಪಕೋತ್ಕರ|ದಲರಂ ಲಿತಾಂಗಿನಲಿದುಕೊ
ಯ್ದಳದೊರ್ವಳ್| |೬೧||

ಘನಮಧುರಾಜನಬರವಿಂ|ಗನುರಕ್ತತೆವೆತ್ತುತೆಂಬವ್ರೊಲ್ಕಂಪಿತಂ| ಪಿ
ನೊಳತಿವಿಭ್ರಾಜಿತನೂ :| ತನಪಾಟನದಲಗನಳಂತನೂದರಿಕೊಯ್ದ
ಳ್|

ವ|| ಮತ್ತವೊರ್ವಳ್

ಕಂ|| ತರುಣಿಯುಶೋಕೆಯುನ:ಣ್ದಳಿ| ರರಳ್ಗಳಿಯೆಡೆಯೊಳ್ಪುಬಾಂಕು
ವಿಂಕೆಂಡಳದಿಂ| ಪರಿಕಿವೊಡೆಬಿಳಿದುಕೆಂಪಾಗಿರೆವಾಯುದವುರನೆನು|
ತ್ತೆಬೆರಗಾಗಿರ್ದಳ್|| ||೬೧||

ವ| ಮತ್ತವೊರ್ವಳ್|

ಕಂ|| ಕಾಸುಮೇಷುಕುಸುಮುಚಾಪಂ | ಕುಸುಮಾಯುಧನೆರೆಬಪೆಸರ
ನತನುಗೆಕೊಟ್ಟ| ಮಿಸುಗುವಪೊಸಪುಲ್ಲಿಗೆಗಳ | ನೊಳಗೆಮಿಗಲ್ಪಿಸಜ
ವದನೆಕೊಯ್ದಳದೊರ್ವಳ್ |೬೪|

ಚಾತಿಯೆನಿಸುತ್ತಮುತ್ತಮು | ಜಾತಿಯುನಿಪ್ಪುದು ವಸಂತಋತುವಿ
ನೊಳೆನುತಾ| ಜಾತಿಯುನಗುವಂತಲರ್ದವಿ | ನೂತನಸೇವಂತಿಕುರ
ಲನಂಗನೆಕೊಯ್ದಳ್ |೬೫||

ಮತ್ತವೋರ್ವಳ್

ಚಂ|| ಬಗೆಮಿಗೆಬಂದುಪೂಗೊಳನನಾರ್ತದೆಪೊಕ್ಕು ನಿರೀಕ್ಷಿಪಾಗ
ಳಾಸೊಗಯಿಪಮುಗ್ಧೆ ತನ್ನ ಮುಖಚಂದ್ರಮನಿಂಪಲರಿರ್ದಪಂಕಜಂ
ಮುಗಿದುದ ಪನ್ನಿನಿಂಮುದದೆಕ್ಕೈರವಮುಂ ತಲರಿರ್ದತೋರೆ ನೆಟ್ಟನೆ
ಬೆರಗಾಗಿಭಾಪಿಸುತೆ ಮಾಯುದಪೂಗಳೆಂದುಬೆಚ್ಚದಳ್||

ಕಂ| ಪದ್ಮಮುಖಿಪದ್ಮಲೋಚನೆ ಪದ್ಮಪರಾಗಾಂಗಿ ಪದ್ಮಗಂಧಿಯೆ
ನಿಪ್ಪಾ ಪದ್ಮಿನಿಪದ್ಮವ್ರಜಮುಂ ಪದ್ಮಾಕರದಲ್ಲಿಕೊಯ್ದಳುತ್ಸವದಿಂಪಂ|

ಕುವಲಯಬಂಧುನಿಭಾನನೆ| ಕುವಲಯದಳನೇತ್ರೆಯೆನಿಪಕಾಮಿಯೊರ್ವ| ಳ್ಕುವಳಯದಲತಂಕೊಯ್ದಳ್ | ಕುವಲಯಪತಿಗೆಂದು ಹರುಷದೊಳಾಗಳ್

ಮ| ಮತ್ತೆವಿಳಾಪರಿಯೆ..ಳ್ಕಾಂತಾಸಂತಾನಂಲತಾಂತಾಪಚಯಮಂ ತೀರ್ಚಿಯನಂತರಂ ಲತಾವಂಟಪದೊಳಪೊಕ್ಕುಸಂತೋಷದಿಂದಾಗ ಳ್|

ಕಂ|| ತನಿಗಂಪಿಂಗೆಬೆನುಂಗುವ| ಘನತರದಳಿಯಿಂದಮೊಸೆವ್ವಕುಸುಮವ್ರಜಮಂ| ವನಿತೆಯಕೊಲವಿಂದಂಭೋಲಂ| ಕನಕದಳೀಪತ್ರದಿ ದೆಕಟ್ಟಿದರಾಗಳ್| |೬೯|

ವ| ವತ್ತುರಿಸುರಗಿಯಗರ್ಭರೆಗಳಂ ಸುರಹೊನ್ನೆಯನೂಪುರಂಗಳಂ ಮುಚಕುಂದದಪಾಯವಟ್ಟಂಗಳಂ ಸರಸಿರುಹಪತ್ರಾಂಶುಕಂಗಳಂ ಪಾಟಳಿಯಕಾಂಚೀದಾಮರಿಗಳಂ ಕುಮುದಕುಟ್ಮಳಕಿಂಕಿಣಿಗಳಂಕರ್ಣಿಕಾರದಕಂಚುಕಂಗಳಂ ತೊಳಪಿರವಂತಿಯಶುದ್ಧಸರಂಗಳಂ ಮಿಸುಪದಿರ್ಗಂತಿಯ ಕೇಯೂರಂಗಳಂ ಸಿಂಧುವಾರದಬಾಹುಪೂರಂಗಳಂ ಕೇತಕಿಯಕರ್ಣಪೂರಂಗಳಂ ದುಂಡುಮಲ್ಲಿಗೆಯಮೂಕುತಿಗಳಂತಮಾಲದಮಕರಿಕಾ ಪತ್ರಂಗಳಂತಿಳಕದತಿಳಕಂಗಳಂ ಪೊಂಬಾಳೆಯಶ್ರವಸಕಂಗಳಂ ಸೇವಂತಿಯಸೇಖರಂಗಳಂ ಮನೋಹರಮೆನಿಪ್ಪಿರಚಿಸಿತಪುತಮಗೆ ಮಸದನಂಗೊಂಡುಪೆಂಡವಾಸದೆಳೆವೆಂಡಿರ ತಂಡಂ ವಿಳಾಸದಿಂದಿರ್ದಾಗಳ್

ಕಂ|| ಲಲನಾಜನವೊಲವಿಂದಂ| ಸುಲಲಿತಹಿಂದೋಳರಾಗಮಂಪಾಡುತ್ತಂ| ತಳಿರುಯ್ಯಲ್ಗಳನಾಡಿದ| ರಳಿಕುಲವರ್ಧಿಡವಿಗೋತಾಪ್ಪಡನಾಡುವಿನಂ| ೭೦

ಅಂತವರೊಳೋರ್ವಳ್ವಿಳಾಸವತಿ

ಚಂ| ಸುರಗಿಯನೂಪುರಂಕಮಳ ಸೂತ್ರದಮೇಖಳೆಚಾರುಚಂಪಕೋತ್ಕರದಲರ್ಗಂಕಣಂ ಬಕುಳಕುಟ್ಮಲದಿಂ ಸಮೆದಿರ್ದಹಾರವಲ್ಲರಿಪೊಸದುಂಡು ಮಲ್ಲಿಗೆಯ ಮೂಕುತಿ ಕೇಪಗೆ ಯೋಲೆಯೊಪ್ಪೆಸಾಂ| ದೆವನಲಕ್ಷ್ಮಿಯಂತೆ ಶೃಂಗಾರ ಪತಿ ದಳಾವು ಶಾಖೆಯೊಳ್

ವ॥ ಅಂತೀಪರಿಯೊಳ್ತಿಳಿರುಯ್ಯಲನರ್ಥಿಯಿಂದಾಡೀಕಲಕಾಮಿನೀಜ ನಂಸಲ್ಲೀಲೆಯಿಂ ಮುಗುಳ್ದಾಗಳ್॥

ಕಂ॥ ಕಿರುಬೆಮರಿಷುತಂಜಬ್ಬಿದ, ಸಿರಿಯಂಸಾವಗಿಸುತಳಕಮುಂತಿರ್ದತ್ತಂ। ಸರುಗಂಪಿನಲರತೊಡವಿಂ। ಮೆರೆವುತ್ತಬಲಾಳಿದೇಶಿವೆತ್ತೀತ್ತಂದರ್॥ |೭೬|

ವ॥ ಅಂತುನೃಪನೆಡೆಗೆಲ್ತಂಪು ತಮತಮಗೆಪುಷ್ಪಂಗಳಂಕುಡುವ ಕಾಂತಾಜನದೊಳಗೊರ್ವಳ್॥

ಕಂ॥ ಅಲಗಣ್ಣೆಗಳಮುಡಿಗೆಯಂ। ನಲವಿಂರತಿಚಿತ್ತಜಂಗೆನೀಡುವತೆರದಿಂ। ಜಲಜಲಿಸುವಪೊಸಕೇದಗೆ।ಯುಲರಂತಂಪಬಲೆತನ್ನೃಪಾಲಂಗಿತ್ತಳ್॥ |೭೭॥

ವ। ಅಂತೀಪರಿಯೊಳ್ಪೇರೆಬೇರೆ ಸೌಂದರೀಯುಸಂದೋಹಂತಂದಿತ್ತ ಪರಿಮಳಕುಸುಮವೃಂದವುಂ ಷಗಲ್ತೋಳರಾಜಂನಾನಂದದಿಂತಾಳ್ದಾಗಳ್॥

ಕಂ॥ ತನುಗಳಘರ್ಮದಿನೊಪ್ಪುಟ। ವನಿತಾಸಂತತಿಯುವನವಿಹಾರಶ್ರಮಮಂ। ಜನನಾಥಂಪರಿಹರಿಸ। ಲ್ಕನುನಯದಿಂವಾರಿಕೇಳಿಗದ್ದನದಾಗಳ್॥

ಚಂ॥ ವನಲತೆಕಾಮಿನೀನಿಕರಮಾದು ದೊಕ್ಕೈರಮಿತ್ರಲೀಖ್ಯವ ॥ನಿನಿಯರತಂಪಮಾದು ದೊತಟದ್ವ್ಯತಿಭಾವಿನಿಯರ್ಕಳಾದುದೋ। ಮನಸಿಜಮೋಹನಾಸ್ತ್ರಮಬಲಾವಳಿಯಾದುದೊತಾನೆನಲ್ವಘೂಜನಮಿರದಂಬುಕೇಳಿಗೊಲವಿಂ ನಡೆದತ್ತವನೀಶನಾಜ್ಞೆಯಿಂ॥ ೭೮॥

ಆಸಮಯದೊಳ್

ಮ॥ ಧೃತಚಕ್ರಾಂಕಮಲಾಂಕಿತಂಕುವಳಯಾ ನಂದಸ್ಯದಂಹಂಸಶೋ। ಭಿತನುದ್ಯದ್ಭವನಾತ್ಮಕಂ ಕವಿನುತಂಗೋಪಾಲಕಂ ಕರ್ದಮಾ ನ್ವಿತಮುಬ್ಜಾಕರಮಿಕ್ಷಿಸಲ್ಕ ಮುದಸಪ್ರಕ್ಷೀಕೃತತ್ವಂಮಹೋನ್ನತಿಯಿಂ ತನ್ನೊಳಿರಲ್ಕೆದೈತ್ಯಹರನಂ ಮಿಕ್ಕಿರ್ಪದಾಕ್ಷ್ಯರ್ದಿಂ॥

ವ॥ ಮತ್ತಮಾಸರಸಿಯೊಳ್

ಮ॥ ಅಳಿವೃಂದಧ್ವನಿಜೃಂಹಿತಂ ಬಿಸಜಪರ್ಣಂಕರ್ಣತಾಳಂಮ ಹೋತ್ಪಳಸಂಚಿತೋಹಜರಾಗಮೋಮಘ ಜಲಂತಾನಾಗಕಾಸಾರಮೊ

ಳ॥ ಸಲಿಸಿರಾಟಮನಾಡಿಕಂಜಲ ತೆಯೆಂಬಾಕುಂಡಮಂ ತೆಗು
ತಂ। ನಲವಿಂದರ್ಪ ಕದಂತಿಯುಂತೆ ಸುಳಿದಂಸಲ್ಲೀಲೆಯಿಂ ಪಾರುತಂ।
ವ॥ ಅಂತಾಸರೋವರಮುರಂತನಂ। ಭೂಪಾಳಂಮನದೆಗೊಂಡಾ
ಳ್
ಕಂ॥ ಕ್ಷಿತಿಪತಿಸೋಮಪ್ರಭಿಪೆರ। ಸತಂಳಿೋತ್ಸವದಿಂಪೆವಳುಕಿ
ದಂಸಮೆದೊ।। ರ್ಜಿತಸೌವ ನ್ಗಗಳನಿಳ। ದತಿಂಜಿಪಸರಸಿಯಂ
ಮುದಂಮಿಗೆಪೊಕ್ಕಂ॥ ॥೭೪॥
ವ। ಅಂತಾ ಪಗಲ್ಪೊಳರಾಜಂ ಸರಸಿಯಂ ಪುಗಲ್ಪಿಂದೆಂರುಚಿರ
ಪೆಂಡವ ಸದತಂಡದೊಳ್ಕೆಲಂಬರ್
ಕಂ। ಪಳಿಕಿನಸೋಪಾನಂಗಳ। ನಿಳಿಪೆಡೆಯೊಳ್ತಮ್ಮ ನೆಳಲಸಿತರು
ಪತ್ನೀ। ಕುಳಮುರೆತುಳಿವುದೆನುತ್ತ। ಗ್ಗಳಿಕೆಯುವನಿತಾಳಗುಜ್ಜ
ಟ್ಟುತೆನಡೆದರ್॥ ॥೭೫॥
ವ॥ ಅಂತೀಪ್ಪರಿಯೊಳ್ನಡೆ ದಂಗಾವಿಕಾತಿರ್ಯ್ಯವಪ್ಪ ಕಾಂತಾಜನ
ರೋವರಮಂಪೊಕ್ಕುತಡಿಯೊಳ್ನಿಂದಿರ್ದಾಗಳ್
ಕಂ॥ ಸರಸಿಯುಪರಿಸರದೊಳ್ಸುರು। ಚಿರಹಿಮುಪ್ಪಗನಾ ಛಿಘಂಸೃ
ದನರಸದಪಿರಿದೆಸೆವಮಿಸುಪ್ಪಮಿಸುನಿಯುವರಜಲಯಂತ್ರಂಗಳಿಂದ
ಲೆಯುರೆಸೆದರ್
ವ॥ ಅಂತುಜಲಕೇಳಿಗುದ್ಯುಕ್ತರಾಗಿರ್ದ ಕಾಂತಾಸಮೇತಂ
ಕಾಂತಕೊಳನಂ ಪುಗುವಾಗಳ್
ಕಂ॥ ಸಡಗರದಿಂಬಿಭುವೆರಸಾ। ಮಡದಿಯರಂಬರದಸೆರಗನೊ
ಳುತ್ತಂ। ಗಡಣದಿಕಣಕಾಲ್ಕೊಣಕ್ಕಾ। ಲ್ಗೊಡೆಕಟಿನಡುವಟ್ಟ
ದೆಕೊಳನಂಪೊಕ್ಕರ್
ವ॥ ಅಂತಾಕೊಳನಂಪೊಕ್ಕು
ಚಂ॥ ಗತಿಕಳಹಂಸೆನಾಭಿಸುಳಿತೋಳ್ತೆ ರೆಪೆರ್ಮೊಲೆಚಕ್ರವಾಕಮು
ನ್ನತಜಘನಂಲಸ ತ್ಪುಳಿನವಾನನವಂಬುಜ ಪಕ್ಷಿಕ್ಕೈರವಂನುತಕಬರಿ
ಭರಂಭ್ರಮರಿಹರ್ಷರಸಂಜಲಮಾಗಲಂಗನಾ ತತಿಜಲಕೇಳಿಯುಲ್ಲಿಕೊ ॥೭೬॥
ನೊಳ್ಕೊಳನಿಪಪೊಲೊಪ್ಪಿತೋರಿದರ್
ಅಂತಾಸಮುದ್ರದೊಳ್

ಕಂ॥ ಕ್ಷಿತಿಪತಿಸೋಮಪ್ರಭೆಯಂ। ಮತಿಮಿಗೆಜಳಯಂತ್ರಡಿಂದನೊ ಯ್ಯಲ್ಕಂಡಾ! ದರ್ತಿರಭಸದೆಕವಿದೆಲ್ಲಾ । ಸತಿಯ ಘರ್ನಜಲಮುಃ ರ ದೆಚೆಲ್ಲಿದರಾಗಳ್ ॥೮೨॥

ಗತಿಗಂಚೆದನಿಗೆಕೊಗಿಲೆ । ಮತಿಗೆಶುಕಂಮಚ್ಚರಿಸುವುವೆನುತಂ ಪಿಡಿದರ್ಸತಿಯರೆ ನೆಕರದಮುತ್ತಿನ। ಸುತನೀಲದಪಚ್ಚೆಯಂತ್ರಮ ವುಕಣ್ಗೆಸೆಗುಂ॥ ॥೮೪॥

ಮತ್ತಂ

ಕರವಳಯಂಗಳನುಣ್ದ . ನಿಪಿರಿದೊಗೆಯಲ್ವಾರಿಯಂತ್ರಸಂತತಿಯಿಂ ನಿ ಭರರದಿಂಪೊಯ್ದಾಡುವನಾಂ। ದರಿಯರಮೂಲಾಂಬುಕೇಳಿಕತ ಮೆಸೆದಿರ್ಕುಂ। ॥೮೫॥

ಅದಲ್ಲದೆಯುಂ

ನರಪತಿಜೀರ್ಕೊಳವೆಗಳಿಂ। ದಿರದೊತ್ತುವಪಾರಧಾರೆಕಾಂತೆಯ ರಪಿಮೋ! ಧರದೆಡೆಯೊಳ್ಬಿರ್ದಮನೋಂ। ಬರುಹಂಗಳನಾಳಕೋ ಣದಂತೆಸೆದಿರ್ಕುಂ॥ ೮೬॥

ವ॥ ಅಂತುಜಲಮಂ ತುಳ್ಕುವರಸನವೇಲಿಭರದಿಂ ತರುಣೀಜನಂಕ ಐದಾಗಳ್

ಚಂ॥ ನಗೆಪೊರಸೂಸೆಕಣ್ವೆಳಗು ಸೂಸೆಕರಾರುಣರೋಚಿ ಸೂಸೆ ಕರುರುಗುರ್ಗಳಕಾಂತಿಸೂಸೆಮಣಿಹಾರದ ಸದ್ರುಚಿಸೂಸೆಕುಂತಲಾ ಳಿಗಳಸಿತಪ್ರಕಾಶಮದು ಸೂಸೆಮನೋಮುದದೇಳ್ಗೆ ಸೂಸೆದೊಟ್ಟಗ ಳಜಲಂಗಳಂ ನೃಪನಮೇಲೆಲೆತಾಂಗಿಯರುರ್ವಿಸೂಸಿದರ್

ವ॥ ಅಂತುಜಲಮಂಸೂಸುವಬಳಿಯ ರಂನೋಡಿರಾಜೇಂದ್ರಂತಾಂಜೀ ರ್ಕೊಳವಿಗಳಂ ಪರಿಮಳೋದಕಮಂತುಂಬಿಪೊಯ್ವುತಿಪ್ಪಾಗಳ್

ಕಂ॥ ಕತ್ತುರಿನೀರಂಜಂತ್ರದಿ। ನೊತ್ತಲ್ಕೆಯ್ನೊಂದುಕಪುರ್ಪತ್ತಂ ಗನೆಭೂ॥ ಪೋತ್ತಮುನಕಣ್ಗೆನೀಲದ। ಪುತ್ತಳಿಯಂತೆಪ್ಪುತಿರ್ದಳಂ ತಾಕೊಳದೊಳ್ ॥೮೮॥

ವೃತ್ತಂ

ಘುಸೃಣದನೀರಂಚನ ಮರು ನಸುದಳದಿಂತುಳುಕೇಬಲೆಸಿಯೊಸಂ

ದಾಗಳ್। ಮಿಸುಗುವರತ್ನದಪುತ್ತಳಿ। [ನಸಿಯುನೆ] ಕಣ್ಗೆಸೆವ್ರತಿರ್ದ ಳಾಪೂಗೊಳದೊಳ್ ॥೪೯॥

ವ॥ ಅಂತೀಪರಿಯೊಳರಸಂಪೊಯ್ವುದಂ ಕಂಡುಸೋಮಪ್ರಭಾಮುಖ್ಯರಮಣಿಪುರ್ಕಂದನ ಮೃಗಮದಘುಸೃಣಂಗಳಂ ತುಂಬಿರ್ದ ಕೊಳ್ವಿಗಳಂಕೊಂಡಾಗಳ್॥

ಕಂ॥ ಮಳಯಜಮೃಗಮದಕುಂಕುಮ। ಜಳನುಂನಲವಿಂದೆರಮಣಿಯನೆನೆರೆಪೊಯ್ಯ । ಲ್ಕಿಳೆಯರಸಂನಂದೀಶ್ವರ। ಜಳಜಾಕ್ಷವಿರಿಂಚಿಯಂಬರವೊಲೊಪ್ಪಿರ್ದಂ॥ ॥೫೦॥

ಬಿನದದಿರತಿಸತಿಕಾಮ। ರ್ಮನವೊಸೆದಾಡುತ್ತಮಿರ್ಪ । ನನಗಣೆಗಳಾ। ನೆನೆಸೋಮಪ್ರಭೆಯುಂಭೂ। ಪನುಮೊತ್ತುವವಾರಿಘಾತಲ್ಕರಮೊಸೆಗುಂ॥ ॥೫೧॥

ಮತ್ತಮೊರ್ವಳ್

ತಳಿದಿರ್ದತೊಟ್ಟಯಾವಡಿ । ನೆಳಲಂಜೀರೊಂದು ತೊಟ್ಟಗೆತ್ತಂಡಾಗಯೊಳ್ಪಡುವಕುಮುಗ್ದೆಯ।ನಿಳಯರಸಂಕಂಡುಮುದದಿಕೊಳನೊಳ್ವೆಳ್ಪಕ್ಕಂ। ॥೫೨॥

ಮತ್ತಂ

ಪಿಡಿದುಂತೆರೆಗಳಪೊಯ್ಲಿಂ। ದರವಿಂದಪ್ರತತಿಮುಳುಗಿಮೂಡುವಪೋಲ್ತು।ತ್ಕರವೊಳ್ಮಡುವಮುಳುಗುವ ತರುಣಿಯರಮುಖಾಂಬುಜಂಗಳೊಪ್ಪಿದುವಾಗಳ್ ॥೫೩॥

ಆಸಮಯದೊಳ್

ಭರದಿಂಸೋಮಪ್ರಭೆತ । ತ್ಸರದೊಳ್ಮುಳುಗಲ್ಕೆ । ನೃಪತಿತಾಂಮುಳುಗಿಪಯೋ। ಧರವನಿರದಪ್ಪಿಮುದದಿಂ। ಕರಪಂಪಿಡಿಸಿರ್ದರತಿಯುಪತಿಯಂತಿರ್ದಂ ॥೫೪॥

ವರಗತಿಗಾಸ್ಪೃಕ್ಕಷಿಗೆ। ಗುರುಕುಚಕೆಸವಾ ನವಾಗಲರಿವುದೆನಾಖ್ಯ ತ್ರಿರದಂಬಕವಲವನಿದಿಷ್ಕ ಮುಂತುತರಚಕ್ರಾಳತಡಿಗೆಸಾರ್ದವದಾಗಳ್॥ ॥೫೫॥

ತತ್ಸಮಯ ದೊಳ್

ತೊಳಗುವಕಣ್ಣಳ್ಕಿಂಪಂ । ತಳೆವದರುಚೆಳ್ಳನಾಂತ್ರಕುಂದುಗ್ಗನೃಪೆ

ಸ್ಥಳದೊಳ್ನಿಮಿರ್ದೆಸೆದಿರ್ದುವು |ಸಲಿಲಕ್ರೀಡೆಗಳಯುವತಿಯರ್ಗಂತಾ
ಗಳ್" ||೯೭||

ವ|| ಆಸಮಯದೊಳ್ನಿವರ್ತಿತಜಳಕ್ರೀಡನಾಗಿಪಗಲ್ಚೋಳರಾಜಂ
ಸೋಮಪ್ರಭಾಮುಖ್ಯ ಕಾಂತಾಕದಂಬಂಬೆರಸುಕರಸಿಯಿಂ ಪೊರ
ಮಟ್ಟುತೀರದೊಳೆಸೆವಪುಳಿನ ಸ್ಥಳದೊಳ್ನಿಂದಿರ್ದಾಗಳ್

ಚಂ|| ಘನತರವೈಕಿಲಿಂಪುಳುಕಸಂಕುಳಮುಣ್ಮೆದುಕೂಲವಂಬುವಿಂ
ನನೆದುನಿತಂಬವುಂ ಬಿಡದೆಪತ್ತಿಕುಚಂಗಳನಪ್ಪುಗೆಯ್ಗಳಿಂ ಮನವೊ
ಸೆದೊತ್ತೆಚೇತ್ಕರಿಸುವಾನನದಿಂನಡಗುತ್ತ ಮಂಗನಾಜನಮುದುವಂಕ
ಜಾಕರದ ತೀರದೊಳಿರ್ದುದತಿಪ್ರಮೋದದಿಂ| |೯೮||

ಅಂತವರೊಳೊರ್ವಳ್

ಚಂ| ವರವಧುಪತ್ತಿವೊಳ್ದುಡೆಗದೃಶ್ಯಮದಾಗಿರೆನಗ್ನಭಾವವೊಪ್ಪಿ
ರೆ ಬಿಡುಗೂದಲಿಂದಲೆವ ನಾಳದಿನೊಪ್ಪುವರಲ್ದ ಕಂಜಕುಂಕರಯುಗ
ದಲ್ಲಿ ತಾಳ್ದುನಿಲೆಸರ್ಪನನಾಂತು ಜಲಾಂತರದಿಂದೆಬಂದುರುತರಮು
ಕ್ತಕೇಶಿಬರುತಿರ್ದಪಳೆಂದೆನ್ನಲೊಪ್ಪಿತೋರಿದಳ್

ಮತ್ತಮೊರ್ವಳ್

ವ.| ಸಖಿಲಕ್ರೀಡೆಯೊಳೆಯ್ದಿನಾ ಂದುದುಗುಲಂಸ್ಯೆತಂಬಮಂಪತ್ತೆ
ಕೋ ಮುಳಿಮುಗ್ಧತ್ವದಿನಗ್ನೆಯಾದೆನೆನುತಂ ಕ್ರೀಡಾರಸಂಮುಕ್ಕೆ
ಭೂ ತಳಕಂಜೋಲ್ವತದೀಯ ಕೇಶಭರದಿಂಮೆಯ್ಯಂಮುಸುಂಕಿಟ್ಟು
ದಂ ಲಲನಾಸಂತತಿತೋರೆಕಂಡು ಪಿರಿದ ಂನಕ್ಕಂಮುಹೀವಲ್ಲಭಂ||

ಮತ್ತಂ

ಕಂ| ವಿರಹಿಗಳಮೇಲೆಮುಳಿದ್ಯೆ ಸಕಲಂನಿಜನಿಶಿತಖಡ್ಗಲತೆಯಂ
ಜಡಿನಂತಿರೆಸಲಿಲ ಕೇಳಿಗಾಬಲೆಯ ಮಾತನ ಲತೆಕಂಪಿಸಂದನಿಂತ್ತ
ದ.ಸೊಗಸಂ| |೧೦೦|

ಮತ್ತಂ

ಕಾರುಳಪುತ್ತಾದೆಗಳಿಂ ಧಾರಿಣಿಗುಗುಳ್ದ ಪ್ರವೆನಿಪತೆದಿಂನಾಂದಾ
ನಿಯರಾಕೇಶಾಗ್ರದಿ| ವಾರಿಕ್ರಾಪ್ರತತಿಬೀಳುಪ್ಪಿದುದಾಗಳ್| ೧೦೧
ಲಲನೆಯಮುಕ್ತಕಿರೀಜದಿ| ಜಲಬಿಂದುಗಳುಗುತಿಂಲ್ಕೆ,ಕಾಮುರ್

ಗಿಲವಸೀ| ತಳಕನೆರೆಕರೆವವು ಳಿಗೆತ್ತಿ ತ್ತೆಲಸಿರ್ದುವು ಬಾಯ್ದಗಲ್ದಿ
ಚಾತಕವೋತಂ| |೧೦೧|

ತರುಣಿನಿಕಾಯುಂಕರದಿಂ ಸರೋಜ ಮಂಪಿಳಿಯಲುಂಗುವವಾರಿಬಿಂದು
ಗಳಂ|ವರಮೇಘಜಮೌಕ್ತಿಕವೆಂ| ದಿರದಾಯಲ್ಕುಗುದೆಪರಿಯೆಘೋಷ
ತಿನಕ್ಕಂ |೧೦೨|

ವ|| ಅಂತಾಸಮಯದೊಳ್ವಂಪಾಲಿ ಗಳ್ಬರದಿಂತಂದುವಾಂದಿರಿಸಿದ
ದಿವ್ಯವಸ್ತ್ರಂಗಳಂ ರತ್ನಭೂಷಣಂಗಳಂ ಚಂದನಪಂಕಮಂಕುಸುಮ
ಮಾಲಿಗಳಂರಾಜೇಂದ್ರಂತಾಳ್ದು ಸೋಮಪ್ರಭಾ ಮುಖ್ಯರಮಣೀಸಮು
ಪಯಕ್ಕನಿರುಪಿಸಲ್ಕ ವರ್ಗಸದನಂಗೊಂಡುವಿಳಾಸದಿಂಕೈಗೈಯ್ದುಕಾ
ಯ್ದಿರ್ಪಾಗಳ್|

ಮ|| ಸ|| ದ್ರುಮದೊಳ್ವಾಯ್ದಲ್ಲಿ ಪುಷ್ಪಾಪಚಯದೊಳೆಸೆವಂಭೋಜ
ಷಂಡಾಂತ ದೊಳ್ಸಂಭ್ರಮದಂಬುಕ್ರೀಡೆಯಂ ತಾಳ್ದಿಲಲತೆಗಳೊಳಾ
ನುತ್ತಮುರ್ವೀಶನೊಳ್ಪೊ ಶ್ರಮದೂರಂವಂಡಚಾರಂ ರತಿಸುಖಪ
ಕಾರಂ ತ್ರಿಲೋಕೋಪಕಾರಂ ಹಿಮಸಾರಂಗಂಧಪೂರಂಸುಭಿಕ್ಷಸು
ಪಮಾನಂದ ಕಾರಂಸಮೀರಂ|| |೧೦೪|

ವ|| ಅಂತಾವಣಾಗುತನಸಮುಗುಣ ಪ ಣಾಮದಿಂಮನಡೆಗೋಂಡುರಾ
ಜೇಂದ್ರಂ ಮಾನಿನೀಸಮೇತಂ ಸರಸಿಯಂಪೊರಮಟ್ಟಾಗಳ್||

ಚಂ|| ಒಲವಿನೊಳಿಕ್ಕುತಿರ್ಪ ಮುಡಿವಾಳದಚಾಮರಜಾಳ ವೆತ್ತಿ
ತೋರ್ವಲ ಗೊಡೆಯೊಳ್ವಿರಾಜಿಸುತೆ ಮಾಘವನಂದದಿನುರ್ವರೀ
ಶ್ವರ ಸುಲಲಿತನೂಪುರಧ್ವನಿಗಳಿಂದ ಬಳಾವಳಿಬೆಂಗೊಳಿತ್ತಿರಲ್ಕಲಿದಿ
ರದೆಟ್ಟಿ ಸತ್ಕೃತಕಶೈಲಮನೇರಿದನೊಂದುಲೀಲೆಯಿಂ |೧೦೫|

ವ|| ಅಂತುಸೋಮಪ್ರಭಾದೇವೀ ಮುಖ್ಯಕಾಂತಾಜನಸಮೇತಂ
ಕೃತಕಾದ್ರಿಯನೇರಿ ಜನದಶೃಂಗಾರವನನೋಡಿಹಾರ್ಯೆಸಿಪೊಚ್ಚೆಪ
ಲ್ಲೋಳರಾಜಂ ಪನಪುಹತ್ತುಸನಂಕರೆಆಗಳ್

ಕಂ|| ಒಲವಿಂತಿಳಿಗೊಳಕಿದುವಿಚ| ಕಿಳಕಿದುಚಕೂತಕ್ಕಿಮೇದ್ರಸನ
ಪಾಲಂಗು|ಜ್ವಳನಸ್ತ್ರ...ತೆಪೆಸಗೆ...

ಚಿತ್ರಂ। ।೧೦೬।

ವ॥ ಅಂತುವನವಾಲಂಗುಡಲಿತ್ತು ವನವಿಹಾರದೊಳಾದಪರಮಾನಂದರಸಮಂ ಶಿವಂಗರ್ಪಿಸುತ್ತು ತಿಪರುಷದಿಂ ಕ್ಷತಕಾದ್ರಿಯು ನಿಳ್ದಂತುಪುರಕಾಂತಾಸಂತತಿಯುಂ ನಿಮ್ಮ ನಿಮ್ಮ ವಾಹನಂಗಳನೇರಿವೊಂದು ಜೆಸಸಿಪಗಲೆ ಟೀಳರಾಜಂ ಸೋಮಪ್ರಭಾಕ ಮೇತಂ ಸಿಂಧುರಸ್ಕಂಧಾರೂಢನಾಗಿ ಸಕಲಪರಿಜನಂ ಬೆರಸು ಪನಮಂ ಪೊರಮಟ್ಟು

ಚಂ। ಕರವಲಯಪ್ರಜಂಗಳುಲಿಯಲ್ಕೆ ವಧೂಜನಮಿಕ್ಕು ತಿರ್ಪಚಾ। ಮರಕುಳವೆತ್ತಿ ಬರ್ಪ ಪೊಸಬೆಳ್ಗೊಡೆಗಳ್ಗಳ ತೂರ್ಯನಿಸ್ವನಂ! ಪಿರಿದೆಸೆಯಲ್ಕೆ ಪೌರಜನಮುತ್ಸವದಿಂದ ಮಿದಿಗೊರ್ಗಳಲ್ಕೆ ತ। ತ್ಪುರಮನನೇಕಸಂಭ್ರಮದಿ ಪೊಕ್ಕನುದಾತ್ತನರೇಂದ್ರ ಪುಂಗವಂ।

ಕಂ॥ ಜನಪತಿಯಂತಃಪುರಕಾ । ಮಿನಿಯರ್ವೆರಸಾತ್ಮರಾಜಮಂದಿರಮಂ ಪೊಕ್ಕನುರಾಗಂ ಮಿಗೆ ಸರಸವ । ಚನರಚನೆಗಳಿಂದಿರುತ್ತುಮಿರ್ಪನ್ನೆವರಂ। ।೧೦೭।

ಚಂ। ತಿರುಗುವ ಕಾಲಚಕ್ರದಪದಕ್ರಮಮಂ ಕಳೆಯಲ್ಕೆ ವೇಳೆ ಪೊಳ್ದಿರಿದುತಳಿರ್ತ ನಂದನದಿನೊಪ್ಪುವಪಕ್ಷಮ ವಾರ್ಧಿಯೆಂಬತ । ತ್ಸರಸಿಗೊರಲ್ದು ದಿಗ್ವನಿತೆ ಯರ್ಸಹಿತಂ ಜಲಕೇಳಿಗೆಯ್ದುವಂ। ತಿರಮಿಸುಪಂಬರಾಚಳಮ ನಾಂತಿನನೊಪ್ಪಿದನಸ್ತಶೈಲದೊಳ್ ।೧೦೯॥

ಮತ್ತಂ

ಚಂ। ಪಿರಿದೊಲವಿಂ ಮಹೀಪತಿಗೆ ಕಂಜಜನೆಂಬ ಸುವರ್ಣಕಾರಕಂ ಸುರುಚಿರಭೂಷಣಾವಳಿಗಳಂ ಸಮೆಯಲ್ಕುರೆ ಕಾಸಿನೀರೊಳಾಸುರತರಮಪ್ಪ ಕಾಂಚನದ ಘಟ್ಟಿಯನದ್ದಿದನೆಂಬ ಮಾಳ್ಕೆಯಿಂ। ದರುಣತೆವೆತ್ತಡಂಗಿದುದು ಪಶ್ಚಿಮವಾರ್ಧಿಯೊಳರ್ಕಮಂಡಳಂ॥ ।೧೧೦॥

ಆಸಮಯದೊಳ್।

ಕಂ। ಪಡುಗಡಲ ವಿದ್ರುಮದ್ಯುತಿ। ಯುಡದರ್ದ ಮಾಣಿಕದತೇಜಮೊದವಿದತೆರದಿಂ। ಪಡುವಣದಿಗ್ವಧುರಾಗಂ। ಒಡೆದಳೆನಲ್ಸಂಜೆಗೆಂಪರಂಜಿಸುತಿರ್ಕ್ಕುಂ॥ ।೧೧೧॥

ಇನನಸ್ತಮಯಿಸಲಂತಾ । ದಿನಲಕ್ಷ್ಮೀಕಾಂತೆ ಸಹಗಮನಮಂ ಮಾ

ಡ| ಲ್ಕಿನೆಸೆಗಳ್ದೊಟ್ಟಿರ್ದರ್ಪೆರ್ಗಿ|ಚ್ಚೈನೆಕೇಂಬೆಳಗೆನ್ಸಿಸಿತೆಸೆವಸಂಧ್ಯಾಗ
ಗಂ|| |೧೧೨|

ವ| ಆಸಮಯದೊಳು

ಕಂ|| ಭರದಿಂ ಪ್ರಪತಿಯುರೊಳ್| ಬೆರಸಿ ವಮಾತಂಗಪಾನಕ್ಕೆಳಸು
ವಮಧುಪಂ| ಪಿರಿದಂಬುವನೆಂದತ್ಯಾ| ಸುರದಿಂಪದ್ಮಿನಿಬಗುರ್ತರ್ಗಸಂ
ವೆತೆಯಾದಲ್|| |೧೧೪|

ಪಿರಿದುಂದ್ವಿಜಾಪಹರಣಂ| ಡೊರಕಿತ್ತೆಂಬರಮನುಳಿದುಕರವಳಿಪ
ಡಿವಾ| ಕರನಂನೋಡದೆನೆರೆವೋಗ| ದಿರುಪಿದುದೆನೆಮುಗಿದುದಬ್ಜ
ಮಬ್ಜಾಕರದೊಳ್| |೧೧೫|

ವೃತ್ತಂ

ಘನರಾಜತೇಜದಿಂದಿ|ರ್ದನಗಂಮುದವೆನ್ನನಕಟಕುಮುದಾಖ್ಯ
ದುನಿ| ಟ್ಟನೆಜಂತಾನೆನುತಂನೆ|ಟ್ಟನೆನೆಗುವಂತಲರ್ದುದುತ್ಪಲಂತಿ
ಗೊಳದೊಳ್

ವ|| ಮತ್ತಮಾಸಮಯದೊಳ್|

ಮ|| ಸ್ರ| ಕೊಳನೊಳ್ಛಾಯಾರಿನೋಡುತ್ತಿರಿವರತುನಿಜಚ್ಛಾಯೆಯಂ
ಕಂಡುನೀರೊ| ಳ್ಮುಳುಗಿರ್ಪರ್ಗಳ್ನಲ್ಲಳೆಂದೆಯ್ದೆಸುತೆ ಮುಗಿದಂಭೋ
ಜಮಂಬಿರ್ಚಿನೋಡ| ಲ್ಕಿಳಿಯ್ಯುಮ್ಮೆಂದೆದುಃಬೇಗಂಪೊರಮಡೆಮದನಾ
ಸ್ತ್ರಂದಿಟಂತಾನಿದೆಂದ ವ್ಯಾಳಿಸುತ್ತಂನೊಂದುಬಿರ್ದತ್ತುತುಳವಿರಹತಾ
ಪೋರ್ಜಿತಾಂಗಂರಥಾಂಗಂ| |೧೧೬|

ಪಿರಿದುಪತಿಗಾಣದಳಲಿಂ| ಮರೆವಟ್ಟಿರೆಮುಗಿದಕಣ್ಣೆಳೆವ್ವರಕೆಗಳಿ
ಸ್ಮರನೆಸೆಯುಲಂಬಗೂಡಾ| ಗಿರೆಬಿದಿರ್ಗಂತಿರ್ದುದದರೊಳೊಂದುರಥಾಂ
ಗಂ| |೧೧೭|

ಆಸಮಯದೊಳ್

ಶಿವಭಕ್ತಿಮೂರ್ಜಗದೊ| ಳ್ಶಿವನಲ್ಲದೆಮತ್ತೆದೈವವಿಲ್ಲೆಂದುರೆಸಾ
ರುವಪಡಂಗುರುವೆಂಬಂತಿರೆ| ಶಿವಗೃಹದೊಳ್ಸಂಜೆವರೆಗಳುಣ್ಮಿದುವಾಗ
ಳ್|| |೧೧೮|

ಮತ್ತಮನಂತರಂ|

ಪರಸಿತಭಕ್ತರೋದವಿಲಿರ| ಚಿತದೆ[illegible]ತಿ ಗಿತ್ತಲೆಪಡಪೆಳ್ದಿಂ ನಗೆ

ಬಂ| ಘುಳಬೀಳ್ತರಾಜಿಯೆಂಬಂ | ತಿರಲಿಸೆವುಶಿರ್ಮದವುಮುತ್ತಾರಾನಿಕರಂ| ||೧೧೯||

ಸವಮುಳಚಂದ್ರನಬರವಿಗೆ| ಪದಪಿಂದಾಕಾಳವರ್ಗದೊಳ್ಘನರಜಸೀ| ಸುಪತಿನಲವಿಂಡೆಪೂವಲಿ! ಗೆದರುವವೊಲ್ಸ್ತೊಳಗಿಬೆಳಗಿದುವುತಾರಗೆಗಳ್|| ೧೨೦

ಆಸಮಯದೊಳ್||

ಹರನೀಕ್ಷಿಸೆಜಳನಿಳಯುಂ | ಹರಿಮೇಖಳೆಯಿಂಪೆಬೀತುದಲ್ದಶದಿಶೆಗಳ್,ಪಿರಿದಪಗಿಪೋದುವೆಂಬಂ |ತಿರೆಕತ್ತಲೆಸುತ್ತಿಮುತ್ತಿ ಪರ್ಬಿತ್ತಾಗಳ್|| |೧೨೧||

ಧರೆಯುಂಜಗುನಿಯುಮುಡುಪಾ | ವರಿಸಿತೋಲಪವಿಭಯ.ದಿನೆಣ್ದಿಸೆಗಳೊಳಗಂತಾ| ಸುರತರದನೀಲಗಿರಿಪಿ| ಯ್ಗರೆದುದೆನಲ್ಪಬಿರ್ದತ್ತುಬಹುಳತಮೋಂಧಂ| ||೧೨೨||

ಅಂತಾಬಹುಳತಮೋಂಧದೊಳ್

ಚಂ|| ನೆರೆಮನೆಗೂಸನೆತ್ತಿರದೆ ಚ್ಛೈಗುಡುವಂದದೆನಲ್ಕೆದೋರ್ಪಸು| ಣ್ಗುರುಳ್ಗಳನೋವುತ್ತಂತಿರೆ ಕರಾಂಗುಲಿಯಂನೆರೆಸನ್ನೆಗೆಯ್ವಬಂಧುರಪರಹಾಸಮುಣ್ಮೆ ತಲೆಗುತ್ತಿ ಕಟಾಕ್ಷದಿನೋಲ್ಪಜಾರೆಯತ್ವರಿತ್ತಪೊಳಾತ್ಮಜಾರರೆಡೆಗಾನಿ ಶಿಯೊಳೆಸ್ಸರಮುಟ್ಟುದಾತರ್ದಿಂ|

ಕಂ|| ಮುಡಿಬಾರವೆನುತೆಕರುಗಳ್| ತಡೆದಪೆನುತ್ತೆಣ್ಣೆಗಿರದೆಪೋಪೆನೆನುತ್ತಂ| ಮಿಡಚೆನೆವಪಕ್ಕಿತವಕದಿ| ನಿಬಿದತಮೋಂಧದೊಳೆಜಾರೆಯರ್ಪೊರಮಟ್ಟರ್| |೧೨೪||

ಅಂತುಪೊರಮಟ್ಟಾಗಳ್

ಅಡೆಗುಣಿಪಾಗರಮುರೆಮುರ | ದಡಿಗಳ್ಳೊಳುಪಪತಿಗಳೊಡೆನೆನಿರಿಯುಚ್ಚದೆಸ್ಸೆ!ಗಡೆದುರುಳಿಬೆನ್ನಪುಡಿಮುಂ,ತೊಡೆವುತ್ತಂಬೀದಿಹುಡಿಗಜಾರೆಯರೆಸೆದರ್|| ೧೨೫||

ವತ್ತಮಿರ್ವಳ್

ಕಂ|| ಒಳಿಗಳನೇರೆಳುತ್ತುತ್ತಂ | ಪಳಂಚೆನುಂಗುರಮನುಲಿವುವೆನುತ್ತಂ ಹಸ್ತಾಂ| ಗುಳಿಗಳೊಳ್ಕಿಕ್ಕೆಳುತ್ತಂ | ಕ್ರಲಟೆಮನಕಿಸಿಪ್ಪೀವನಪೊರಗಪೋಗುತ್ತಿರ್ದರ್ ||೧೨೬||

ಚಂ॥ ಅಳಿಕುಳಕುಂತಲಾಳಿಮೃಗನಾಭಿಜಪಣ್ಪೊಳಿನಿಂದೊಲೆಕ್ಕೊ ಮೆಳತರಪಾಟಳೀಕುಸುಮ ಮಾಲೆಮುಸುಂಕಿಪನೀಲಚೇಲವ ಗ್ಗಳಿಕೆ ಯೊಳಪ್ಪಿನಿಕ್ಕೆಯೆನೆಜಾಣ್ಮೆ ಯಿಸಿಂಗರವೊಪ್ಪೆಜಾರೆಕ, ಣ್ಗೊಳಿಸುವ ಕಾಳರಾತ್ರಿಬರುತಿರ್ದಳೆ ನಲ್ಕೆಸದಳ್ತಮಾಂಥದೋಳ್ ॥೧೭೬॥

ವ॥ ಮತ್ತೊಂದೆಡೆಯೊಳೊರ್ವಳ್

ಕಂ॥ ಮುಳಿಸಿಂದೆಪೋಗಿಕಾಣ । ಲ್ತಿಳಿದಾಗಲ್ತೆಡೆಯುದಪ್ಪಿಬೈಗುಳ್ಗೆ ಯ್ದುಳ್। ಗಳರುರೆಮೆಯ್ದೋರದೆಪುಂ । ಶ್ಚಳಿಯುಪಪತಿಯೊಡನೆನೆರಮ ಪೋಗುತ್ತಿರ್ದಳ್। ॥೧೭೭॥

ಮತ್ತೊಂದೆಡೆಯೊಳ್

ತನ್ನಪಳಂಪಾರುತ್ತೋ । ರ್ವನ್ನಿಶಿಯೊಳ್ಸೂಚಿಗ್ರಹದೊಳಿರೆಮ ತ್ತೋ। ರ್ವಳ್ಗನ್ನದಿಬರೆನೆರೆದುಬಳಿ । ಕ್ಕಂನೆರೆತಿಳಿದರಿದುನಗುತಮು ಬರ್ಪೋದರ್। ॥೧೭೮॥

ಮತ್ತೊಂದೆಡೆಯೊಳೊರ್ವಳ್

ಪವೆಡಯ್ದುಜಾರಸಂಕೇ । ತದಗೃಹಪೊಳ್ಸ್ರಿಯನೆನಲ್ಲಿಕಾಣದೆಮ ನದೊ । ಳ್ಪೊದರುತ್ತಂಕಲ್ಲಂತಾ। ಗಿದನಿಂಟೆಯುತೆರವಿಸೆಪೆಮಪೋಗು ತ್ತಿರ್ದಳ್ ॥೧೭೯॥

ಮತ್ತಮೊರ್ವಳ್

ಚಂ॥ ಬಿಡುಮುಡಿಯುಂತೊಡರ್ಚೆ। ಕಳೆದಿರ್ದಳಕಂಗಳನೊತ್ತು ತು ಸಡಿ। ಲ್ದುಡಿಗೆಯನೆತ್ತುತಂಜಿರಕೆಡಂ ಬಲವುಂಬಿಸಡುತ್ತೆನಾಡೆಕಂ ಪಿಡುವಹಿಮಾಸ್ಯಮುಂ ಸೆರಗಿನಿಂತೊಡೆಯುತ್ತೆಕಡಂಗಿ ಜಾರಿನೊತ್ತಡೆ ಯುದೆಜಾರೆಗೂಡಿತ ವಕ್ಷಮಿಗಲೆಯ್ದಿದಳಾತ್ಮಗೇಹಮಂ ॥೧೮೦॥

ಮತ್ತಂ

ಕಂ॥ ತಮಮೆಂಬಿರಾಹುಭಯದಿಂ । ದ್ಯುಮಣಿಸ್ವೋಳತೆಯನೀಮ ತಿರುಮೂರ್ತಿಗಳೆ। ಸಮುಚಿತದಿತಾಲ್ದನೆನೆಗೃಹ। ಸಮಿತಿಗಳೊಳ್ಗ್ರೊ ಳಗಿ ಬೆಳಗಿದವುದೀಪಿಕೆಗಳ್ ॥೧೮೧॥

ವ॥ ಮತ್ತಮಾಸಮಯದೊಳ್

ಚಂ॥ ಬಿನದದಿರೋಹಿಣೀವನಿತೆಸಿಂಪಿಣಿಯಾಡಿದಕುಂಕುಮೋದಕಂ ತನುವಿನೊಳ್ಪೊದ್ದಿದತ್ತೆ ಬ್ಬೋರ್ಣತ್ತಗಪಾಲ್ಗೆಪ್ರತ್ತ ಪೋ ಕನ

ತರಭೂಷಣಾವಳಿಯು ರತ್ನಮರೀಚಿಪ್ರೋದಳ್ದು ಪರ್ಬಿತೋ। ಯೆನಸೆ
ದತ್ತುರಕ್ತರುಚಿಯಿಂದುದಯಾದ್ರಿಯೊಳಿಂದುಮಂಡಳಂ॥
ವ॥ ಸ॥ ಧರಣೀಭಾಗಕ್ಕೆ ತಂಪಂ ಕುಮುದತತಿಗೆ ಪೆಂಪಂ ಚಕೋ
ರಾಳಿಗಿಂಪಂ। ವಿರಹಿವ್ರಾತಕ್ಕೆ ಕಿಚ್ಚಂ ಶರಧಿ ಗೆ...ಗೆಪೆಚ್ಚಂ ರಥಾಂಗ
ಕ್ಕೆ ಹುಚ್ಚಂ। ಪಿಡಿವುತ್ತುದ್ಭಾಸಿಸುತ್ತುಪ್ರಬಳತರಸುಖಂಬೆತ್ತು ನೋಡ
ಲ್ಕೆಳುಂಬಂ। ನಿರುತಂ ಜಾರಾವಿಡಂಬಂ ನುತಗುಣನಿಕುರುಂಬಂ ಸುಧಾ
ಸೂತಿಬಿಂಬಂ॥ ॥೧೩೪॥

ಅನಂತರಂ

ಕಂ॥ ವಿನುತವಸಂತನ ಬೆಳ್ಗೊಡೆ । ಬಿನದದೆ ರತಿಪಿಡಿದ ಮೌಕ್ತಿಕದ
ಸೆಂಡಸಮಾ। ಸ್ಮರನ ಕರದ ಕುಸುಮಖೇಟಕ। ಮೆನಲೆಸೆದುದು ಬೆಳ್ಪಿನಿಂ
ಸುಧಾಕರಬಿಂಬಂ॥ ॥೧೩೫॥
ಚಂ॥ ಪುರಹರನಟ್ಟಹಾಸದ ಮಹಾಪ್ರಭೆಯಾವರಿಸಲ್ಕೆ ಕಾಣಿಸಲ್ಕ
ರಿದೆನಲಿಂದ್ರನೀಲಮಣಿ ಭೂಷಣಮಂ ಕುರುಪಿಕ್ಕೆ ರೋಹಿಣೀ ತರುಣಿ
ನಿಸೇಸನಂ ಕುರುಪು ವಿಟ್ಟೆಳೆಗಪ್ಪನದಂ ನೆಗಳ್ದಪ್ಪ ತೆರಳಿಪಟಂಗಳೇದು
ಶಿಲವಿಲ್ಲದವನ್ನುಡಿ ಪಥ ರಿತ್ರಿಯೊಳ್। ।೩೬।
ಕಂ॥ ಸರಭಸದಿಂ ರತಿ ಬಂದೈ । ಸರಳನ ಕರತಳಕನೀದು ನೀಡುವ ಪೊ
ಸಕ। ತ್ತುರಿಯುಂ ತುಂಬಿದ ಪಚ್ಚಿಕೆನ। ಕರಡಿಗೆಯನಿಸಿತ್ತು ಚೆನ್ನ ಹಿಮಾಂಶ
ಶಿಬಿಂಬಂ। ॥೩೭।
ಮ॥ ಶಿಶಿರವಾನಿಸೆ...ನಕರ್ಕಟಕ್ಕಪ್ರಂಪವಾಕ್ಷ್ಯರತ್ತಾರಕ ಪ್ರಸ
ರಂವ್ರಾಕ್ಷಿಕರತ್ನಸಂಕುಳನಘಪ್ರ ದ್ಯೋತನಾಂರಾಯಣಾಂಶ ಶಿಯೋ
ಸಂಖವೆ. ನಲ್ಸುಧಾಜಳನಿಧಿಸ್ವರ್ಗಂಗೆ ಮುಂಕೂಡ ತಿಂದೆಸೆವಳ್ತಂದ. ದೊ
ತಾನೆನಿಪ್ಪ ಬಗೆವಿ.ಂಪವಿತ್ತ ಚಂದ್ರಾತಪಂ।
ಚಂ॥ ಅಲರ್ದಲರ್ಗೊಂಚಲೆಂದು ತಿಳಿಯಲು ಪಳಾಂಬರಮೊಂದುಡ
ಪ್ಪಿಕೋಮಳತರಮೌಕ್ತಿಕಾಭರಣಮೊಂದಿದ ಲಾವಗೆಯೊಂದು ಪಿಡಿಯ
ಲು। ಜಗಿಸುವ ಸೌಧಮೊಂದು ತರಲಾಡಿಪ ಮುಗ್ಧವಧೂಜನಂಗಳಂ।
ಸಲಿವ...ರ.ಲಾಡುತೆಣ್ದೆಸೆಗಳೊಳ್ಪಿರಿ ದೊಪ್ಪಿದ.ವಿಂದುರಶ್ಮಿಗಳ್।
ಕಂ॥ ತಂಪಂಗುಡುತ್ತೆ ತಣ್ಣದಿ ರಿಂಪಂಸಪಿವುತ್ತೆ ಕೊಸರ್ವ ಶಶಿಕಾಂ
ತವನೀ। ರಂಪೊಕ್ಕಿನ...ಧುತ್ತ... ರೋಪ್ಪಪರ್ದಾಡಿದುವು ಚಕೋರ

ಚಯಂಗಳ್‌| ||೪೦|

ವಸುಧೆಗೆಚೋಳನೃಪಾಳನ| ಜಸದೆಸಕಮನಿಂತುಟೆಂದ್ರುತ್ತೋ
ರ್ಷಂಪದಿನೆ| ಣ್ದೆಸೆಗಳನಲ್ಲಪನ ರಥವ| ಳಿಸುತಂಕಣ್ಗೆಸೆದುದಚ್ಚಪೂ
ಸಬೆಳ್ದಿಂಗಳ್‌| |೪೦|

ವ| ಅಂತಾಚಂದ್ರೋದಯವಿಳಾಸಮಂನೋಡಿಹಾರ್ಯೆಸಿನರೇಂದ್ರಚಂ
ದ್ರಂಚಂದ್ರಿಕಾವಿಹರಣಲೀಲೆಗೆ ಮನಂದಂದುನಾಗರಿಕವಿಟವಿದೂಷಕ
ಪೀಠಮರ್ದಕರೆಂಬ ನಾಯಕರುಂ ದಕ್ಷಿಣಾನುಕೂಲಶಠದುಷ್ಟರೆಂಬ
ನಾಯಕರುಂ ಬೆರಸಾಗಳ್‌|

ಚಂ| ಮಿಸುಗುವಮುತ್ತಿನಾರಮನು ರಾಗವೊಳಾಂತುಸುಗಂಧಚಂ
ದನಂ| ನಸುಬಿರಿವಚ್ಚಮಲ್ಲಿಗೆಯ ಚೊಲ್ಲಿಯುಮುಟ್ಟಸಿತಾಂಬರಂವಿರಾ
ಜಿಸಲಭವಾಂಘ್ರಿಭಕ್ತನೆ ನಿಪಗ್ಗದಚೋಳನೃಪಾಳನಾಗಳಾ ವಸಥದೆ
ಚಂದ್ರಿಕಾವಿಹರಣಕ್ಕೊಲವಿಂ ಪೊರಮಟ್ಟನರ್ಥಿಯಿಂ| |೪೨|

ವ| ಅಂತುಪೊರಮಟ್ಟುವಿಪಣಿಪಥಮಂನಿಜಪದನಖಮಯೂಖಚಂ
ದ್ರಿಕೆಯಿಂಧವಳಿಸುತ್ತಂ ವೇಶ್ಯಾವಾಟಸಮೀಪಕ್ಕೆ ಬರುತ್ತಿರ್ಪಾಗ
ಳ್

ಮ| ವರಕಾಳಾಗುರುಧೂಪಧೂಮ ವಿಜಿತಾಮೋದಾರ್ಪಿತಾಳಿಪ್ರ
ಜಂ ತರುಣೀಬಂಧುರಕಂಧರೋಲ್ಲಸಿತ ಮಲ್ಲಿಮಾಲಿಕಾಂಪೋಳಿತಂ|
ಸುರತಸ್ವೇದಪಯಃಕಣ ಪ್ರಕರವಿಚ್ಛೇದೈಕಶೀಲಂಮಹಾ|ಭರದಿಂಸಂ
ಚರಿಸುತ್ತೆ ಸತ್ಪಣವಘೋಘಂಟಾರುತಂ ಮಾರುತಂ

ವ| ಅಂತಾಮಂದಮಾರುತನಂ ಮನವೆಗೊಂಡುಲೋಚನಚಕೋ
ರೀಕಪ್ರಸೂ ನವಾಟಮೆಂಪೆನಿಪವೇಶ್ಯಾ ವಾಟಮಂಪೊಕ್ಕುಬರುತ್ತಿ
ರ್ಪಾಗಳ್

ಮ| ಸ್ರ| ಸುರಸಂಪೂರ್ಣಯದ್ದಂತನಂಭೋರುಹಭ ವನತಿಪ್ರದ್ಧಂಕ
ಟಾಭೃತ್ಯಕಳಂಕಂ| ಹರಿಣಾದಂಮಾರುತಂಚಂಚಳನ ಸಮಶರಂಕಾಮ
ಹೀನಂಪಸಂತಂ| ಪಿರಿದುನ್ನತ್ತಂಕುಚೇ ರಂಭೆಗೆಕೃಪಣಸಿನಂ ನೀ
ಳಿಪ್ಪದತ್ತ್ಯಸ್ತನೆಂದಾ| ಸುರದಿಂನಿಂಪುಷ್ಟಲಾವಣ್ಯಾದಿ ಪಳಿವುದಜಸ್ರಂ
ಪಣಸ್ತ್ರೀಸಹಸ್ರಂ |೪೪|

ಚಂ॥ ಪುರುಡಿಸಿಜ್ಜೈವಸೊಕ್ಕಿಪಿಗೆ ಪೋಹಿಸಿಮುದ್ದಿಸಿಲಲ್ಲಿಗೆಯ್ವ
ಸಿಂ॥ ಗರವನೆಮಾಳ್ಪಕಂಡುದನೆ ಬೇಳ್ಪಮುಗುಳ್ನಗೆದೋರ್ಪಸೋಲ್ದ
ರಂ। ಸರಸದಿಪೊಯ್ವಮೆಯ್ಯುಗ್ಗಡದೆ ಕಾಡುವ್ಯೆಸಿಕದೊಲ್ಮೆಯಂಪರಂ।
ಪರಸುವಸರ್ವವಲ್ಲಭೆಯರೊಪ್ಪಿರಲ್ನೃಪನೊಲ್ದುನೋಡಿದಂ॥
ವ॥ ಅಂತಾನರೇಂದ್ರಂ ನೋಡುತ್ತಂನಡೆಯೆನಡೆಯೆ ಮುಂದೊಂದೆ
ಪಬೋಳ್॥
ಕಂ॥ ನವವಜ್ರಸ್ತಂಭಗಳ್ । ಪವಳದಮಣಿಗಟ್ಟನೊಲವಿಳಮೌಕ್ತಿ
ಕದಿಂ॥ ದವೆಸವೆದಸೊಸಕದಿನೊ । ಪ್ಪುವನವಿಲುಯ್ಯಲೆಯನೇರಿತರು
ಣಿಯರಸೆದರ್। ||೧೮೫||
ಚಂ॥ ಒದವಿದತಮ್ಮಚಾರುಮುಖಬಿಂಬಮನೀಕ್ಷಿಸಿಪಾಟಿಯಾಗಲಾ
ರದನೆರೆಕಂಡಿಕುಂದಿ ಬಡವಾಗುತಿರಲ್ಕ್ರಪೆಯಿಂಪೆಪೋಗಿಪುದ್ವಪನ
ಪೇಳದುರ್ಘೂರ್ಣತೆಯ ನೆಯ್ದುನುತಂಕರೆಯಲ್ಕೆಪೋಪಪ್ರೋ। ಲ್ಸ
ದತಿನಭೋಂಗಣಕ್ಕೊ ಗೆದುಸಾದರದಿಂದೊಲೆದುಯ್ಯಲಾಡಿದಳ್
ಒಲವುಬೆಡಂಗುಭಾವಕರಕಣ್ಮರಂ ಸೆಲೆಗಯ್ಯತನ್ನಚಂ। ಚಳನ
ಪಿನಾಂಶುಹಾರಲತೆ ಮೇಲುದುಸೋರ್ಮುಡಿಕುಂತಲಾಳಿಕುಂ: ಡ
ಲಮೆಸೆವಂಘ್ರಿಪಾಣಿನಖರೋಚಿ ಗಳಿಯೊದ್ದವ-ಡಲೇರ್ವಕೋ।
ಮಳೆಗಗನಕ್ಕೆ ಪಾರಿಖಚರಾಂಗನೆಯಂ ತೊಲೆದುಯ್ಯಲಾಡಿದಳ್॥
ವ॥ ಅಂತಾಗಾಡಿಕಾತಿಯರವಿಲಾಸಮಂನೋಡುತ್ತನಡೆಯುವುಂ
ದೊಂದೆಡೆಯೊಳಿಂದು ಕಾಂತಮಂದಿರಾಜಿರದೊಳ್ಚಂದನ ದ್ರ
ಲೊಳ್ಪಸಮುತ್ತಿನ ಕ್ಕಿಯಂ ಪೊಯ್ದುಪೂಸಮಿಸುನಿಯೊನಕೆಗಳಂ ಪಿಡಿ
ದುಸಸಿಪದನೆಯ ರೊಸಗೆಯುರಾಗಪೆಸೆಯುಲ್ ಪಾಡುತ್ತಂಸಳಿತೋ
ಗ್ಗಳಸೆತ್ತು॥
ತ್ರಿಪದಿ॥ ಜನಸುತವಸಂತಂಗೆಘನಭೋಗ ದೊಡವಕ್ಕೆ। ಪನಸಿಜ
ನಘುಜಕೆಸಿರಿಯಕ್ಕೆ ರತಿಯುಮನದನುನಯಂಪಿಂಗದಿರುತಿರ್ಕೆ।
ತರುಣಿಯರಚೆಲ್ವ ಪು। ವಿರಲಿಕ್ಷುಧನುವೇಕೆಸುರುಚಿರತೆವಿತ್ತಕ
ಡೆಣ್ಣಕೋರೆಗಳಿರಲ್ಕ ರಲಸೆರಳೇಕೆಮದನಂಗೆ॥ ||೧೫೯||
ಸಸಿಗೆನೀರೆರೆವಂತೆರಸಿಕರಾಗಿರ್ದ ಪ। ಗರ್ಳೊಸೆದುಬೆಲೆವೆಣ್ಗೆದಿ
ನದಲ್ಲಿಸನಿಯಮ। ಲಸದಳದಬೇಂಟಮೊದಪಿಕ್ಕು॥ ||೧೬೦||

ಪರಿಮಳಂಬೋದಬಳಿಕ ರಲ್ಗಳಂಮುಡಿದಿರ್ಪುದೆ| ಪರಿಕಿಪ್ರೊಡೆನಾಡೆ
ನವಿಲ್ಲದ ಪರೊಪನೆನೆರೆದಿರ್ಪುದಲ್ತೆ ಬೆಳಿವೆಣ್ಸೆ ೧೫೨|

ವ| ಎಂದೆಂಬರ್ ನಕೆವಾಡಿನೊಳ್ನು ಡಿವಸೊಳಿಸಿಂದ್ಧಾಂತ್ರಮಾನ
ರೇಂದ್ರಂಕೇಳ್ದು ನಸುನಗುತ್ತಂಪ್ರೇಗವೋಗೆಮುಂ ದೊಂದುಮು
ಕತದವುಂದಿರಾಚಿರಪೊಳ್ | ಗಣಿಕಾಕವಂಬಂನೆರೆದುಫಳತಳಟ್ಟಣ
ಳೊಳ್ಳಿಘವಂತುಂಬಿಮುಂ ದಿಟ್ಟಕೊಂಡುರಜತಕನಕಚಷಕಂಗಳಂ
ಪಿಡಿದುತಗೆತಗೆದಿಂ| ಟಿಹಾಸ್ಯಸುತ್ತಾಗಳ್|

ಕಂ|| ಜೇಗುತ್ತೆ ಬಿಕ್ಕಿ ಪರ್ರನೆ! ತೇಗುತ್ತುಂಗರ್ಗಣ್ಗಳ್ ಲೀಕ್ಷಿಸುತ್ತಿದ
ರ್ಪುತಂ ಗುತ್ತೆ ತೊದಳಜೋಗಂ | ಬೋಗುತ್ತಂಸೊಕ್ಕಿದಬಲೆಯರ್ಕ
ಣ್ಣಿಸದರ್| ೧೫೩|

ಮತ್ತಮವರೊಳ್ಕೆಲಂಬರ್

ಚಂ ಕುರುಳೊಳ್ ದಿಂಡೆಕಾರವಲು ಗಾಡೆಕುಚಂಕುಚಿಪಿಂಡೆಚಾರು
ನೊ| ಪುರಮುಲಿದಾಡೆ ಕಾಂಚಿಪ್ರೊಳೆದಾಡೆ ಬಳೆಲ್ತು ಬಿಮಾಣದಾಡೆ ಭಾ
ಸುರತರನೀಡೊಲಿ ನಲಿದಾಡಲನನ್ಯಣಿಕಂಕಣಂಪಳಂ ಚರುದನಿ
ದೋರ್ಪದೆ ಪರ್ತಿಸಿದರಂಗನೆಯುವರ್ಧುಪಾನ ಗೋಷ್ಠಿಯೊಳ್||

ಮತ್ತಮೊರ್ವಳ್

ಕಂ| ಹರಿನೀಲದಮೊಯ್ವಣದ ಪರಮಧುಮಧುವಿಂ ಟಿಜತೆಚಷಕ
ಮನುರದೆ| ಧ್ರಿಯಿಸಿಶಶಿಬಿಂಬಮನಾ |ಪರಡಿಂದಪ್ಪಿದರ್ಜನಿಯನೆ
ರಪ್ರೋಲ್ತಳ್|| ೧೫೪|

ಮತ್ತಮೊರ್ವಳ್|

ಮಿಸುಗುವಪಲುಕಿನಚಷಕದ| ಪಸರದಪ್ರತಿಬಿಂಬಿಪಿಂದುಮಂಡಲ
ಮಂನಿ| ಟ್ಟಿಸಿಕ್ಕೆಗೊಳಗಾದನೆನು | ತ್ತುಸವಳದಿಂಸೊಕ್ಕಿದಬಳೆಮು
ಧಿರ್ತೆಯಾದಳ್|| |೧೫೫|

ವ| ಅಂತುನ್ಮತ್ತೆಯುದಪ್ಪ ವಿಳಾಸಿನೀಜನಮುಂನೋಡಿನಗುತ್ತುಂಸದೆ
ಯಿನಡೆಯುಮುಂದೊಂದೆಡೆಯೊಳ್ಮಿ ಜಮುಂದಿರದಚಂದ್ರಾಲೋಕದೊ
ಳೊತ್ತುಗೆಸಿದಿರ್ದವಳಂ ಭೂಪಾಳಂನೋಳ್ಪಾಗಳ್

ಚಂ| ತೊಳಗ ಪಶಂಖದೊಳ್ ...

ಲ್ಲಿಯುಂ ಮಳಯಜವಣ್ಣಿಕೆಪೂರ್ರದ ಮೊಗುತಿಕತ್ತುರಿಬೊಟ್ಟುಕೈಯ ನಿರ್ಮಳಮುಕುರಂದು ಕೊಲದೆಡೆಕಂಠ ದಮುತ್ತಿನಹಾರವೊಪ್ಪಲ ಗ್ಗಳಿಕೆಯುದೇಶಿಕಾರ್ತಿತ ನಮುಂನೆರೆಬೀರುತಮೊರ್ವಳೊಪ್ಪಿದಳ್|

ವ| ಅಂತಮಳವಿಳಾಸಮುಂನೋಡಿ ಮುಚ್ಚು ವಪಗಲ್ತೊಳರಾಜಂಗೆ ನಾಗರಿಕನಿಂತೆಂದಂ

ಚ|| ಎಳೆದಳಿರಗ್ರಪೊಳ್ಕದಳಿಕತ್ಪಳಿ ನಂನೆಳಿನಾಕರಂನಿವಿರ್ದೆಳೆ ತಚಕ್ರಮೂರ್ಜಿತಮೃಣಾಳಮಶೋ ಕೆಸುಪಕ್ಷದಾಡಿಯುಂಸುಲಲಿತ ಚಂಪಕಂಕುವಳಯಂಕಮಳಂಭ್ರಮರಂಗಳಿರ್ಪ ಕೋಮಳ ವನಮಿಂ ದುಕಾಂತಮಣಿಪರ್ವ್ಯ ದೊಳಿರ್ಪುದಿದೇಂವಿಚಿತ್ರಮೋ ೧೫೮

ವ|| ಎಂಬವ್ಯಂಗ್ಯದಮಾತಂ ಭೂಪಾಳಂಕೇಳ್ದು ಮೆಚ್ಚುತ್ತಂ ನಡೆ ಯೆನಡೆಯೆಮುಂಪೊಂಬೆಡೆಯೊಳ್

ಚ|| ಪರಘನಸಾರದಿಂಸಮೆದಬೊಟ್ಟು ಪೊಗೆತ್ತಿಯಮುತ್ತಿನೋ ಲೆಬಗ್ಗಿರಘವಳಾಂಬರಂಪುದಿದಮಲ್ಲಿಗೆಚಂಡನದಣ್ಪನೇತ್ರಕೇ| ಕ ರದುಚಿಯುಂಬಿಪೆತ್ತ ಬೆಳಗಂ ತರೆವುತ್ತಿರೆಚಂದ್ರಲಕ್ಷ್ಮಿಯಂ| ತಿರೆಪೊಸ ಜೊನ್ನದಿಂದೆಸೆಪಸೌಧದೊಳೊರ್ವ ಲತಾಂಗಿಯೊಪ್ಪಿದಳ್ ।೧೫೯।

ವ|| ಅಂತಾಕಾಂತೆಯುರೂಪಾತಿಶಯ ಮುಂಭೂಪಾಳಂನೋಡಿಹಾ ಸ್ಯಸುತ್ತಿರ್ಪಾರ್ಗಳ್ವಿಟನಿಂತೆಂದಂ

ಕಂ| ತಣ್ಣದಿರನುಗುಳ್ವಬೆಳತಿಗೆ ಗಣ್ಣಳನಗೆಮೊಗದಬಟ್ಟವೊಲಗ ಳಪಲವುಂ| ನುಣ್ಣರುಳೆಸವಂಬೀರುವ| ಪೆಣ್ಣಳಚೆಲ್ವಿಕೆಗೆಸೋಲದಿರ್ಪ ಜನಾಪಂ| ।೧೬೦||

ವ| ಎಂದಾಮಾತಂಕೇಳ್ದು ದಿಟಮೆನುತ್ತಂ ಭೂಪಾಳಂಪೊಗೆಪೋ ಗೆಮುಂದೊಂದೆಡೆಯೊಳ್

ಚಂ| ಪರನಖಕಾಂತಿಯೊಳ್ಪೊಳೆವ ಚಂದ್ರನನೀಕ್ಷಿಸಿಸದಿಮು| ಚ್ಚ ರಣದೊಳೇಕೆಬಿರ್ದೆಯೆನುತಂ ಪದಮಂತೆಗೆಯಲ್ಕೆನೀಲದಿಂ ವಿರಚಿತ ಪಾದಕುಟ್ಟಿಮ ದೊಳುಂಪೊರಳುತ್ತಿರೆಬರ್ಪನೇಳೆನು| ತ್ತಿರಪೆಕರಂಗ ಳಂತೆಗೆಯೆಬಾರದಿರಲ್ಪರು ಮುಗ್ಧೆಮಾಣ್ಕಿದಳ್ ।೧೬೧।

ವ॥ ಅಂತವಳಮುಗ್ಧತ್ವಮಂ ಭೂಪಾಳಂನೋಡಿನಗುತ್ತಿರ್ಪಾಗಳ್ ವಿದೂಷಕನಿಂತೆಂದಂ

ಚಂ॥ ಅರಸನೆನಿಪ್ಪನನ್ನ ಗೆತಿಗಂಡೊಡೆಕಣ್ಣೊಡದಿರ್ಪನೇನಿರಂತರಕ ರಪೀಡನಕ್ಕಿರದೆ ಜಾರಿಮನೋಜನವಂ ದಿರಕ್ಕೆಪೊಪ್ಪುರವಣಿಗಂಡು ನಾಭಿಯುಗುನಿಲ್ಲತಿದಂಡದ ಬಾಧೆಯಲ್ಲಿನಿರ್ಭರವೆನೆನಾಣ್ಚಿ ಬಳ್ಕಿನವು ವಿದುರ್ವುಲಂಬಕುಚಂವಧೂಟಿಯಾ। ।೬೨

ವ॥ ಎಂದುವಿದೂಷಕನರಳಂ ನಗಿಸುತ್ತಂಪೋಪಾಗಳ್ಪೇರವರ್ಧಕ ನಿಂತೆಂದಂ।

ಕಂ॥ ನುಡಿರೂಪಧರಂಪೊಸಮುಡಿ। ಯೊಡಲಂತಾಂಕಣ್ಣಿಕಿವಿಗರ ಸನೆಗೆಮೂಗಿಂ। ಗೊಡಲಂಗಿಂಪೆನೆಪೆಂಡರ। ಗಡಣಂಪಂಚೇಂದ್ರಿಯ ಕ್ಕೆನೆಲೆವನೆಯಲ್ತೆ। ।೧೬೪

ವ॥ ಎಂದುನುಡಿಯುತ್ತಂಪೋಗೆವೋಗೆ ಮುಂದೊಪೆಡೆಯೊಳ್

ಚಂ॥ ಪಿರಿದುಪಿನೋದದಿಂಬಿಡದೆಕಂತುಕಮಂ ಪೊಡೆವುತ್ತಿರಲ್ಕೆತ ತ್ಕರನರುಣಾಂಶು ಪಿಂದೆನಪವಿದ್ರುಮಕಂತುಕದಂತೆ ನೇತ್ರಕೇಶರ ಧವಳತ್ವದಿಂಮಿಸುಪವ್ರಾಕ್ತಿಕಕಂತುಂಕದಂತೆತೋರೆಕಂಡಿರಿದತಿಮು ಗ್ಧವಿಸ್ಮಯದಕಂತುಕಮಂ ದುಬಿಸುಟ್ಟಳುರ್ವಿಯೊಳ್।

ವ॥ ಅಂತವಳವಿನೋದಮಂ ಭೂಪಾಳಂನೋಡುತ್ತಂನಡೆಯೆನಪೆ ಯೆಮುಂದೊಂದುತಾಣವೆಳ್ಕಂಚುಕಿ ತನ್ನಾದಪಚ್ಚೆಯುಚುಂಬುಲಿ ವೆಯೊಳ್

ಕಂ॥ ವರರುದ್ರವೀಣೆಯನುವಿದ। ಸರಮಂಡಲಕೂರ್ಮವೀಣೆವಲ್ಲಕಿ ಯೆಂಬಾ॥ ಪಿರಿದಪ್ಪವೀಣೆಗಳನಾ। ದರದಿಂಬಾಜಿಸುತಮಿರ್ದುದಬಲಾ ನಿಚಯಂ ೧೬೫

ವ॥ ಅಂತದಂಕೇಳ್ದುಹಾರೈಸುತ್ತಂ ಭೂಪಾಳಂನಡೆಯೆನಡೆಯೆಮುಂ ದೊಂದುತಾಣದೊಳ್

ಚಂ॥ ತರಳತವೆತ್ತಲೋಚನಚಕೋರಿಚಕೋರಿಯನಂಗರಾತಿಬಂ ಧುರಪದನಾಬ್ಜವಬ್ಜವನಿತಂಜಡವೃತ್ತಿಯೊಳಿರ್ಪುದೀಕ್ಷಿಸ॥ ಲ್ಸುರುಚಿರ ಕುಂತಲಾಳಿಝುಳಿಸಾಂಕಿದ ವಳ್ಳುರನೋವನೀವುವೆಂ। ದುರುತರದಂ ಗಶೋಭೆನಗುತ್ತಿಪ್ಪುದುಜಗಮಾಲತ್ತಿವಂಗಿಯ। ೧೬೬

## ಇಪ್ಪತ್ತೈದನೆಯ ಆಶ್ವಾಸಂ
## ಸೇದಿರಾಜಯ್ಯಗಳ ಕಥನಂ

ಧುರಧೀರಸೇದಿ ರಾಜಂ। ಗುರುತರ ಗಣಪದಮನಿತ್ತು ಸುರತತಿಪೊಗಳುತ್ತಿರೆ ಮೆರೆದೊಪ್ಪುವ ಪುಲಿಗೆರೆ। ಪುರಪತಿಸೋಮೇಶ ನೊಲ್ದು ಪಾಲಿಕೆನಮ್ಮಂ॥ ೧

ಉ॥ ಚೋಳಧರಿತ್ರಿಯೊಳ್ವರತಟಾಕಚಯಂಗಳಿನಿಕ್ಷುವಾಟಿಯಿಂ ಶಾಲಿಯ ಕೆಯ್ಗಳಿಂ ವರವನಾವಳಿಯಿಂ ಘನದುರ್ಗದಿಂದೆಸಾ। ಧಾಳಿಗಳಿಂ ಶಿವೈಕ್ಯ ಭವನಂಗಳಿನುನ್ನತಿ ವೆತ್ತನೇಕಲಿಂ; ಗಾಲಯದೊಳಿಯಿಂದೆ ತಿರಿಪೋವಲುಮೆಂಬಪುರಂ ವಿರಾಜಿಕುಂ॥ ೨

ಕಂ॥ ಅದು ಶಿವಭಕ್ತರ ನೆಲೆವನೆ। ಯದುಧನಿಕರಜನ್ಮಭೂಮಿಯದು ಸುಖಪಡೆಯುಂ। ತದು ಸಕಲ ಧರ್ಮದಾಗರ ಮದು ಕೀರ್ತಿಯ ಸದನವೆನಿಸುತೆಸೆವುತ್ತಿರ್ಕುಂ॥ ೩

ಆತೆರದಿನೆಸೆವ ಪುರದೊಳ್। ಭೂತೇಶ ಪದಾಬ್ಜ ಭಕ್ತಿಯುಕ್ತಂ ಲೋಕ। ಖ್ಯಾತಂ ಚೋಳಾನ್ವಯಜಂ। ಜಾತಂ ಕಲಿಸೇದಿರಾಜ ನೆಂಬಂ ಮೆರೆದಂ॥

ಮ॥ ಅರಿಷಡ್ವರ್ಗಂಗಳೆಂದೆಂಬುರುಮೃಗತತಿಯೊಳ್ಬೇಂಟೆಯಾಡುತ್ತಮಿತ್ತಾ। ಸುರಧಿಂ ಮಾಯಾತ್ಮಜಂ ಚೇಂದ್ರಿಯಮೆನಿಪಹಿಪ ಕ್ಷ್ಮಾಪದೊಳ್ಕಾಡುತುಂಬಂ। ಧುರಭಕ್ತಿಜ್ಞಾನಮಂ ಪಾಲಿಸುತಮುಭವಕಾರುಣ್ಯದಿಂ ದೊಪ್ಪುವಂ ಭಾ। ಸ್ಕರತೇಜಂ ಪುಣ್ಯಬೀಜಂ ಬುಧಜನದಿ ವಿಜೋವಿಜನಾ ಸೇದಿರಾಜಂ॥ ೫

ಕಂ॥ ಹರಭಕ್ತ ಸೇದಿರಾಜನೊ। ಳಿಡುವ ತಾರ್ನತ್ಯುದಾರರೆನಿಪ ಮಾರ್ತಾಂಡಂ। ತರಿನೃಪರ ಮರ್ತ್ಯರೆನಿಪ। ನಿರ್ರುತಂ ಪರಿಕಿಪೊಡೆ ಧರೆಯೊಳಿಂತಿದು ಚಿತ್ರಂ॥ ೬

ಹರಭಕ್ತ ಬರ್ಪರೆನಲಿವಂ। ಹರಭಕ್ತರ ಮೂರ್ತಿಗಂಡೊಡುಬ್ಬರ್ವ ಸೊಲವಿಂ। ಹರಭಕ್ತತನ್ನ ಸುಪೆಂ। ದಿರುತಿರ್ಪಂ ಸೇದಿರಾಜನುರ್ಜಿತತೇಜಂ॥ ೭

ಬೇಳ್ಪುದ ನೀವಂ ಭಕ್ತ। ಗೆರ್ಪಿಂ ಶಿವಲಿಂವಂತರೆಂದುದನನಿಶಂ ಮಾಪ್ಪಿಂ ಶಂಕರ ಭಕ್ತನ ನಲ್ಪಬಳಂ ಸೇದಿರಾಜನುರ್ವೀತಳದೊಳ್॥ ೮

ವ॥ ಅಂತಿಪರಿಯೊಳುದಿತ ಪ್ರತಾಪದಿಂದಿರುತಿರ್ಪ ಸೇದಿರಾಜನೊ

ಳ್ದಾಯಾದನೆಂಬ ಮನ್ನೆಯನೊರ್ವಂ ಪರದೇಶದೊಳಿರ್ದನಂದತಿ ಬಳಕ ರಿತ.ರಗ ರಥಪದಾತಿವೆರಸುತಿರು ಪೋವಲೊರ್ಗೆಬಂದು ಕಾದಲ್ಕಿಂದಿ ದಿರಾಂತಿರ್ಪಾಗಳ್॥

ಚಂ॥ ಧರೆಬಿದರಲ್ಕೆ ತನ್ನಚತುರಂಗ ಬಲಂಬೆರಸುಗ್ರಕೋಪದಿಂ॥ಪ ರಿದು ಪಳಂಚೆ ವೈರಿಬಳಮಂ ನೆರೆತಳ್ತಿರಿದಿಕ್ಕಿ ತದ್ರಣೋ॥ ರ್ವರೆಯೊ ಳೆ ಸೇದಿರಾಜ ನರೆಯಟ್ಟೆ ಬರುತ್ತಿರೆ ಲಜ್ಜೆಗೆಟ್ಟುಭೀ ಕರತೆಯೊಳೋಡಿ ದಂ ಮಿಗೆಪರಾಜಯದಿಂ ಪಗೆಯುಪ್ಪ ಮನ್ನೆಯಂ॥

ವ॥ ಅಂತು ಸಂಗ್ರಾಮದೊಳ್ದಾಯಾದ್ಯನೆನಿಪ ಮನ್ನೆಯನನೋಡಿಸಿ ನಿಜ ಭುಜಪೊಳ್ವಿಜಯಲಕ್ಷ್ಮಿಯನಾಂತು ನಿಜಪುರಮಂ ಪೊಕ್ಕುಸುಖ ದಿಂದಿರುತ್ತೊಂದು ದಿವಸಂಪ್ರಭಾತಸಮಯದೊಳ್॥

ಕಂ॥ ಲಲನೆಯರಿಕ್ಕುವ ಚಾಮರ॥ಕುಲದೊಳ್ಜಯ ಜೀಯಯೆಂಬಪವ ದಳರುಲಿಯಲ್॥ ಕಲಿಸೇದಿರಾಜನಾಗಳ್॥ ನಲವಿಂದಂಬಂದುಪೊಕ್ಕನಾ ಸ್ಥಾಯಿಕೆಯೊಳ್॥ ೧೦

ವ॥ ಅಂತುಪೊಕ್ಕು ಸಕಳಸಾಮಂತ ದಂಡನಾಥ ಮಂಡಳಿಕ ಸಚಿ ವೇಂದ್ರಮುಖಪರಿಜನಂಬೆರಸುಸೇದಿರಾಜನೊಡ್ಡೋಲಗಂಗೊಟ್ಟುಸು ಳ್ದಿರ್ದಿರಲಿತ್ತಲ್॥

ಕಂ॥ ಮುನ್ನಂಬನ್ನದಿನೋಡಿದ॥ ಮನ್ನೆಯನುರೆಕಾಯ್ದು ನಾಲ್ಕೆ ಪಾಯದಿಜಯದೊಳ್ಪಂನೆರೆಕಾಣಪೆ ಚಿಂತಿಸಿ॥ ದಂನರಕದಪರಮಸೀ ಮೆಯಂತನ್ನಮನದೊಳ್॥ ೧೧

ವ॥ ಅಂತಾ ಪಗೆಯುಪ್ಪ ದಾಯಾದ ಮನ್ನೆಯಂ ತನ್ನಮನದೊಳ್ ಕ ಷ್ಟಬುದ್ಧಿಯನೊಂದಂ ಚಿಂತಿಸಿ ಸೇದಿರಾಜನಂತವಿಸಿ ಕಳಿಕ ನಾನನೇಕ ರಾಜ್ಯದೊಳ್ಸುಖದಿಂ ಬಾಳ್ವೆನೆಸುತ್ತಂ ಕುಹಕ ತಪಸ್ವಿ ವೇಷಮಂ ತಾ ಳ್ದಾಗಳ್

ಕಂ॥ ಭರದಿಂಮಾಟಜಜೆಡೆಯಂ. ಧರಿಯಿಸಿಪೋಸೆಕಾಪಿ ಭಸಿತ ರುದ್ರಾ ಕ್ಷಗಳಂ॥ಪಿರಿದುಂತನುವಿನೊಳಳವಡಿ, ಸಿರ್ದಂತಾಕುಟಿಲತಪಸಿ ವೇಷ ಮನಾಂತಂ.॥ ೧೨

ವೃತ್ತಂ

ಹೀನಾತ್ಮಕುಟಿಲ ಮನಪಂ, ನೆಲೆಗೊಳಿಪಂ ತೊಂದುಸುರಗಿಯಂ ಕ

ಪೞಗೆಯೊಳ್! ಸಲೆಬೈತು ಕೌಂಕುಳೊಳ್ತಳೆ, ದೋಲಪಿಂ ಮುನಿವೇಷ
ದಿಂದಮಿಂತಿರುತಿರ್ದಂ॥ ೧೪

ನೆರಮೊರೆದು ಧರೆಗೆ ಪೊರಗಣ| ಬರಿವೇಷಂತೀವ್ರ ತರದಿಕರ್ಪುಂ ಮನ
ಮಂ| ಮರೆಗೊಂಡಿರ್ದುದು ಮೈಯೊಳ್| ತರಿಸಂದೆಸೆದತ್ತು ಗೋಮು
ಖಪ್ರಾಪ್ತತ್ವಂ॥ ೧೫

ಇಂತು ಶಿವಭಕ್ತವೇಷಮು| ನಾಂತುಂಬಳಂ ಸೇದಿರಾಜನೂರಂ ಪೊಕ್ಕು|
ಸ್ವಂತ ಶಿವಾಗಮ ಘೋಷದ| ಸಂತೆ ಸೆವೃತ್ತೋತುವೀಧಿಯೊಳ್ ಬರು
ತಿರ್ದಂ|

ವ| ಅಂತುತತ್ಪಳಂತಾಪಸವೇಷಮುಂ ಬೀರುತ್ತಂ ರಾಜಮಂದಿರಮಂ
ಪೊಕ್ಕು॥

ಕಂ| ಮಂಜೆಡೆ ಘಸಿತಂಕಾಕಾಂ| ಬರರುದ್ರಾಕ್ಷೆಯನು ಪಿಡಿದುಕವಳಿ
ಗೆತನಗೆ| ಪ್ಪಿರೆ ಮುನಿವೇಷದಿಕುಟಿಲಂ| ಬರೆ ಕಂಡಂ ಸೇದಿರಾಜನೆೞ್
ದಿದಿರಿದ್ದಂ॥ ೧೬

ವ| ಅಂತಿದಿರೆದ್ದು ಪೋಗಿಸೇದಿರಾಜಂಕುಟಿಲವೇಷದಮುನಿಪಂಗೆಸಾ
ಷ್ಟಾಂಗದಂಡಪ್ರಣತನಾಗಿ ಕೈಗೊಟ್ಟುತಂದು ರತ್ನಪೀಠದೊಳ್ಕುಳ್ಳಿರಿ
ಸಿ ಭಯಭಕ್ತಿಯಿಂ ಚರಣಪ್ರಕ್ಷಾಳನೆಂಗೆಯ್ದು ಪಾದತೀರ್ಥಮಂ ಮ
ಸ್ತಕದೊಳ್ತಳೆದಾನಂದದಿಂ ಮನವೆಯ್ದೆ ರೋಮಾಂಚ ಕಂಚುಕಿತ ಗಾ
ತ್ರನಾಗಿ ದೇವನಿಮ್ಮಡಿಗಳ ದರುಶನದಿಂ ಕೃತಾರ್ಥನಾದೆನೆನುತ್ತಂ ಕೈ
ಗಳಂಮುಗಿದು ನಿಮ್ಮಡಿಗಳೆಮ್ಮ ನೀಕ್ಷಿಸಲ್ಬಂದ ಕಜ್ಜಮಾವುದೆಂದು ಕ
ರುಣಿಪುದೆಂದುಬಿನ್ನೈಸಲ್ಕಾಗಳ್॥

ಕಂ| ಎಮಗೊಳ್ಳಿತಪ್ಪಶೈವಾ| ಗಮಸಾರಂದೊರಕಿತದಕೆ ನೀಂಪಾತ್ರ
ಪ್ರಸನ್ನ| ತ್ತಮನೋಭಾವದಿತಂದೆಂ| ಪ್ರಮೋದದಿಂದರಸ ಕೇಳ್ಬಲ್ಲ
ಡಮೋಕ್ಷಂ| ೧೭

ಪರಮ ರಹಸ್ಯಮಿದಂಸಾ| ದರದಿಂಪೇಕಾಂತದಲ್ಲಿ ಪೇಳ್ವೆಂ ನಿನಗಾ| ನರ
ನಾಕವಳಿಗೆಯಿದೆಕೇಳ್| ಧರೆಯೊಳ್ಮಂಕಂಡು ಕೇಳ್ದಿಲ್ಲೆನುತಿರ್ದಂ

ವ| ಎಂದುಪೇಳ್ದ ಕುಟಿಲನಪ್ಪ ಮುನಿಪನವಾಕ್ಯಮಂ ಸದ್ಭಕ್ತಿಯಿಂ ಕೈ
ಕೊಂಡು ಸೇದಿರಾಜಂ ಪರಮಾನಂದದಿಂ ನಿಜಾಸ್ಥಾನ ದೊಳಿರುತಿರ್ಪ
ನ್ನೆಗಂ॥

ಕಂ॥ ಕುಹಕಮುನಿ ಪೇಳ್ದನತಿದು। ಸ್ಪೃಹಕಮನೆಂದು ನೋ
ಡಲಾರದೆಮನದೊಳ್। ಬಹುವಿಧದಿಂದಂ ಚಿಂತಿಸು। ತ ಹಿಮಕರಂ ಪ
ಶ್ಚಿಮಾದ್ರಿಯಂಮರೆಗೊಂಡಂ। ೧೯

ವ॥ ಅಂತಿ ನನಸ್ತಮಯಮಾದ ಸಮಯದೊಳ್ಚೇದಿರಾಜಂ ನಿಜಾಸ್ಥಾ
ನಮಂಟಪದಿಂದೆದ್ದು ಸಭಾಜನಮಂ ಕಳುಪಿತಚ್ಛಿವರಹಸ್ಯಮಂ ಕೇಳ್ವೆ
ನೆಂಬುತ್ಕಂಠಿಕೆಯಿಂದಾ ಮುನಿಗೆಕ್ಕೈಗೊಟ್ಟು ತಂದರಮನೆಯೊಳ್ಪರಿಮ
ಳೋದಕದಿಂಸಮ್ಮಾರ್ಜನಮಂಮಾಡಿಸಿ ದೇವಪೂಜಾನಿಶಾಂತದೊಳ್ಪ
ಗಿಸಿ ಭದ್ರಪೀಠಮನಿತ್ತು ಕುಳ್ಳಿರಿಸಲ್ಕಾಗಳ್॥

ಚಂ॥ ಕುಟಿಲ ತಪಸ್ವಿ ಸದ್ಭಸಿತಮಂ ನಿಜದೇಹದೊಳಾಂತು ಕೈಗ
ಳಂ ತಟಪಟೆನುತ್ತೆ ನಾಲ್ಕುದೆಸೆಗಂ ಚಿರಳಂ ಮಿಡಿದುರ್ಬಿ ನಲ್ಮೆಯಿಂ
ತುಟಿಮಿಡುಕಲ್ಕರಂ ಒರಿಜಪಂಗಳನೆಯ್ದೆಣಿಸುತ್ತೆ ಮಾಪನಾ, ತಟದೊ
ಳೊರಬ್ಬಿ ವಿರ್ಪಬಕನಂತಿರೆ ಜಾನಿಸುತಿರ್ದನಕ್ಕರಿಂ॥ ೨೦

ವ॥ ಅಂತು ಶಂಕರಾಗಮ ದಾಡಂಬರಮಂ ತೋರಿ ನೋಡುವನು
ಳ್ಳೊಡೆಮಾಡುವೆದೇಕಾರಮನೇಬನಾಡುಗಾದೆಯಂಡಿಟಂಮಾಡಿತಚ್ಚೇ
ದಿರಾಜಂ ನೋಡಲ್ಕಾಕುಟಿಲ ಮುನಿಪೊರಪಚ್ಚದ ಭಕ್ತಿಯಿಂ ಶಿವಲಿಂ
ಗಾರ್ಚನೆಯಂಮಾಡಿಕುಳ್ಳಿರ್ದಾಗಳ್॥

ಕಂ॥ ಏನಗಂಪೇಳ್ದಪೆನೆಂಬಾ। ಘನಶೈವಾಗಮ ರಹಸ್ಯಮಂದೇವನೆ
ಟ್ಟನೆಕೃಪೆಮಾಡಿ ಕೃತಾರ್ಥನನೆನಿಪುದುನೀವೆಂದು ಸೇದಿರಾಜಂನುಡಿದಂ

ವ॥ ಅಂತು ಸೇದಿರಾಜಂ ನುಡಿಯಲಕ್ಕ ಸಮರಾತ್ರಿಯಾದಪೊತ್ತನ
ಡುತತ್ಕುಟಿಲಮುನಿಯಿಂತೆಂದಂ।

ಕಂ॥ ಇದನಾಲಿಸಿ ಕೇಳ್ವೊಡೆ ನಿಜ। ಸದತಿಯುರಂ ಚವರಡಪದ
ವರಂ ಬೀಳ್ಕೊ। ಟ್ಟದಿತಸುಖೋದಯದಿಂಕೇ। ಳ್ವುದು ಶಂಕರಭಕ್ತ
ನೀನೆನಲ್ಕೈಕೊಂಡಂ। ೨೧

ವ॥ ಅಂತತತ್ಕುಟಿಲ ಮುನಿಯಮಾತಂ ಕೈಕೊಂಡು ಸೇದಿರಾಜಂ ತ
ನ್ನರಸಿ ವೇದವತಿಯ ದಪರಿಜನಮಂ ಕಳುಪಿಕಡಪಿಕ್ಕಿ ಕೈಗಳಂಮುಗಿದಾಸ
ದದಿಂಕುಳ್ಳಿರ್ದಾಗಳ್

ಕಂ॥ ಪರಮ ರಹಸ್ಯಮನೆಲಿಸೇದಿರಾಜಕೇಳ್ವರ್ಥಿಯುಳ್ಳೊಡೆ। ದೀಕ್ಷಿತನ
ಳಿಗೆಗಾ। ಧರದಿಂ ವೈಯಿಕ್ಕೆ ನೆಟ್ಟ। ತ್ರಿ ರಹಸ್ಯ ಕೇಳ್ವೆನೆತ್ತಾಳ್ದು ವೈಯಿಕ್ಕೆ

ರ್ದಂ.।

ವ॥ ಅಂತುಭಯಭಕ್ತಿಯಿಂ ಮೈಯಿಕ್ಕಿರ್ದ ಸೇದಿರಾಜನಂ ದುಷ್ಟ
ಚರಿಯಪ್ಪ ಕುಟಿಲಮುನಿಪಂನೋಡಿ

ಮ॥ ಪರರುದ್ರಾಕ್ಷಿಗಳಂಗದಲ್ಲಿಪಿರಿದುಂ ಪೇಸಲ್ಕೆಪೂಸಿರ್ದಬಂ,ಧುರ
ಭಸ್ಮಂಪಳಿಯಲ್ಕೆತಾಳ್ದಜಟೆಗಳ್ನೊಂದೇಳಿಸಲ್ಸರ್ವವೋ ಸರಿಸಲ್ಧರ್ಪ
ವಡಂಗಲುದ್ಘಕರುಣಂ ಪಿಂಪಿಂಪೆಟ್ಟಲಾಪಾತಕಂ,ಧರದಿಂದಂಶಿವಭಕ್ತ
ನಂತನಿಪೆ ನೆಂಬುದ್ಯೋಗಮಂತಾಳ್ದದಂ॥ ೬೪

ಕಂ॥ ಚಲಿಮಿಸದೆಬಲ್ಪಡಂಗದೆ॥ ಕಲಿತನದಿಂದಿರ್ಪಸೇದಿರಾಜನನಪ್ಪು
ಬೆನ್ನಲಗಂಕಂಡಾಪಾತಕ.ಖಳನಿರಿದ ಪನಿರಿದುಬೆಚ್ಚಿ ಬೆಬ್ಬಳನಾದಂ॥
೬೫॥

ವ॥ ಅಂತುಬೆಚ್ಚಿ ಬೆಬ್ಬಳನಪ್ಪಕುಟಿಲಮುನಿಯುಂ ಮೆಲ್ಲನೆತಲೆಯೆತ್ತಿಸೇ
ದಿರಾಜಂ ನೋಡಿಸದ್ವಿನಯದಿಂದೆಂತೆಂದಂ॥

ಚಂ॥ ಹರವರಮೂರ್ತಿ ನಿಮ್ಮಕರಪಲ್ಲವವೀಯಲಗೊತ್ತಿನೊಂದು
ದೇ। ಕರಮೆಮುಖಾಂಬುಜಂಕೆರಗುತಿರ್ದಪುದಂಜದಿರೈಯಮತ್ಕಳೇ
ವರಮಿದುನಿಮ್ಮಪಾದಯುಗಳಕ್ಕೆ ಸಮರ್ಪಿಸಿ ತೇನನಾದೊಡಂ,ಭರ
ದೊಳಿಮೊಳ್ಪುದೆಂದುನುಡಿದಂಸಯದಿಂಶಿವಭಕ್ತಪುಂಗವಂ॥ ೬೬

ವ॥ ಎಂದುಸೇದಿರಾಜಂನುಡಿವುತ್ತಾಗಳ್॥

ಕಂ॥ ಕಲಿಸೇದಿರಾಜನಾಸಂ,ಚಳಚಿತ್ತದಮುನಿಯುಕೈಯ ಲಿತ್ತಿಸಿ
ಕೊಂಡಂ।ದೊಲವಿಂದಂಕುಳ್ಳಿರ್ದಂ ।ದಲಗಿಗೆಶರಣೆಂದೆನುತ್ತೆ ನೋಡು
ತ್ತಿರ್ದಂ॥ ೬೭॥

ವ॥ಅಂತುನೋಡಿಕೋಡಡೆ ಕೊಂಕದೆಹಾರೈಸುತ್ತಾಗಳಿಂತೆಂದಂ॥

ಕಂ॥ ಅಹಿಪತಿಗೆಪೊರಕದೀಶಿವ। ರಹಸ್ಯವಿದನೆನ್ನಹೃದಯದೊಳೆ
ಬೃತಮಹಾ। ಮಹಿಮನೆಜಯನಿನ್ನಿಂದಂ।ಒಹುಳಕೃತಾರ್ಥತೆಯ ನಾಂ
ತನೆಂದೆನುತಿರ್ದಂ॥ ೬೮॥

ವ॥ ಎಂದುಮತ್ತಮಾಧೈರ್ಯ ನಿಧಿಯಪ್ಪಸೇದಿರಾಜನಾದೇವ ಪೂಜಾನಿ
ಕಾಂತದಿಂದೆರ್ದುನಂದುರದಲಗಂ ಮುಸುಂಕಿಕೊಂಡು ನಡೆತಂದೋ
ಲಗಶಾಲೆಗೆಬಂದು ಸಿಹ್ಮಪೀಠದೊಳ್ತತ್ಕುಟಿಲಮುನಿ ಸಮೇತಂಕುಳ್ಳಿ
ರ್ದು ಬೆಳಗಪ್ಪಾಗಳ ಡಿಯುರರಂ ಕಳುಪಿಸಬೆವೇಂದ ನಂ ಬರಿಸಿಸಾತಿಕ

ಕಭಕ್ತಿಯಿಂದಿಂತೆಂದಂ||
ಕಂ|| ಇವರಿಂದಮಖಿಳಸಿದ್ಧಿಗ|ಳಿವರಿಂದಂನಾಲ್ಕುವಿಧದಮುಕ್ತಿಗಳೆನಗಾ| ದುವುನಿಜಮಿಲ್ಲಿಂದಧಿಕೋತ್ಸವಮುಂನಾಂಪಡೆದೆನಿವರ್ಗದಾರ್ಪೋರೆಫರೆಯೊಳ್|| ೨೯||
ವ|| ಎಂದುಕುಟಿಲಮುನಿಯುಮಹಿಮೆಯುಂಕೊಂಡಾಡಿಸಚಿವೇಂದ್ರಂಗಸೇದಿರಾಜನಿಂತೆಂದಂ||
ಕಂ|| ಪಿರಿದುಂಪೊಂಗಳನಿತ್ತು ದರದಿಂಸುಯಿಧಾನದಿಂದ ವಿೀಮುನಿಯಂಚೆ| ಚ್ಚರನಿರದೆ ಕಳುಪಿಒಪ್ಪುದು|ಭರದಿನೆನಲ್ಕಳುಪಿಬಂದನಾಸಚಿವೇಂದ್ರಂ|| ೩೦||
ವ||ಅಂತಾಸಚಿವೇಂದ್ರನಾ ಕುಟಿಲಮುನಿಯಂಕಳುಪಿಬಂದೆನೆಂದು ಸೇದಿರಾಜಮಹೇಶ್ವರಂಗೆಬಿನ್ನಪಂಗೆಯ್ದು ಕುಳ್ಳಿರ್ದಾಗಳ್||
ಕಂ|| ಇನನುದಯಸಮಯದೊಳ್ನೃಪ|ನನುನಯದಿಂದಾತ್ಮಸತಿಯುರಂಸಜ್ಜನರಂ|ಘನತರಮಾಹೇಶ್ವರರಂ|ತನುಪುಳಕಿತನಾಗುತೆಯ್ದೆ ಬರಿಸಿದನಾಗಳ್|| ೩೧||
ವ|| ಅಂತಾಪ್ತಜನಮುಂಬರಿಸಿ ಕುಳ್ಳಿರಿಸಿಸೇದಿರಾಜಂತನಗಾದ ಶೈವಾಗಮಸಿದ್ಧಿಯಂತೋರ್ಪುತ್ಸುಕತೆಯಿಂದಿಂತೆಂದಾಗಳ್||
ಕಂ|| ಘನಧೈರ್ಯದಗವಸಣಿಗೆಯು|ನನುನಯದಿಂತೆಗೆವತೆರದಿನೀಕ್ಷಿಸರೆರ್ದೆರ್ದುಳ್ಳನೆಮಸುಕಂತೆರದಂತಾ| ಜನಪತಿಯುರದಲಗುವೆರಸುಕೆರಮೆಸೆದಿರ್ದಂ|| ೩೨||
ಅದನೀಕ್ಷಿಸಿಸರ್ವಜನಂ|ಬೆದರಿಮನಂಮರುಗುತ ಕಟಿದೇನಾಯ್ತೆನಲ್ಕದೆಸೇದಿರಾಜನನಾಂ|ದದಿನಲಗಂನೋಡಿಮುಚ್ಚಿಪಿಗ್ಗುತ್ತಿರ್ದಂ ೩೩
ವ|ಅಂತುಸೇದಿರಾಜಂಮರುಗುವ ಜನಕ್ಕಭಯಮುಂ ಕೊಟ್ಟೊರ್ಬಶಿವಭಕ್ತನಂಕರೆದು ನಲವಿಂದೆನ್ನಹೃದಯಮು ದಲಗಂಕೀಳ್ವುದೆಂದು ಪೇಳ್ಲ್ಕಾಗಳ್||
ಚಂ|| ಪುಳಕಚಯಂಗಳುಣ್ಮೆ ಕರಣಂಗಳನೊಂದೆಡೆಗೆಯ್ದೆ ತಂದುಕ|ಣ್ಗಳನರೆಮುಚ್ಚಿಜೋಲ್ದ ತೆರದಿಂಬರೆದಂದದಿಬೆಚ್ಚವೊಳ್ಕೆಯಿಂ| ಸುಲಲಿತಚಿತ್ತದೊಳ್ಶಿವನನಾಂತನುರಾಗದಿ ಜಾನಿಸುತ್ತಮಾ| ಒಳಯುತ ೩೪||
ಸೇದಿರಾಜನಿಸಿದಲಗಿಳ್ದುಚ್ಚರಿಪಟ್ಟನೊಲ್ಪನಿಂ

ವ॥ ಅಂತುಸೇದಿರಾಜಂಪರಮಕಾಷ್ಠೆಯಿನಿರ್ಪಾಗಳ್।

ಚಂ॥ ಜನಮದುನೋಡಲಾರದೆಕರಂಗಳಿನಕ್ಷಿಗಳಂಮುಸುಂಕೆ ಭೂ
ವಿನುತಶಿವಪ್ರತಿಷ್ಠೆಯಶಲಾಕೆಯನುರ್ಚಿವಮಾಳ್ಕೆಯಿಂದಮಾ। ಘನಬ
ಳಸೇದಿರಾಜಪುರದಸ್ತ್ರಮದಂಶಿವಭಕ್ತನೊತ್ತಿಭೋಂ। ಜನತೆಗೆಯಲ್ಕೆ
ಗಾಯದೊಳಗಿಂಪೊರಮಟ್ಟನುಮೇಶನಲ್ಕರಿಂ॥ ೩೫॥

ವ॥ ಅಂತುಹೃದಯಸ್ಥನಾಗಿರ್ದ ಶಿವಂಪೊರಮಟ್ಟು ಪ್ರತ್ಯಕ್ಷನಾಗಿ
ಮುಂದೆನಿಂದಿರ್ದು॥

ಮಣಿಗಣನಿಕರವೃತ್ತಂ॥ ಸುರನದಿಶಶಿಕಳೆಹುತವಹನುರುಗೇ। ಶ್ವರ
ನುಶುತರವೃಷನನುಪಮಭಸಿತ। ಸ್ಫುರದಗವರಸುತೆ ತನಗೊಲನಿನೊ
ಳೊಪ್ಪಿರೆಪುಹರನತಿಕರುಣದಿನೆಸೆದಂ॥ ೩೬।

ವ॥ ಅಂತುಕರುಣದಿಂಪ್ರತ್ಯಕ್ಷನಾದಶಿವನದಿವ್ಯಮೂರ್ತಿಯಂಕಂಡು
ಪರಮಾನಂದಪುನೆಯ್ದಿ।ಭಯಭಕ್ತಿಯಿಂ ಪದಕಮಲದೊಳ್ಮೈಗೆಡೆದುಪ
ರವಶದಿಂಸೇದಿರಾಜನಿರುತಿರ್ಪಾಗಳ್॥

ಕಂ॥ ಕರುಣದಿಮೆಯ್ದಡವಿಮಹೇ। ಶ್ವರನಂತಾಸೇದಿರಾಜನಂತೆಗೆದ
ಪ್ಪು।ತ್ತುರುತರಹರುಷದಿನಂದೀ।ಶ್ವರಮುಖ್ಯಪ್ರಮಥವಿತತಿ ಗಂದಿಂತೆಂ
ದಂ॥ ೩೭।

ಎನ್ನಯವೇಷಕ್ಕೊಲವಿಂ। ತನ್ನಯತನುವಂಕಠಾರಕಿತ್ತೀತೆರದಿಂ। ದಂ
ನಂಬಿದವರದಾರೆನು।ತಂನಂದಿಗೆಸೇದಿರಾಜನೊಳ್ಪಂಪೇಳ್ದಂ। ೩೮॥

ಅಂತುಸೇದಿರಾಜನಭಕ್ತಿಯನಿಷ್ಠೆಯಂಸ ದಾಶಿವಂಪೊಗಳುತ್ತಿರ್ಪಾಗಳ್

ಕಂ॥ ದೇವಪಟಹಂಗಳುಲಿಯಲ್ ಪೂವಿನಮಳೆ ಕರೆಯಲಮರವುಷ್ಪಕ
ಮಾಗಾ।ಶೀವರನಾಜ್ಞೆಯೊಳಾಗಳ್। ಭೂವಳಯಕ್ಕಿರದೆಬಂದುದತಿಸಂ
ಭ್ರಮದಿಂ॥ ೩೯।

ವ॥ ಅಂತುಬಂದದಿವ್ಯಪುಷ್ಪಕದೊಳಾನಂದದಿಂಸೇದಿರಾಜ ಮಹೇಶ್ವ
ರನಂಸತ್ಕರುಣದಿಂಕುಳ್ಳಿರಿಸಿನಿಯಮಿಸಲ್ಕಾಗಳ್।

ತರಳವೃತ್ತಂ॥ ದಿವಿಜದುಂದುಭಿನಿಸ್ವನಂ ನೆರೆಪೊಣ್ಮಲಂಬರಮಾರ್ಗ
ದಂ।ನವಮಣಿಪ್ರಭೆಯಂಮುಸುಂಕುತೆತೀವರಂಜಿಸುವದ್ರಿಜಾ। ಧವನಿಯ
ಪುದಿಸೇದಿರಾಜಸಮೇತದಿವ್ಯವಿಮಾನಮು। ತ್ಸವದಿಪೆರ್ಮೆಯನಾಂತುಬಂ
ದುದುತಾರಭೂಧರಕರ್ಥಿಯಿಂ ೪೦

ವ|| ಅಂತುಬಂದಸೇದಿರಾಜಂ ಬಿರಸಿಂದುಧರಂಪರ ಮೊನೆಂದ್ಲಂ ದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ಜನವಿನುತಸೇದಿರಾಜಂ|ಗನುಪಮಗಣಪದವನಿತ್ತು ಮೆರದಧಿಕಕೃಪಾ |ವನನಿಧಿಚಂದ್ರಕಳಾಧರ,ನನುನಯದಿಂ ದೆಸೆವೃತಿರ್ದನಾ ಸ್ಥಾಯಿಕೆಯೊಳ್|| ೪೧|

ಗದ್ಯ|| ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪ ಲಿಗೆರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕಕವಿಚಕ್ರವರ್ತಿ ವಿರಚಿತಮಪ್ಪತ್ರಿಷಷ್ಠಿಪುರಾತನರ ಚಾರಿತ್ರದೊಳ್ಸೇದಿರಾಜ ಮಾಹೇಶ್ವರರ ಕಥಾವೃತ್ತಾಂತಂ ಪಂಚವಿಂಶತ್ಯಾಶ್ವಾಸಂ||

ಶ್ರೀ

## ಇಪ್ಪತ್ತಾರನೆಯಆಶ್ವಾಸಂ

### ಕಳಿಚೆಂಗುಪೆರುಮಾಳಿಯಾರಕಥನಂ

ನೆಯದಿ ಕಳಿಚೆಂಗ ಪೆರುಮಾ| ಳಿಯೆನಿಪ್ಪಂಗ ಚಳಪದಮನಿತ್ತುರ ಮೆರೆವ| ದ್ವಯಮೂರ್ತಿ ಭಕ್ತಜನದು| ರ್ನಯ ಹರಸೋಮೇಶ ನೊಲ್ದು ಪಾಲಿಕೆನಮ್ಮಂ|| ೧

ವ| ಮತ್ತಮಾತನಪೂರ್ವಜನ್ಮಮಂ ಪೇಳ್ವೆನದೆಂತೆಂದೊಡೆ||

ಕಂ| ಪದೆದಾ ಕಾವೇರಿಯ ತೀರದೊಳೊಪ್ಪಂ ಬೆತ್ತುದೊಂದು ಜಂಬೂಕು ಜಮುಂ| ಉದರ ಪೊರೆಯಲ್ಲಿಲಿಂಗಂ| ಸದಮಳತೆಯನಾಂತು ನಾಡೆಕಣ್ಗೊಳಿಸಿರ್ದಂ|| ೨

ವ| ಅಂತಾ ಲಿಂಗದಸಮೀಪದೊಳ್ಪೂರ್ವ ಜನ್ಮದ, ಶೈವನೊರ್ವಂ ದುಷ್ಕರ್ಮಫಲದಿಂ ಪುಟ್ಟಿಕಲದಿಯಾಗಿತದ್ವಾಸನೆಯಿಂಬಿಡದೆಭಕ್ತಿಯಿಂದಿರುತ್ತಿರ್ಪುದಂತುಮಲ್ಲದೆಯುಂ|

ಕಂ| ಪರಿದೆಸೆವಾಲಿಂಗಕ್ಕಿನ| ಕಿರಣಂಗಳತ್ತಾಂಗದಂತೆ ನಿಜಗುಣದಿಂ

ನೆ। ಯ್ದು ಕುತರದಿಂ ಮರೆಯಂಮಾ। ಡಿರುತಿರ್ಪುದು ಕಲದಿಜಂಬು ಭೂರುಹದಡೆಯೊಳ್॥ ೩

ವ॥ ಅಂತಾ ಲಿಂಗದಗ್ರ ಭಾಗಮಂ ನಿಜಗುಣದಿಂಗೆಯ್ದು ಮರೆಯಂ ಮಾಡಿ ಭಕ್ತಿಯಿಂ ಕಲಂದಿನೋಡಿ ಪರಿತೋಷಮನೆಯ್ದುತ್ತೀಪರಿಯಿಂ ಪಲವು ವತ್ಸರಂ ತಲ್ಲಿಂಗಮಂ ಪರಿಚರ್ಯ್ಯಂಗೆಯ್ವುತ್ತಿರ್ಪಿನ ಮೊಂದು ದಿವಸಮಾವಿಪಿನದೊಳ್॥

ಕಂ। ವನಗಜವೊಂದೆಯ್ತಂದಾ। ಘನಜಂಬೂಕುಜದೊಳಿರ್ಪ ಲಿಂಗಮುದಂಡ ನುನೆಯುದಿಂದ ರ್ಚನೆಗೆ। ಯ್ದೆನೆನುತ್ತಂ ಚಿತ್ತದಲ್ಲಿ ಬಗೆಯಂ ತಾಳ್ದಂ॥ ೪

ವ॥ ಅಂತುಬಗೆಯಂತಾಳ್ದು

ಕಂ। ಘನಭಕ್ತಿಮಿಗಲ್ಕಾಗಳ್। ವನಗಜಮಾ ಕಲದಿ ನೆಯ್ದು ಮಾಡಿದಮೊರೆಯಂ। ಮುನಿಸಿಂ ಪಱಿದು ಬಿಸುಟ್ಟು। ರ್ಚನೆಯಂಲಿಂಗಕ್ಕೆಮಾಡಿಪೋಯ್ತುಂತಾಗಳ್। ೫

ವ॥ ಅಂತೀಪರಿ ಯೆಱಿದ್ದನದಿನದೊಳ್ಬೊಂದು ಕಾಡಾನೆತಜ್ಜಂಬೂವೃಕ್ಷದಡಿಯೊಳಿರ್ಪ ಲಿಂಗದಮೇಲೆ ಕಲದಿನೆಯ್ದು ಮಾಡಿದಮರೆಯಂಕುಂಡಾಗ್ರದಿಂ ಪಱಿದು ಬೀಸರಿಸುತ್ತಿರಲ್ಕಂತಾಗಳ್॥

ಕಂ। ವರಹರ ಲಿಂಗದ ಮೇಲಾ। ದರದಿಂ ಮರೆಮಾಡಿದುಘ ನಿದಾಗಳ್ಮರಿವು। ತ್ತಿಕು ತಿರ್ಪುದೆಂದು ಕಾಯ್ದಾ। ಕರಿವರನಂ ಕೊಲ್ವ ಬಗೆಯೊಳಿರ್ದುದುಕಲದಿ॥ ೬

ವ॥ ಅಂತು ಕಲದಿ ಕೊಲ್ವಬಗೆಯಿಂದಿರ್ಪಾಗಳ್।

ಚಂ। ಪಿರಿದತಿ ಭಕ್ತಿಯಿಂದೆ ಪರಿತಂದು ಶಿವಾರ್ಚನೆಗೆಯ್ದುಮುನ್ನಿನಂತಿರೆ ಘನಜಂಬು ವೃಕ್ಷದಡಿಯೊಳ್ನಿಲಿಕಾಯ್ದು ತಲಿರ್ದು॥ ಮೂಗಿನೊಳ್। ತುರಿಹದಿ ಪೊಕ್ಕು ಮಸ್ತಕಕಡರ್ದತಿ ಬಾಧಿಸಿ ತತ್ಕರೀಂದ್ರನಂ। ಹರಿಯಿಸಿ ಲಿಂಗಮುಂನೆನೆವುತಾಗಳೆತಾ ನಸುವಿಟ್ಟು ದಕ್ಷಿಣಂ॥ ೭

ಕಂ। ಮಸಗಿ ಕಲಂದಿ ಕರೀಂದ್ರನ, ನಸುಗೊಂಡು ಬಳಿಕ್ಕೆಚೋಳಕುಲದೊಳೊಗೆದುಸಂ। ತಸದಿ ಕಳಿಚೆಂಗಪೆರು ಮಾ। ಳಿಸಮೊಪ್ಪುಯಿಂದಮಿರ್ದನಾ ಕರಿಯುಂರೊಳ್॥ ೮

ವ|| ಮತ್ತಮಾ ಕಲಂದಿಯಿಂ ಮೃತಮಾದ ಗಜಂ ಯಕ್ಷರಾಕ್ಷಸಕು
ಲದೊಳ್ಪುಟ್ಟಿ ಕೇತ್ರಪಾಲನೆಯಾದಂ||

ಕಂ| [illegible]ಪೊಳ್ ಕುಲದೊಳೊಗೆದು ರು| ತರ ಮುದದಿಂ ಶೈಶವಾ
ತಿರೇಕ ಮುದಂ ನೊಂ| ತಿರದೆ ನವಯುವ್ವನದೊಳಂ| ತಿರುತಿರ್ದಂ ಪ್ರೀ
ತಿಯಿಂದೆ ಕಳಿಚಂಗಾಖ್ಯಂ|| ೯

ವ|| ಸುರತ ಕ್ರೀಡೆಗಳೊಳ್ಸಂಗೀತ ರಚನಾಲಾಪಂಗಳೊಳ್ನವ್ಯ ಕಾ
ವ್ಯರಸಪ್ರೌಢಿಗಳೊಳ್ಮಹಾ ಕವಿನಿಕಾಯ ಪ್ರೇಮದೊಳಾ| ರ್ಯಂ ನೀತಿ
ರಹಸ್ಯಾಸ್ಪದದೊಳ್ ಶಿವೈಕ್ಯ ಜನಸತ್ಸಂಗಂಗಳೊಳ್ಸಂತತಂ| ಪರಮಾ
ನಂದ ಮನಾಂತು ಪೊತ್ತುಗಳೆವಂ ಸಾಹಿತ್ಯ ರತ್ನಾಕರಂ|| ೧೦

ವ|| ಅಂತೀ ಪರಿಯೊಳ್ಪೊತ್ತುಗಳೆವುತ್ತೊಂದು ದಿವಸಂ||

ಕಂ| ಸರಭಸದಿಂ ಕಳಿಚಂಗಂ| ತುರಗಮನೇರ್ದೇರಿ ತನ್ನ ಪರಿಜನ
ಸಹಿತಂ| ಸುರದಿಂಗಹನಕ್ಕಂ ಪೋ| ಗಿರದಾಗಳ್ಬೇಂಟೆಯಾಡಿದಂ ಕ
ಡುಪಿಂದಂ|| ೧೧

ವ|| ಅಂತು ಬೇಂಟೆಯಾಡಿ ಪಲ ಮೃಗಂಗಳಂ ಕೆಡಪಿ ನಲಿದಾಡುತ್ತಂ
ನಿಜ ಕಿಂಕರರ್ಬೆರಸು ಬರುತಿರ್ಪಾಗಳ್ಸಮಂಪೊಂದೆಡೆಯೊಳ್||

ಕಂ| ಪಿರಿದುಂ ಭಯಂಕರಕ್ಕಾ| ಗರಮೆನಿಸುತ್ತೊಂದು ಘನಬಿಲದ್ವಾ
ರ ಮಿರಲ್ದುರಿಸಿಪ ತನಯಂ ಕಂಡ| ಚ್ಚರಿವಿಗೆ ತತ್ಕಿಂಕರಾಸ್ಯಮಂ
ನಿಟ್ಟಿಸಿದಂ|| ೧೨

ವ|| ಅಂತು ನಿಟ್ಟಿಸಿ ನಿಜಕಿಂಕರರಂ ಪುಗಿಪುಗಿಯೆ ನಲ್ಕಪರಂಜಿ ಪಿ
ಮ್ಮೆಟ್ಟಲಾಗಳಾತ್ತ ನತ್ಯಾಸುರದಿಂ ವೀರೋದ್ರೇಕಮಂ ತಾಳ್ದು ತತ್ಕು
ಮಾರಂ ಬಿಲದ್ವಾರಮಂ ಪೊಕ್ಕು ನಡೆವಾಗಳ್||

ಕಂ| ಪಿರಿಯ ಬಿಲದ್ವಾರದೊಳಿಡಿ| ದಿರುತಿರ್ಪ ತಮಾಂಧಮಂ ತದೀ
ಯ ವಿಭೂಷೋ| ತ್ಕರ ರತ್ನಕಾಂತಿಯಿಂ ದೊ| ತ್ತರಿಸುತ್ತಂ ನಡೆ
ದನಾ ನೃಪಾಳ ಕುಮಾರಂ||

ವ|| ಅಂತು ತದೀಯ ಭೂಷಣದ ಬೆಳಗಿನೊಳೊಂದು ಯೋಜನಮಂ
ಬಂದಿರ್ದ ಸೆಯುಂ ನೋಳ್ಪಗಳೊತ್ತಟ್ಟನೆ ಕಟ್ಟಿದಿರೊಳ್||

ಚಂ| ನೆಗಪಿದ ಪುರ್ಬುಕೆಕ್ಕರಿ ಪದಿಟ್ಟಗಳೆತ್ತಿದ ಮಾಸೆನೀಲ್ದನಾ| ಲ
ಗೆಬಿಡುಮಂಡೆಡಕೆ ಗಿವಿ ಕೊಂಕಿದ ದಾಡೆ ಕರಂ ನಿಮಿರ್ದ ಮೆಯ್ಯ|| ಮ

ಗತ್ತರ್ದಿರ್ದ ಬಾಯ್ಪಿಡಿದ ಲೋಹಪದಂಡ ಮಗುಳ್ದಿರ್ದಗಲ್ಕೆ ಜ | ಟ್ಟಿಗನಿರ್ದಿರ್ದಂತು ಘೂಂಕೆಸುತಿರಲ್ಕೆ ವಿಷಸೂನು ಕೆರಳ್ದು ನೋಡಿದಂ॥೧೪

ವ॥ ಅಂತು ಕೆರಳ್ದು ನೋಡುವ ರಾಜಪುತ್ರಂಗೆ ಮತ್ತಮಾ ಜಟ್ಟಿಗನಿಂತೆಂದಂ॥

ಕಂ॥ ಪರಿಕಿಪೊಡೆನ್ನಯ ಬಿಲಮಂ। ತರಳತೆಯಿಂ ಪೊಕ್ಕುದಕ್ಕೆ ಜಪನಾನನಗ। ಹ್ವರಮಂ ಪುಗಿಸುವೆನೆಂದಾ! ನಿರದೀಗಳೆನುತ್ತೆ ನುಡಿದ ನಾವೇತಾಳಂ॥ ೧೫

ವ॥ ಎಂದು ಕೋಪಾಟೋಪದಿಂ ನುಡಿದಜಟ್ಟಿಗಂಗೆ ತತ್ಕುಮಾರಂ ಕಡುಮುಳಿದಿಂತೆಂದಂ॥

ಕಂ॥ ಧರೆಯರಿಯೆ ನಿನ್ನಜವನಂ। ಹರಿಯಿಸಿದಾ ಹರನಬಂಟನಾನದರಿಂಸಂ। ಹರಿಸುವೆನೀಗಳ್ನಿನ್ನಂ। ಪಿರಿದನುವಾಗೆಂದು ನುಡಿದನಾ ನೃಪತನಯಂ॥ ೧೬

ವ॥ ಎಂದಾ ನೃಪತನಯಂ ನುಡಿಯಲ್ಕಾಜಟ್ಟಿಗಂ ಕಡುಕಾಯ್ದು ಕಿಡಿಕಿಡಿಯೋಗಿ ಮತ್ತಮೆನಗಂ ಪೋಪುದೆಂದು ಭುಜಾಸ್ಫಾಲನಂಗೆಯ್ದು ಮಲ್ಲಯುದ್ಧಸನ್ನದ್ಧನಾಗಿ ನಿಂದಿರ್ದನಂಕಂಡು॥

ಕಂ॥ ಅಘಾಟಂಬದಂನುಱಸುಂಲ। ಗ್ಗದ ನಾಲ್ಕುಸ್ಥಾನಮೆಯ್ದುಡೊಕ್ಕರದನುಹೋ! ಗ್ರದ ಮೂವತ್ತೆರಡುಬಿನ್ನಣ। ದೊದವಂಪಲತೆರದಘಾತಮುಂನೆರೆಮೆರೆದರ್॥ ೧೭

ತಿರುಣಿ ಕುಳಾಡೆಬಾಹುಗೆಣೆ ಸಂದ ಸುಬಾ ಹುಡೆಮುಂಡೆ ಮುಷ್ಟಿಕಂ। ಮುರಿಮುಂಘುಡಂಜವತ್ಸವಡಿಪಾಸಗೆ ಕಕ್ಕಪಡುಮ್ಮ ಹುಗ್ಗಮಂ। ತರಲಗಡಂ ಸಸಿಕ್ಕುಮುಹ ಪೋವುಡ ಚೆಲ್ಲಪಟ್ಟೆ ಪಟ್ಟಕ। ತ್ತುರೆಗಳೆನಿಪ್ಪಜಟ್ಟಿಗರಬಿನ್ನಣ ಮೊಪ್ಪೆಕಪಂಗಿ ಕಾದಿದರ್॥ ೧೮

ಕಂ॥ ಪಿರಿದು ದಣಿವಟ್ಟೆಪಟ್ಟೆಸಕರವಳಯು ಭುಜಂಗ ಬಂಧತಳಕೊಪ್ಪರ ಡೊ। ಕ್ಕರತೋರ ಹತ್ತಮೆಂಬಿವ। ನಿರುತರದಿಂ ತೋರಿಬಿಡದೆ ಕಾದುತ್ತಿರ್ದರ್ ೧೯

ಮಿಗೆಸೊಳೋವರ್ ಕಳೆವ ಬಿಸುಕುವ, ಬಿಗಿದೊತ್ತುವಲಗ್ಗೆಯುಬ್ಬಸಕ್ಕೆ ಕ್ಕಿಖಿಲಂ।ಸುಗಿಡತಿ ಭುಜುದಿಂದಂ। ಜಟ್ಟಿಗ ನಾಕುಪರಂಗೆ ಸೋಲ್ತುಬೆದರಿದನಾಗಳ್॥ ೨೦

ವ॥ ಅಂತು ಬೆದರಿ ಬೆಗಡುಗೊಂಡು ಮಲ್ಲಯುದ್ಧ ಸಾಹಸಕ್ಕೆ ಮೆಚ್ಚಿ ಪಿರಿದಚ್ಚ ಶಿವಪುತ್ರಂ ತನ್ನ ಜಟ್ಟಿಗತನಮಂ ಬಿಸುಟಾಗಳ್॥

ಕಂ॥ ಸುರುಚಿರಮಣಿಮುಕುಟಂ ಬಂ॥ ಧುರಮೌಕ್ತಿಕ ಹಾರವೆಸವ ಕಟಿಸೂತ್ರಂ ಭಾ॥ ಸುರತರಕಂಕಣ ಮೆಸೆಯು॥ ತ್ತಿರಲಂದಮನೊಲ್ದು ಯಕ್ಷರೂಪಿನೊಳಿರ್ದಂ॥ ೨೧

ವ॥ ಅಂತಾ ಯಕ್ಷಂ ನಿಜರೂಪಿನಿಂ ನಿಂದಿರ್ದು ಕಳಚೆಂಗಪೆರುಮಾಳಿಯ ಭುಜಬಲಾಟೋಪಕ್ಕೆ ಮೆಚ್ಚಿ ತಳ್ಕೈಸಿ॥

ಕಂ॥ ಎಲೆನೃಪನಂದನ ಕೇಳೀ ಬಿಲದೊಳ್ಪೊಕ್ಕಿಳಿದರಿಲ್ಲ ಮುನ್ನಾಂನಿನ್ನೊಳ್। ಬಲಯುತನಾವನೆನುತ್ತಂ ದೊಲವಿಂದಂ ಯಕ್ಷನಿಂದೆ ಪೊಗಳುತ್ತಿರ್ದಂ॥ ೨೨

ವ॥ ಅಂತು ಪೊಗಳ್ದು ಕೊಂಡಾಡುತ್ತಂ ಪರಮಪ್ರೀತಿಯಿಂದಿಂತೆಂದಂ

ಕಂ॥ ಜನಪತಿಸುತನಿನ್ನಯ ಮು॥ ನ್ನಿನ ಜನ್ಮಮದಾವುದೆಂಬುದಂ ನೀಂಬಲ್ಲೈ। ಯೆನುತಾಯಕ್ಷಂ ನುಡಿಯ॥ ಲ್ಮನದೊಳ್ಜಾತಿಸ್ಮರತ್ವಮುಣ್ಮಿದುದಾಗಳ್। ೨೩

ವ॥ ಅಂತು ಜಾತಿಸ್ಮರತ್ವಂ ಪುಟ್ಟಿ ತತ್ಕಳಚೆಂಗಪೆರುಮಾಳಿತವಕದಿಂದಂತಾಂ ಬಿಲದ್ವಾರಮಂ ಪೊರಮಟ್ಟು ಮುನ್ನಂತಾಂ ಪುಟ್ಟಿದಗಹನಮಿದೆಂದರಿದು॥

ಕಂ॥ ಪಿರಿದುಂ ಭಕ್ತ್ಯುದ್ರೇಕದಿ॥ ನಿರುತೊಲವಿಂ ತನ್ನ ಪರಿಜನವನುರೆತೊರೆದಾ॥ ಸ॒ರದಿಂ ತದ್ವಿಪಿನದ ಸುಭು॥ ಚಿರಲಿಂಗದ ಪೊರೆಗೆ ಬಂದನಾ ಕಳಚೆಂಗಂ॥ ೨೪

ವ॥ ಅಂತು ಬಂದು॥

ಕಂ॥ ಕರುತಾಯುಂ ಕಂಡಂದದಿ॥ ನರಕೆಯೊಳತಿ ಭಕ್ತಿಯಿಂದೆ ಶರಣಂ ಮನದೊಳ್॥ ಮೆರೆವಾ ಲಿಂಗಮ ನೀಕ್ಷಿಸಿ ನೆರೆನೇಹದಿ ಮೇಲೆ ಬಿದ್ದು ಪೊರಳುತ್ತಿರ್ದಂ ೨೫

ಎಲೆ ದಿವ್ಯಲಿಂಗ ನಿನ್ನಂ॥ ಪಲವುದಿನಂ ಕಾಣದಿರ್ದೆ ನಿನ್ನೇನೆಂದುಂ ಚರಣಮ ನಾಂ ಬಿಡನೆನುತುಂ॥ ಗಳಿತಾನಂದಾಶ್ರು ವೆರಸು ನೋಡುತ್ತಿರ್ದಂ

ವ॥ ಅಂತು ನೋಡಿ ಕಳಚೆಂಗಪೆರುಮಾಳೆ ಮತ್ತಮಾ ಶಿವಲಿಂಗಕ್ಕೆ

ಪೂಜೆಯಂ ಮಾಳ್ಪೆನೆಂಬುತ್ಕಂಠೆಯಿಂದೆರ್ದು ಸುವರ್ಣ ಪಂಕಜಮುಂಬಿ ಲ್ವಪತ್ರಯಂತಿರಿದಾಗಳ್

ಚಂ ವರಜಲದಿಂದೆ ಮಜ್ಜನಮನಾರ್ತದಿ ಮಾಡಿಸುವರ್ಣ ಪಂಕಜೋ। ತ್ಕರದ ವಿನೂತ್ನಬಿಲ್ವದಳ ಸಂಚಯಮೊಪ್ಪುವ ಪೂಜೆಗಟ್ಟ ಭಕ್ತಿ ರಸಮೆಸೂಸುವಾರ್ತಿ ನಯನಾಂಬು ಗಳುಣ್ಮಿರೆ ಲಿಂಗ ಧೊಳ್ಮನಂ ಬೆರಸಿ ಪೊರಳ್ದು ತಚ್ಚರಣ ನಾಡುತ ಪಾಡುತ ಮಿರ್ದ ನರ್ಥಿಯಿಂ

ವ ಅಂತತುಳಭಕ್ತಿಯೊಳುರ್ಬಿಕೊರ್ಬಿ ಪೊಗಳಲ್ಕನಂದಂದಾಗಳ್

ಕಂ ಲಕ್ಷಾಲಕ್ಷ ತ್ರಿಭುವನ ರಕ್ಷಾಕರೂಪಾಕ್ಷ ಯಕ್ಷ ಸಖದಕ್ಷಮಖಪ್ರಕ್ಷ ಯಭಗಾಕ್ಷ ಹರನಿರ ಪೇಕ್ಷಮಹಾಮೋಕ್ಷ ನಿರುತಜಯನಿಟಲಾಕ್ಷಾ ೨೮

ಕಂ ಎಂದುನುತಿಗೆಯ್ದು ಪರಮಾ।ನಂದಂಮಿಗೆ ಪೆರೆದು ನೋಡು ತ್ತಿರ್ಪಾಭಕ್ತಂ ।ಗಂದು ಮಹಾಕೃಪೆಯಿಂಬಾ।ಲೇಂದುಧರಂಮೆಚ್ಚಿ ರೂಪುದೋರಿದನಾಗಳ್ ೨೯

ಶಿರದಿ ನದಿಫಣೆಯು ಚಂದ್ರಂ। ಕೊರಳವಿಷಂ ಕಿವಿಯಫಣಿಗಳುರಿಗಣ್ಣೊಸಲೊಳ್। ಧರಿಯಿಸಿದ ಭಸಿತ ಮೆಸೆಯ।ಲ್ವರದಶ ಭುಜಪಂಚ ಮುಖದಿನೊಪ್ಪಿದನೀಶಂ ೩೦

ವ ಅಂತೊಪ್ಪುವ ಮಂಗಳಮಯನಪ್ಪ ಶಿವನದಿವ್ಯ ಮೂರ್ತಿಯ ಕಂಡು ಹರುಷಪುಳುಕಿತನಾಗಿ ತಚ್ಚರಣ ಕಮಲದೊಳ್ಷಟ್ಚರಣನಂತೆರಗಿಬಿಡದೆ ಮರುಳಾಗಿರ್ಪ ಕಳಚಂಗಮಾಹೇಶ್ವರನಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿಸಿ ಮೆಯ್ದಡವುತ್ತಂ ನಂದಿನಾಥಂಗಿಂತೆಂದಂ

ಕಂ ಕಲದಿ ತನದಲ್ಲಿ ಕಳಿಯಂ ಸಲೆಕೊಂದು ಮನುಷ್ಯನಾಗಿ ಜನಿಯಿಸಿ ನೆನದಿಂ। ದೊಲವಿರದೇಳ್ತಂದೆನ್ನಂ।ಸಲಿದರ್ಚನೆಗೆಯ್ದು ವಂಗದಾರ್ದೊರೆ ಧರೆಯೊಳ್॥ ೩೧

ವ। ಎಂದು ಪೊದಳ್ದು ಕೊಂಡಾಡಿ ಕಡುನೇಹದ ಭಕ್ತಿಯನುಳ್ಳ ಕಳಚಂಗಪೆರುಮಾಳೆ ಮಾಹೇಶ್ವರನಂ ಗಿರಿಜಾನಾಥಂ ಸತ್ಕಾರುಣ್ಯದಿಂ ತಾಂ ಬರಿಸಿದ ದಿವ್ಯಪುಷ್ಪಕದೊಳ್ಕುಳ್ಳಿರಿಸಿ ನಿಯಮಿಸಲ್ಕಾಗಳ್।

ಕಂ। ಆಭಕ್ತಂಬೆರಸು ಮಹಾ। ಶೋಭೆಯನಾಂತಲರಮಳೆಯೊಳಮರವಿಮಾನಂ। ವೈಭವದಿಂದ್ರಜತಮ। ಹೀಭೃನ್ನಿಳಯಕ್ಕೆ ಬಂದುದಾ

ನಕರವಡಿಂ||

ವ|| ಅಂತು ಬಂದಕಳಚಂಗ ಪೆರುಮಾಳೆಮಾಹೇಶ್ವರಾನ್ವಿತಂ ಪ್ರಮಥಗಣಂ ಬೆರಸು ಗೌರೀವರನೋಡ್ಡೋಲಗಂಗೊಟ್ಟಿರ್ಪಲ್ಲಿ ದ್ವಾರಗಳ್

ಕಂ| ನೆಗಳ್ದ ಕಳಚಂಗ ಪೆರುಮಾ| ಳಗೆಪೆರಿದುಂ ಮೆಚ್ಚಿ ಪರಮಗಣ
ಪದಮುಂ ಕೊ| ಟ್ಟಗಜಾನಯನಜ ಕೋರೀ| ಮೃಗಧರ ನೆನಿಪಭಸ
ನೆಸೆದನಾಸ್ಥಾಯಿಕೆಯೊಳ್| ೪೪

ಗದ್ಯ ಇದು ಸಕಲಸುರ ನಿಕರ ಮಕುಟ ಮಾಣಿಕ್ಯ ಮಾಲಾ ಮರೀಚಿ ಪುಂಜರಂಜಿತ ಪಾದಪಂಕಜ ಶ್ರೀಮತ್ಪಾಲಿಗೆರಿಯಪುರಾಧಿಪ ಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ಕಳ ಚಂಗ ಪೆರುಮಾಳೆಮಾಹೇಶ್ವರಕಥಾವೃತ್ತಾಂತಂ

ಷಡ್ವಿಂಶತ್ಯಾಶ್ವಾಸಂ

—ಶ್ರೀ—

## ಇಪ್ಪತ್ತೇೞನೆಯ ಆಶ್ವಾಸಂ

### ಕಣ್ಣಪ್ಪದೇವರಕಥಾವೃತ್ತಾಂತಂ

ಶ್ರೀಮದಿಗಣಪದಮಂಸು|ತ್ರಾಮಂಪೊಗೞಲ್ಕೆ ಕಣ್ಣಪಂಗಿತ್ತ ತುೞಿಲೋ|
ದ್ದಾಮನೆನಿಪ್ಪಂ ಸತತಕೃ| ಪಾಮಯಸೋಮೇಶನೊಲ್ದು ಪಾಲಿಕೆನ
ಮ್ಮಂ॥ ೧॥

ಮ॥ ಪಿರಿದುಂ ಪೆರ್ಮೆಯೊಳಿರ್ಪ ಚೋಳಧರೆಯೊಳ್ ಕಾಲತ್ತಿಯೆಂದೆಂಬ
ಭೂ|ಧರಮುಂಟಂತದರೊಳ್ ಪನಂಬುಜಭವಾದ್ಯರ್ಬಣ್ಣಿಸಲ್ಕೆಯ್ದದ|ಚ್ಚ
ರಿವಟ್ಟಿರ್ಪುದೆನಲ್ಕೆ ಮರ್ತ್ಯರೞವೇ ಕೈಲಾಸಮಂ ಬಿಟ್ಟು|ಸಾದರದಿಂದಂ ನೆ
ಲಸಿರ್ಪನೀಶ್ವರನೆನಲ್ಕೇನೆಂಬೆನಾಶ್ಚರ್ಯಮಂ ೨॥

ಮ॥ಸ್ರ॥ ವರಸಂಧ್ಯಾರಾಗವಿಸ್ತಾರಿತ ಘನತರ ಮಾಣಿಕ್ಯ ಮಾಲಾಮರೀ
ಚಿಸ್ಫುರಿತಂ ಸಾಟೋಪಕಂಠೀರವ ಪದನಖನಿರ್ಭಿನ್ನ ಗಂಡೇಭಮು
ಕ್ತೋ| ತ್ಕರರಮ್ಯಂ ಚಾರುಮುತ್ತೀವ್ರಖಳನಿನದ ವಿಭ್ರಾಜಿತಂ ಕಿನ್ನರೀ
ಗೀತರವಪ್ರೋದ್ಭಾಸಿತಂ ತಾನೆನಿಸುತೆ ತಿರಿಕಾಲತ್ತಿ ನಾಮಾಚಲೇಂದ್ರಂ
ಚಂ॥ ಗಿರಿಶಿಖರಾಗ್ರದುನ್ನತಿಯನೇವೊಗೞ್ವೆಂ ಸುರಗಂಗೆಯೊಳ್ಪನೇ| ಚ್ಚ
ರವರಬಾಲಕರ್ಮರ್ಕರವೀನ ಕುಳೀರಕುಳಕ್ಕೆ ಜಾಲಮಂ| ಪರವು
ಲೋಹಿತೋದ್ಭವಮೃಗಶೀರ್ಷ ಸುಕೃತಿಗಳ್ಗೆ ಪಾಯ್ವವಿ| ಸ್ತರತರ
ಮಪ್ಪಲೀಲೆ ಪಿರಿದುಣ್ಮುತೆ ಮಿರ್ದುದು ತನ್ನ ಭೋಂತದೊಳ್॥ ೪॥

ಕಂ ಗಿರಿಶಿಖರದಗ್ರದೊಳ್ಬ| ಲ್ಕಿರಾತಿರ್ಪುಡು ತತಿಯ ನಲರ್ಗಳೆಂಬಾಭ್ರ
ಮಯಿಂ| ಪರಿದೇರಿ ತಿರಿವ ಬಗೆಯಿಂ ಚರಿಯಿಪುದಂ ತಲ್ಲನಿಪಿನ ಚರಬಾಲಿ
ಕೆಯರ್॥ ೫॥

ಶಶಿಯಂ ಕನ್ನಡಿಯೆಂದೀ| ಕ್ಷಿಸುವಲ್ಲಿರ್ಪರಳೆ ಗಂಡು ಮುಗ್ಧ ಪುಳಿಂದೀಪ್ರಕ
ರಂ ಪಿಡಿಯಲ್ಬಗೆದಂ| ದೆಸೆದಿರ್ಪರೆನಲ್ಕೆ ಶೈಲಮೇನುನ್ನತಿಯೋ॥ ೬

ಗಿರಿಕೂಟದ ಮೇಲಾಡುವ| ಹರಿಣಿಗಳಂ ಕಂಡು ನೆರೆಯಲೆಂದಿೞಿಯಲ್ಕಾ| ತ
ರಿಸುವ ತನ್ನೆರಳೆಯನಾ| ಸುರದಿಂ ವಟದೊಳ್ತೊಡರ್ಚುವಂ ರಜನಿಕ
ರಂ॥ ೭॥

ಹರಿರಥಹಯತತಿ ಮೇಲಂ| ಪರಿಭಾವಿಸಿ ಸೋಲ್ತು ತಮ್ಮನೊಲವಿಂ ನೆರೆ
ಯಲ್| ಸರಳಿಸಲರುಣಂ ನೆಳೆವು| ತ್ತಿರೆ ನಗುವರ್ಕಂಡು ತುರುಗವದನೆ
ಯರವರೊಳ್॥ ೮

ಪದಪಿಂವಜ್ರಶಿಲಾಪ|ಟ್ಟದಮೇಲಿರುತಿರ್ಪ ಸಿದ್ಧವಿದ್ಯಾಧರರಂ| ಬುದ್ಧ ಜನೆಯುಂಮುಳಿಯೆಂ|ಬುದನೇದುಂಕೇಳ್ವೆಕಾಣ್ಬರಿಲ್ಲಾನಗದೊಳ್ || ಜಿನಪದದಿನಿಹಾರಿಸುತ್ತಂ| ಘನರತ್ನಗುಹೋದರಂಗಳೆಡೆಗಂಡಾಗಳ್|ಮ ನವೊಸೆಮುಕಾಮುಕೇಳಿಯ| ನನುಭವಿಪಖೇಚರಮಿಥುನವಾ ಗಿರಿವ ರನೊಳ್|| ೧೧

ವರವೇಣುಗಳೊಂದೊಂದಂ| ಪಿರಿದೊರಸಲ್ಕೊಗೆದರಂಧ್ರವಾಶುಗಸಿಂ ಘೂಂಕರಿಸಲ್ತಾರವಣಿಯರಾ| ಗಿರಿಪಾಡುತ್ತಿರ್ಪರಲ್ಲಿಕಿನ್ನರಮಿಥುನಂ|| ಕರಿವರಬೃಂಹಿತಮುಂಮೃಗ ಪರಿವೃತಘನಗರ್ಜಿತಂಮಹಾಭೀಕರಸೂ ಕರಘುಳ್ಕೃತಮುರಗದವರ| ತರಕ್ಷುಫೂತ್ಕೃತಮುಮಲ್ಲದಿಲ್ಲ ತನ್ನಗತಟ ದೊಳ್|| ೧೨

ಕುತ್ಕೀಲನಿಕರಸದೃಶಗ|ಜೋತ್ಕರಮುಂಶಬರರಸ್ತ್ರಹತಿಯಿಂದಂಧ ತ್ಯುತ್ಕಟಕೋಪದಿಸೀಳ್ವರ ಸತ್ಕೋಮಳಮೌಕ್ತಿಕಾಭಿಲಾಷೆಗ ಳಿಂದಂ|| ೧೩

ತೊಳಗುವನೂತ್ನರತ್ನಚಯಹಂಸದಿಹಂಸದಿಪುಷ್ಕರಾಕರಂ| ಗಳತಟ ದೊತ್ತುಗೊಂಡಿಡಿದಬಾಣದಿಬಾಣದಿನಿರ್ಜರಾಂಶುಪಿಂ,ಬೆಳೆದಸುರಾಗ ಮಂಪಡೆದಗೋಜವಿಗೋಜದಿ ನಾಗಳುಂಸಕೋ| ಮಳತೆಯನಾಂತು ಕಂಗೊಳಿಸುವರ್ಕದಿನರ್ಕದಿನೊಪ್ಪಿತಾವನಂ|| ೧೪

ಸುರಸಭೆಯುಂತೆವಜ್ರಿಲಸಿತಂಧರನಂತುರುಬಾಣಸಂಭೃತಂ| ಶರನಿಧಿ ಯಂತೆವಿದ್ರುಮಲತಾಮಿಳಿತಂರವಿಬಿಂಬದಂತೆಭೀಕರಹರಿಶೋಭಿತಂಸ ರಸಿಯಂತನಿಶಂವರಗೋಕುಳಾಶ್ರಿತಂ| ಪಿರಿದಜಪಕ್ತ್ರದಂತೆಘನಸಾ ಮಜಪಾನ್ವಿತಮೊಯ್ತುಕಾನನಂ|| ೧೫

ಮ|| ಅರಿಟಾಳಂಕಡವತ್ತಿನೆಲ್ಲಿತರಿತೇಗಂಹಿಪ್ಪೆಕಪ್ಪೇಶಿವಂ ಗಿರಿತುಗ್ಗಿ ಬೆಳಲ್ಮಡ್ಡಿಮುತ್ತಪೆದನಾಲಂಗೋಳಿತಾಳ್ಬೀಜಪಾದರಿಜೇವಂ....ಶಿಕಕ್ಕೆ ಯಿಂಚೆಯುಲವಂಚನ್ನಂಗಿಚೆಲ್ಲಯುರಂಸಿರಿಸಂಗೆತ್ತದುಕೆಂಬಘೂಜದೊ ದವಿಂದೊಪ್ಪಿದುರ್ದಾಕಾನನಂ|| ೧೬

ಉ|| ನಾಶದಮಿತ್ರನಂತೆಕಡುಸೈನಿಕದಂತತಿಶುಷ್ಕನಂತೆರಾ| ಮೊರಿ ಯುದುರ್ಗದಂತೆಯುಗನಾಮುವನಾಂತಿಭವೈರಿಯಂತೆಶೃಂಗಾರದದೊ ಟ್ಟಿನಂತೆಕುಡಹೇಳ್ವವನಂತೆರವಾಸತೀಕ್ಷವಂ| ತಾರಿಯರಿಟ್ಟಪೊನ್ನಪೆ

ಶಂತೆವಿರಾಜಿಪುದಾವನಾಂತರಂ| ೧೭

ಕಂ ಸ್ಮರತಾಪದಸತಿಯೆಪರ್ಣಿಯ್ಯಂ|| ತಿರೆಜೇಂಟೆಯುಶಬರನ ಚನದಂ ತಿರಪಗಲಂ ಬುರುಹೋತ್ಕರದಂತಿರೆತ | ಕ್ಕರವಿಲಗದವೊತಿನಂತಿರೆಸೆದಿರೆ ವನದೊಳ್ ೧೮

ಅದಲ್ಲದೆಯುಂ

ಸೊರೆಕಡಸಿಗೆದಾಂಗುಡಿಪೂಗುರಿಶೂದಿಂಗಳ್ಸಗಂಧಿಕಬ್ಬಳನರುವಳ್ ಕುರುಟಗೆಪಾನಗ್ಗೆಳಸೀ ಕ್ವರಿಯುಮರ್ದಿನವಳ್ಳಿವಿಪಿನದೊಳ್ಪಿರಿದೆಸೆಗುಂ ೧೯

ಪುಳಿವುಲ್ಕರುಕೆ ವೊಡೆಗಂ ಜಳಕಣ್ಣಿಗೆಮೊರವಳ್ತಿಸಿಂಪಿಗೆಕುಶೆಶುಂ ಕಳನೋಲಿಹಾತೆನೆಕ್ಕಲೆ ಬೆಳೆದೊಪ್ಪುವಗಲಗುವೆಸರವುಲ್ಲೆ ದಿಸೆಕುಸಂ ಮುತ್ತ೦ ೨೦

ಚಂ| ಹರಡೆಕವುಂಜುಕೊಂಚೆಗಿಳಕೋಗಿಲೆಲಾವಗೆಕಾಗೆಪದ್ದು ತಿ ತ್ತಿರೆಪೊಣರ್ವಕ್ಕಿಬಕ್ಕುಗಿಪಗಂಬಸುಬಂ ಪೊಗೆವಕ್ಕಿಗೀಜಗಂಫುರುಳಿನವಿಲ್ಳು ಕೋರಿಯುಸಗಂಗೊರವಂಕೊಳರ್ವಕ್ಕಿಟಟ್ಟಿಭಂ ಮುರುಕುಟ ಮಂಚೆಚಾದಗೆಗಳೆಂಬಿವರಿಂದೆಸೆದತ್ತುಕಾನನಂ ೨೧

ಕಂ ಮುಗಳ್ದು ಕಿರುಗರಿಗಳಂತಾನಗಲಲ್ಜನಿಮಿಕುವುವೆಂದು ಶಂಕೆಯಿಸಿಂದ್ರಂ| ಮಿಗೆಕಾವುವೇಳ್ದನೆನೆನೆ | ಟ್ಟಗೆಮೇವಮುಗಿಲ್ಗಳಲ್ಲಿ ಕಣ್ಗೆಸೆದಿರ್ಕುಂ|| ೨೨||

ಚಂ|| ಮುಲೆಮುಸುಕೋಡನೇಕುಸಿಪೇರುಡುಮುಂಗುಲಿಖಡ್ಗಿಸೂಕರಂ| ಕರಡಿಮೊಲಂಕುರಂಗಮುವಿಚೇಳಲಿಪೂರೆಯುಬೆಕ್ಕುಘೇರವಂ| ಕರಿಕಳಭಂವೃಕಂಚಮುರಿಸ್ಯೆರಿಭವಷ್ಟಪದಂತರಕ್ಷುಕೇ|ಸರಿಮೊದಲಾದನೇಕಮೃಗಮಿರ್ಪುಪ್ರತದ್ಗಹನಾಂತರಾಳದೊಳ್|| ೨೩||

ಕಂ|| ಮುಲೆವುತ್ತೆಬರ್ಪಕಾಡ| ಕ್ಕಲನಂಪುಲಿಪೊಯ್ಯೆಮುಳಿದುಘುಡಿಘುಡಿಸುತ್ತಾ | ಪುಲಿಯುನಿರಿದೆತ್ತಿಪೋಳ್ಗೊರೆ| ದಿಳೆಯೊಳ್ಕೆಡಪಿತ್ತುಬಿಡದೆಕೋಪಳಕ್ರೋಡಂ|| ೨೪||

ವ|| ಮತ್ತಮೊಂದುತಾಣದೊಳ್||

ಚಂ|| ಬಿಡದಲರ್ಗಂಗಳಿಂದಪರಿನಿಟ್ಟೆನಿಗೋಣ್ಗಿಸಿದಾಂತುಜರ್ಬಿಬಾ| ಮ್ಮೆಡುಕಿಪಣಂಗಿಮುಂದಣಡಿಯುಂನೆಲನಂಬರಬುತ್ತೆಕೋಪದಿಂ|

ಘುಡಿಘುಡಿಸುತ್ತೆಪಲೊಸ್ತರೆದುಬಾಲವುನೆತ್ತಿಕಡಂಗಿಪ್ಪಲ್ಲಿಯುಂಕಡುಪಿ
ನೊಳೆಯ್ದಿ ಪೊಯ್ದುಕೆಡಪಿತ್ತುತರಕ್ಷುನಗೋಪಕಂಠದೊಳ್॥

ವ॥ ತ್ತಮಲ್ಲಿ

ಸರಸಿಜಸಂಭವಂಪಲವುಕಾಲದದಿಗ್ಗಜರಾಜಿಬೀಳ್ಗವೆಂ। ದುರುತರಗಾ
ತ್ರವಿತ್ತು ಘನಸತ್ವಮನಿತ್ತನೆನಲ್ಕೆ ಮನೋನುರಾಗದಿಂ। ವಿರಚಿಸಿಸ
ರ್ವ ದಿಕ್ಕುಗಳನಾಂಪ ಘಟಂದವೆನುತ್ತ ಮಲ್ಲಿಬ್ಬೆ। ತಿರಸಿದ ನೆಂಬಪ್ರೋ
ಲ್ಕರಿಕದಂಬ ಗಳೊಪ್ಪುಗುಮಾವನಾಂತದೊಳ್॥ ೨೬

ಕಂ॥ ಪರಿಣಯನನಿಕೇತನದಂ। ತುರುಗರ್ಭ ಮನಾಂತ ಸತಿಯ ಗ
ತಿಯುಂತೆಣಿಸ। ಲ್ವರ ಹೃದಯದಂತೆವನ ಮದು। ಪರಿಭಾವಿಸೆ ಭದ್ರ
ಮಂದ ಮೃಗಮಯವೆನಿಕುಂ॥ ೨೭

ವ॥ ಅಂತಳುಂಬಮಾದಗಜಕದಂಬದೊಳ್॥

ಮ॥ ಭರದಿಂದಂ ನವಸಲ್ಲಕೀಕಿಸಲಯ ವ್ರಾತಕ್ಕೆ ಕೈನೀಡುತುಂ। ಪಿ
ರಿದುಂ ಪದ್ಮಕಪೊಂದು ತಿಗ್ಮಸರಮುಂ ಭೂಜಂಗಳೊಳ್ತೀಡುತಂ। ಮೊ
ರೆವುತ್ತಂ ಮದಗಂಧಕೆಯ್ದುವಳಿಯಂ ಕರ್ಣಾಗ್ರದೊಳ್ಸೋವುತಂ। ಬ
ರುತಿರ್ದತ್ತು ಕರೇಣು ಜಾಳವಿಳಸದ್ದೋಪಂಜರಂ ಕುಂಜರಂ॥ ೨೮

ವ॥ ಅದಲ್ಲದೆ ಬೇರೊಂದೆಡೆಯೊಳ್॥

ಮ॥ ವನಜಾತಾಕರಕೊಯ್ದು ಮೊಯ್ದೆಳೆದುತಚ್ಛಂಡಾಗ್ರದೊಳ್ಕೊಂ
ಡು ಭೋಂಕನೆ। ನೀರೂಡಿಸಿತನ್ಮೃಣಾಳತತಿಯಂಸೃಕ್ವಂಗಳೊಳ್ಕೆ
ಯ್ದು ಮೆಲ್ಲನೆಬೋಳೈಸಿ ಸರೋಜಪತ್ರಮನದಂತಚ್ಛತ್ರದಂತೆತ್ತಿಕ
ರ್ಪಿನೊಳಾಗಳ್ನಸಮಿಚ್ಛೆಯಾಗಿ ಪಿಡಿಯಂ ಕೂಡಿತ್ತು ಮತ್ತೊಂ
ದಿಭಂ ೨೯

ವ॥ ಮತ್ತಮದಲ್ಲದೊಂದೆಡೆಯೊಳ್॥

ಉ॥ ಪುಷ್ಕರಕೇಳಿ ಯೊಳ್ನಲಿದು ಪುಷ್ಕರಷಂಡದ ಪುಷ್ಕರಾಳಿಯಂ ಪು
ಷ್ಕರ ದಿಂದೆಕೀಳ್ತು ನೆಗಪಲ್ನಿಜ ದಾನದಕಂಪಿಗೊಲ್ದು ತ। ತ್ಪುಷ್ಕರದಲ್ಲಿ
ಪತ್ತಿದಳಿಗಳ್ಮಸುರಲ್ಕಿವಿಯಂ ಬಿದಿರ್ಚುತಂ। ಪುಷ್ಕರಕೆತ್ತಿ ಬೀಸುತಿ
ಕಿತ್ತಿರದೊಂದುಮದಾಂಧಸಿಂಧುರಂ॥ ೩೦

ವ॥ ಮತ್ತಮದಲ್ಲದೆಯುಂ॥

ಕಂ॥ ಮಳಯಜದ ತಳಿರ್ಗೆ ನಿಲ್ಕ। ಲ್ಕೆಳೆಯಮಿಯಲ್ಲಿದು- ಮುಗಿಸೊ

ಳ್ಪುಗೆ ತಲೆಯುಂ ಕಳಚೆಂಕೊಡಹಲ್ಕಂಡಾ| ಗಳೆಪಿಡಿಕುಂಡಮನೆ ಪಿಡಿ
ದು ಬಿದಿರಿತ್ತಿಳಿಯೊಳ್|| ೭೧

ವ| ಮತ್ತೊಂದೆಡೆಯೊಳೊಂದಿಭಾರಿ ಗಿರಿಹುಗೆಯಂ ಪೊರಮಟ್ಟು||

ಮ|| ಪಿರಿದುಂ ಗರ್ಜಿಸಿ ಕೇಸರಂಗೆದರಿರಕ್ತಾಲೋಕದಿಂನೋಡಿಭೀ
ಕರವಾಲಾಗ್ರ ಮನೆತ್ತಿಲಂಘಿಸಿಪದದ್ವಂದ್ವಂ ಗಳಿಂಪೊಯ್ದು ಬಂ| ಧುರ
ಮುಕ್ತಾವಳಿ ಯಾಗಸಕ್ಕಿರದೆ ಚೆಲ್ಲಲ್ಕೋಪದಿಂ ಗಂಧಸಿಂ ಧುರಮಂಸೀ
ಳ್ದುಸಿರಾಂಬುಳಾಡಿ ನಲಿವುತ್ತಿರ್ದುತ್ತು ಕಂಠೀರವಂ|| ೭೨

ವ ಅಂತು ಸಿಪ್ಮ ಶರಭಭೇರುಂಡಾದಿ ಮೃಗವರ್ಗಂಗಳಿಂದತಿ ರಮ
ಣೀಯಮಾದ ತಿರಿಕಾಳತ್ತಿನಾಮದಚಳೇಂದ್ರದೊಳ್||

ಮ|| ಅರುಣೋಜ್ಜೃಂಭಿತ ಚರ್ಮವಸ್ತಿಸಾರಂವಿಷಾಣಂವಿನ| ತ್ಖು
ರಮೂಲಂ ಬಿತಜಾಂಗಲಂಸಮದಗರ್ಜ ತ್ಕು ಕ್ಕುರಂಮುಕ್ಷಿಕೋತ್ಕ
ರಮುಪ್ಪದ್ಧತ ಪೂತಿ ಗಂಧಸುವಿಘಾರಂರೌದ್ರವಾಯ್ತಾವಗಂ| ತರವಾರಿ
ಕ್ಷತಘೋರಪಕ್ಷಿ ಮೃಗಕಂಠಾಸೃಕ್ಕಣಂಪಕ್ಕಣಂ|| ೭೩

ಚಂ| ನಲವಿನೊಳೂಡುತಿರ್ಪರಣಮೌವರಿತಿತ್ತಿರಿಕೋಪಗಾಳಿಪ| ಬ
ಲಿಸುವ ಮುಪಿರ್ಬಾಜಿಸುವ ಬೊಂಬುಳಿರುಂಜೆನೆಗಳ್ವಸೊಕ್ಕಿನಿಂ| ಕೆಲ
ಕೆಲದಾಡಿಕುಕ್ಕಿರಿದು ಕೂಗುವ ಬೇಡರ ತಂಡಮಾರ್ಪಜಾ| ಖಿಲಗ
ಳ ಗುರ್ವಿನಿಂದೆಸೆಯೆ ಪೆಕ್ಕಣದಿಂದೆಸೆದತ್ತು ಪಕ್ಕಣಂ|| ೭೪

ವ| ಮತ್ತಮಲ್ಲಿ

ಕಂ| ಸರಳಂತಿರ್ದುವಭಿಲ್ಲಿಗೆ| ತಿರುವಿಕ್ಕುವ ಬಲೆಯು ನೊಪ್ಪಿಮಾಡುವ
ಗುಂಜಾ | ಭರಣಮನೊಯ್ಯಾರಿ ಪವನ ಚರರವ್ಯಾಪಾರ ಮೆಸೆದುದಾ
ಪಕ್ಕಣದೊಳ್|| ೭೫

ಕರಿದಂ ತದೊನಕೆಯುಂಬಂ| ಧುರಚೆಂದನ ದೊರಲೊಳಿಕ್ಕಿ ಬಿದಿರಕ್ಕಿ
ಗಳಂ|ಭರದಿಂಸುಪ್ಪಿಯುರವ ಮೊ| ಪ್ಪಿರೆ ಛಳಿಸುತಲಿರ್ದಳೊರ್ವ ಪನ
ಚರಿಯುದರೊಳ್|| ೭೬

ಚಂ| ಸದಮಲದಂತದೋಲೆಕದಪಂ ಪೊಡೆಯಲ್ಕುಚಮಂಡಲಂಕದ
ಸ್ಕದಿಸೆ ಕುರುಳ್ಗಳಾಡೆ ನಡುಬಳ್ಕೆ ನಿವಿರ್ದಡಿಯಿಟ್ಟುಸುಪ್ಪಿವೆ| ತೊ
ಪವಿದ ನುಣ್ಚರಂಗಳೆಸೆಯೆಲ್ಬಿದಿ ರಕ್ಕಿಯನಿಕ್ಕಿ ಕುಟ್ಟುತಂ| ಮುದದಿಳು
ಳಂದಿ ಪಾಡಿದಳು ದಗ್ರದಿ ಕಂಣಪ ನಂಕಮಾಲೆಯಂ|| ೭೭

ವ ಮತ್ತಮೋರ್ವಳ್‌॥

ಉ॥ ಕತ್ತರಿಸೀಲಿ ತೇಗಿನೆಲೆಯುಟ್ಟ ಪಿಣಿಲ್ನವನೇತ್ರ/ಕಂಕಣಂ॥ ಮು ತ್ತಿನಹಾರ ಮುತ್ತುಳಯುಗಂಪೊಸಪೀಲಿತರಂಗದೊತ್ತರಂ॥ಮತ್ತಗಜೇಂ ದ್ರಯಾನೆ ಮಿಗಿಲೊಪ್ಪಿ ಧನುಶ್ಶರಶಸ್ತ್ರತಂಡಮಂ॥ಬಿತ್ತರದಿಂದೆತಾಳ್ದು ಬರುತಿರ್ದಳು ಲೀಲೆಯಿನೊಂದು ತಾಣದೊಳ್‌॥ ೪೮

ವ॥ ಮತ್ತಮೊಂದೆಡೆಯೊಳ್‌॥

ಕಂ॥ ನೀರದರುಚಿಯಂ ಪೋಲ್ವಾಶ॥ ರೀರದವನೆ ಚರಿತವಾಳಿಲ ತೆವ ನೆಯೊಳ್ಪೊ॥ ಕ್ಕೋರಂತೆ ಕಣ್ಣ ಬೆಳಗಿಂ॥ ಕಾರಿರುಳಿನ ಸಿರಿಯತೆರದಿನ ಸೆವುತ್ತಿರ್ದಳ್‌॥ ೪೯

ಅಅವುಯುದೊಳ್‌

ಚಂ॥ ಪತಿರತಿಲಂ ಪಟತ್ವದಿತ ಮಾಳಲತಾ ಗೃಹದೊಳ್ಪೊಗಲ್ಕೆ ಸ॥ ನ್ನುತತರ ಮುಗ್ಧಲುಬ್ಧಕಿ ನಿಜೇಕ್ಷಣದಿಂ ಬೆಳಗಾಗಿ ತೋರೆನಾಣ್ಬು ತವಿರೆ ಕಂಡದಂತಿಳಿದು ಕಣ್ಣೆರಪಂ ತರದಿಂದೆಮುಚ್ಚೆ ತಾ॥ ನತಿತಮ ಮಾಯ್ತೆನುತ್ತಿರವೆ ಕೂಡಿದನೇನುಚಿತಪ್ರವೀಣನೋ॥

ವ॥ ಅಂತೆಸೆವ ಕಮನೀಯರೂಪಾತಿಶಯದ ಪುಳಿಂದಿಯ ಬೆಸನು ಮಹಾಬಳಮಂ ತಪುಳಿಂದ ವ್ರಾತದಿಂ ವಿಭ್ರಾಜಿಸುವ ಪಕ್ಕಣದೊಳ್‌॥

ಕಂ॥ ಪಿರಿದೆಸೆವಾ ಪಕ್ಕಣದೊಳ, ಗಿರುತಿರ್ಪಂ ಶಬರತತಿಗೆ ಪತಿಯೆನಿ ಸುತ್ತಂ॥ ಹರಭಕ್ತಿಗೆ ಕಣ್ಣಪ್ಪಂ! ಧುರಗಲಿಕಣ್ಣಪ್ಪ ನೆಂಬ ಪೆಸರಕಿರಾ ತಂ॥ ೫೧

ವ॥ ಮತ್ತಮಾಕಿರಾತಂ ವನಚರಾಧೀಶ್ವರನಾಗಿಯುಂಡಾಕರಥಿಯ ಲ್ಲು॥ ಅವಿಚಾರಿಯಾಗಿಯುಂ ಪಾವಕನಲ್ಲು॥ ನಾಗಕುಲಮರ್ದನನಾಗಿ ಯುಂ ತಾರ್ಕ್ಷ್ಯನಲ್ಲು॥ ದೋಷಾಕರನಾಗಿಯುಂ ಕುವಲಯ ಬಂಧು ವಲ್ಲು॥ ಬಲಯುತನಾಗಿಯುಂ ವಾಸುದೇವನಲ್ಲು॥ ದ್ವಿಜರಾಜವಿರೋಧಿ ಯಾಗಿಯುಂ ವಿಧುಂತುದನಲ್ಲು॥ ಅನಿಮಿಷವೈರಿಯಾಗಿಯುಂ ದೈತ್ಯನ ಲ್ಲು॥ಧರ್ಮವಿಭ್ರಾಜಿತನಾಗಿಯುಂ ಯುಧಿಷ್ಠಿರನಲ್ಲು॥ ಪ್ರತಿಭಟನ್ಸೊ ಮಭೀಮನಾಗಿಯುಂ ಕೌಂತೇಯನಲ್ಲು ಕಾಂತಾರಾಗನಿವಾಸನಾಗಿ ಯುಂ ಪುಷ್ಪಸಾಯಕನಲ್ಲುಂತುಮಲ್ಲದೆಯುಂ॥

ಕಂ॥ ನಿರುತಂ ಮೋಡಡದ ಮುರೆಯೊ ಳ್ಳಣಿ ವಿರಾಜಿಸುವತೆರದಿನ

ನಚರಕುಲದೊ। ಳ್ಪಿರುತಂ ಜನಿಯಿಸಿ ಕಾರಣ। ಪುರುಷಂತಾನೆನಿಸು ತಿರ್ದನಾಕಣ್ಣಪ್ಪಂ॥ ೪೩

ವ॥ ಮತ್ತಮಾಕಣ್ಣಪ್ಪನೆಂಬ ಪುಳಿಂದಾಧೀಶ್ವರಂ ತಿರಿಕಾಲತ್ತಿ ಮಲೆ ಯೊಳ್ಬೇಂಟೆಗೆಂದು ನಿಜಶಬರಬಲಂಬೆರಸು ಪೊರಮಟ್ಟಾಗಳ್॥

ಮ॥ ಇದುಪರ್ಬಿರ್ದತ ಮಾಂಘವೃಂದಮಿದು ಕಾಳಿಂದೀಪ್ರವಾಹಾ ಬುಮಿಂ। ತಿದು ಕಾಗರ್ಾಲದ ನೀರದೌಘಮಿದು ನೀಲಕ್ಷ್ಮಾಧರಾಕಾ ರಮಿಂತಿದು ಹಾಲಾಹಲಜಾಳದೇಳ್ಗೆಯಿದು ತಾನೆಂಬಂತೆ ಮೆಯ್ಗಪ್ಪಿ ನೊಪ್ಪದಿನಂದೆಳ್ತರುತಿರ್ದುದುಗ್ರ ಶಬರಾನೀಕಂಘನಾಟೋಪದಿಂ॥

ಕಂ॥ ಪದಪಿಂಕಟ್ಟಿರ್ದುಡಿ ದೊವ। ಲೊದವಿದನೀರ್ದಿತ್ತಿ ಕಲ್ಲಿಸುತ್ತಿ ದ ಪುಲಿವಾ। ಲದ ತಲೆಸುತ್ತುಗಳೆಸೆಯ। ಲ್ಕಥಟೆಂದಂ ನೆರೆದುಲುಬ್ಧಕ ರ್ಬರುತಿರ್ದರ್॥ ೪೪

ಶಿಲೆಯೊಳ್ಜಲಪೊಳ್ಮೃಗತತಿ। ಗಳಪಜ್ಜೆಗಳಪ್ಪ ಕೊಳಗುನೊರೆಕೆಸರುಂ ತು। ಪ್ಪುಳಗಳ್ಸ್ಪಗದೆಂಬಿ ವರೊ। ಳ್ತಿಳಿವುಳ್ಳಡಿ ಪಜ್ಜೆಗಾರ ಬೇಡರ್ನಡೆದರ್॥ ೪೫

ಗಳೆಯೆಂಟು ಸೆಂಡುಕಾಲ್ಬ। ಗ್ಗಳೆಗುಗ್ಗುರಿ ಮದ್ದು ಮಡ್ಡಿಯೆರಗೂ ಳ್ಗಳಂ। ಗಳೆಸಿಪ್ಪ ವನಾಂತಂದದಿ। ಬಲುಲುಬ್ಧ ಕನಿಕರವಿರದೆ ನಡೆ ದುತ್ತಾಗಳ್॥ ೪೬

ಪಿಡಿವಪುಲಿದೀಹಪೇಣಂ। ಗಿಡುಗಂ ನಾಯ್ಕೊಡಲಿಕತ್ತಿ ಗೇಣ್ಬಿಲ್ಕೋ ಲ್ಕೈ। ಪೊಡೆಯಿಟ್ಟ ಪೆರಸು ಭರದಿಂ। ದಡವಿಯೊಳತ್ಯುಗ್ರ ಲುಬ್ಧಕ ರ್ಬರುತಿರ್ದರ್॥ ೪೭

ಕಡುಪಿಂದಂ ಮುಂದಸುವಲೆ। ಪಿಡಿವಲೆ ಕೋಳವಲೆ ಬೀಸುವಲೆ ಯೆಂ ಬಿವನಾಂ। ತಡವಿಯೊಳತಿ ಸಭಸಂಮಿಗೆ ನಡೆತರುತಿರ್ದತ್ತು ನೆರೆದು ಶಬರವ್ರಾತಂ॥ ೪೮

ವ॥ ಅಂತುಬರುತಿರ್ಪಾಗಳ್॥

ಚಂ॥ ಪಲುವಿರಿ ತೋಡೆ ವೃಕ್ಷವವನೀಜವ ನೇರರುಹುವಂಜಂಮುಹಾ ಕುಲತೆಯು ನೆಯ್ದಿ ಪೋಹುದೊರೆ ಪೇಣಿಗಳೊಗ್ಗೊಡದೆಯ್ದಿ ಚಲ್ಲಲೆ ಕ್ಕಲನಿರದುರ್ಬುಗುಂಡೆ ವರಸ್ಯೈರಿಭ ಪಾಲಿಸೆ ಮತ್ತದಂತಿಪೆ। ಗರ್ಜಿಸು ತಿರಲ್ಕೆ ಬೇಂಟೆವರೆಯುಬ್ಬರ ಮುಣ್ಕಿತು ತದ್ವನಾಂತದೊಳ್॥ ೪೯

ಕರಡಿಗಳಿತ್ತ ಮೆಯ್ಯ ಮೃಗಮಿತ್ತ ವರಾಹಸಮೂಹಮಿತ್ತ ಬೆ| ಳ್ಳಿರಳೆಗಳಿತ್ತ ಪೆರ್ಬುಲಿಗಳಿತ್ತ ಲುಲಾಯನಿಕಾಯಮಿತ್ತ ಪೆರ್ವುರಕೆಗಳಿತ್ತ ದಂತಿಚಯ ಮಿತ್ತ ಮೃಗೇಂದ್ರಸಮೂಹಮಿತ್ತ ಭೀ| ಕರಶರಭಾಳಿಯಿತ್ತ ಲೆನಿಪಬ್ಬರಮುಬ್ಬರವಾಯ್ತರಣ್ಯದೊಳ್॥ ೫೦

ವೃತ್ತಂ॥

ಕೆದರಿದಸಲ್ಲಕೀ ಕಿಸಲಯಂಗಳಕಂಪಿಡೆಪೋದುವೀಕ್ಷಣಂ| ಮದಕರಿಸ್ವಕ್ವದಿಂನವತೃಣಂನುಸುಳ್ದು ವಿರ್ಗೆಸೂಸುತೀಗಳೋ| ಡಿದುವಿರದೇಣಿಗಳ್ಕೊಣಸುಗಳ್ದೆಸೆಗೆಟ್ಟವೆದಂಷ್ಟ್ರಪಾದಪಂ| ಕದಕುರು ಪಿಲ್ಲದೆಂಬಪಿರಿದಬ್ಬರ ಮುಬ್ಬರ ಮಾಯ್ತರಣ್ಯದೊಳ್॥

ವ॥ ಇಷುಕಲ್ಲಿಂ ಮಲೆದಿರ್ಪ ಪೆರ್ಗರಡಿಯಂ ಬೆಂಬತ್ತಿ ಪೆರ್ಬಂಡಿಯಂ ಬಿಡುನಾಯಂ ಮೊಲವಟ್ಟೆ ಪೆರ್ವೊಲನ ನೆಡ್ದು ಪೋಯ್ತು ಶಾರ್ದೂಲ ವಿ| ಕ್ಕಡಿಯಾಗಲ್ಕೆಸೆ ಮಿಕ್ಕು ತಿವಿದಿಕ್ಕಾಂತಿರ್ಪ ಪೆರ್ಗೋಣನಂ| ಪಿಡಿಸಾರಂಗಮನೆಂಬ ಲುಬ್ಧಕರವಂ ಪರ್ಬಿತ್ತು ಕಾಂತಾರದೊಳ್॥ ೫೨

ಕಂ॥ ಪರಿಡುಪುವಂ ಪೊಯ್ದಂಗೆ ಯೊ| ಳೆರಳೆಯನೆಸೆ ಸೊಕ್ಕಿದಿಭದ ಕೊಂಬಂಮುರ್ಕೇ| ಸರಿಯಂ ತರಿಯೆಂಬಾವನ| ಚೆರರೊಗ್ಗಿನಬೊಬ್ಬೆಯುಬ್ಬು ಪರ್ಬಿತ್ತಾಗಳ್॥ ೫೩

ಚಂ॥ ನಡೆಜಡಿಸನ್ನೆ ದೋರುವುಗನೇರಿ ನಿರೀಕ್ಷಿಸು ಸಾರ್ದಪಕ್ಕೆಕಾ| ಲ್ವಡು ಬಿಡದಟ್ಟು ಮುಟ್ಟುಕಡೆಮೆಟ್ಟದು ಕಕ್ಕರಿಮಿಕ್ಕುಪೊಕ್ಕುಪೊ| ಯ್ಕುಡಿ ತಿವಿಕೊಲ್ಲು ಸೀಳ್ತೊವಲನೆತ್ತು ಕರುಳ್ಗಳನುರ್ಚುನೆತ್ತರಂ| ಗುಡಿದಿಡಿಕೆಂಬ ಬೇಡಪಡೆಯುಬ್ಬರಿ ವಾತಿಡಿದುತ್ತು ಸುತ್ತಲುಂ॥ ೫೪

ವ॥ ಮತ್ತಮಾಪರಿ ಯೊಳಾಟೋಪದಿಂಪೇರ್ಗವಿದುಗ್ರ ಕಿರಾತಪಾತದೊಳ್॥

ಮ॥ಸ್ರ॥ ಹರಿನೀಲಶ್ಯಾಮಲಂಲೋಹಿತನಯನಯುಗಂಪರ್ಣಭಾಕರ್ಣಚ್ಛೆರೋಗ್ರಂ| ಸ್ಫುರದುಗ್ರಶ್ಮಶ್ರುಕೂರ್ಚಂದ್ವಿಪರಿಪುಸಮಸತ್ವಕರ್ಕಶ್ರೀಜಾಲಯುಕ್ತಕ್ಷುರಿಕಾವಿಭ್ರಾಜಮಾನೋನ್ನತ ಜಘನತಟಂಪ್ರೀತಿಯಿಂಬಂದನತ್ತು| ದ್ಧುರಶಾರ್ಕ್ಷ್ಯೋಪೇತಚೇತಂಪ್ರಬಳವನಮೃಗವ್ರಾತಘೂತಂಶಿರಾತಂ॥ ೫೫

ವ॥ ಮತ್ತಮಾಕಿರಾತಾಧಿಪತಿಯಪ್ಪ ಕಣ್ಣಪ್ಪನಸವಿಯೊಪದೊಳ್॥
ಮಱಯಂಕೆಡಪುವಪುಲಿಯಂ। ಹರಿಯಿ ಪಸ್ಯೆರಿಭದಚರ್ಮಮಂಬಿಚರ್ಮ
ವಸೂ। ಕರನಂಕರ್ಚೆಡಾಡುವ। ಬಿರಿದಿನಕುಕ್ಕುರಗಳೆಸೆದುವಾತನಕೆ
ಲದೊಳ್॥ ೫೬॥

ವ॥ ಅಂತೆಸೆವಕುಕ್ಕುರಿಯಹಾಸಮಂತೆಗೆದುನೊಕಲ್ಕಾಗಳ್॥
ಕಂ॥ ಉಡುಗಿದಬೆನ್ನೆತ್ತಿದಕಿವಿ। ಬಿಡಸರಳಿಪಕಾಲ್ಗಳೊಪ್ಪೆಬೆಂಬತ್ತುವ
ನಾ। ಯ್ಬುತ್ತಡುಕುವಪಡದೊಳ್ಕುಂಡಿಗೆ। ಕೆಡೆಯೆಮಗುಳ್ದೋಡಿಕಾಡಿ ತಂ
ದೊಂದುಮಲಂ॥ ೫೭॥
ಮುರಿದತ್ತಿತ್ತಲ್ಮಿಣುಕುಟ। ವರಿದೋಡುವವೊಲನನೆಯ್ದಿ ಮಿಗೆಕೀಳಡೆ
ಕರ್ಚಿರದುಲಿದುಬಿಡದೆನಲಿವು। ತ್ತಿರಲಾಕುಕ್ಕುರಿಗೆಮೆಚ್ಚಿದಂಕಣ್ಣಪ್ಪಂ ೫೮॥
ವ॥ ಅಂತಾಶಬರೇಶಕಣ್ಣಪ್ಪಂ ನಿಜಶಬರಬಲಮಂಬೇಂಟೆಯೊಡುವುದೆಂ
ದುಕೈವೀಸಲ್ಕಾಗಳ್
ಕಂ॥ ಸರಿಯಂಕಟ್ಟುವತೋಹಿಂ। ಗಿರಡೆಯ್ದುವಬೇಗೆಯಿಡುವಬಿಲ್ಲಾರ
ಮನಾ। ಸುರದಿಂಬೀಸುವಬಲೆಯಂ। ಪರವುವಶಬರಾಳಿಕಂಡುದೊಂದೆಕ್ಕ
ಲನಂ॥ ೫೯

ಚಂ। ಎಳೆವೆರೆಯಂದಮಂಜರಿವದಾಡೆಗಳಿಂಗಳದಂತೆಕಣ್ಗಳುಜ್ಜ್ವಳಿಸುವ
ಲೋಹಸಾಚೆಗಳವೊಲ್ತ ನುರೋಮಮಿರುಂಕಿದಿಕ್ಕುಳಂಗಳನೆರಪೋ
ಲ್ತನೀಲ್ದ ಕೋಳಗೊಪ್ಪೆಮುಹೋನ್ನತಕಂಠವೆತ್ತಿಹವ್ವಳಿಸುತಲುರ್ಕಿನೊ
ರ್ಕಿಸಿರುತಿರ್ದುದುಭೀಕರನೊಂದುಸೂಕರಂ। ೬೦
ಮ॥ ಸ॥ ಜನಿತೋನ್ಮತ್ತಪ್ರಚಾರಂನೆಗಳೆಘುಳುಘುಳುಧ್ವಾನವಮಾಕ್ಶೈಲ
ದೊಳ್ಘೀ। ಳಿನೆಕೋಪ್ರೋದ್ರೇಕದಿಂದಂವನಚರಬಲಮಂಕುಕ್ಕುರಾನೀ
ಕಮಂತ। ದ್ವನದೊಳ್ಬೆಂಕೊಂಡು ಕೊಂದತ್ತುಳಚಳಸಮೂಹಂ ಮ
ಹಾರೌದ್ರಗೇಹಂ। ಘನದೇಹಂ ವ್ಯಾಧದಾಹಂ ಪ್ರಬಳಸಮರಸಂ ನಾ
ಹನಂತಾವರಾಹಂ॥ ೬೧॥
ಇರಿದದು ಘಿರ್ರೆನುತ್ತ ತಿರಿಗೆತ್ತೆಸೆಯಲ್ಕಣಿಕಿರ್ದು ದಾದುರ್ದು ಬೊ। ಬ್ಬಿ
ರಿದೊಡೆ ಬೊಮ್ಮಿ ನಾಲ್ದೆಸೆಯ ನೀಕ್ಷಿಸುತಟ್ಟಿದ ನಾಯ್ಗಳಂ ಕರಂ।
ತರಿವುತೆ ತಗ್ಗಿಬಗ್ಗಿಸುತೆ ದಾಡೆಗಳಿಂ ಮಸೆದೊಕ್ಕಲಿಕ್ಕಿಹೆ। ಗ್ಗುರುಹಿನ
ಬೇಡರಂ ತರಿದು ಸೀಳ್ದಿರಿದಿಕ್ಕುತು ಸೊಕ್ಕಿದೆಕ್ಕಲಂ॥ ೬೨

ಕಂ॥ ಉಗಿಬಗಿದು ಬೇಡರರುಣಾಂ। ಬುಗಳಂ ಕುಡಿವುರ್ಕಿ ಸೊ
ರ್ಕಿ ಕೆಲವೆಕ್ಕಲನಂ। ಮಿಗೆಕೋಪದಿಧಾನುಷ್ಕರ। ನುಗುಳುಗುಳನುರಿ
ರಿದುಕೆಡಪಿದಂ ಕಣ್ಣಪ್ಪಂ॥ ೬೩

ವ॥ ಮತ್ತ ಮೊಂದೆಡೆಯೊಳೆಳೆವೊನೆಲೊಳಾಡುವಕಾಡೆಮ್ಮೆ ಯತಕ್ಕ
ಯೊಳ್॥

ಮ॥ ಸ್ರ॥ ನಡೆವಾಗಳಾದ್ರಿ ತಗ್ಗಲ್ಕಡುಮುಳಿದಧಟಂ ಕೋಡಿಡಲ್ಬ
ಟ್ಟು ಪಿಟ್ಟು। ಗೋಡೆಯುಲ್ಪಿವೆಮ್ಮಟ್ಟ ಕಾಯ್ಪಿಂ ಪಣಿಮಿಡೆ ನವಭೂಜಾ
ಳಿಗಳ್ನುಗ್ಗ ನುಗ್ಗಾ। ಗುಡಿಯೆಲ್ಪಾಯ್ದಿಬ್ಬಟ್ಟೊಡಂ ಪೆರ್ಮಡು ಬರಿದೆ ನಿ
ಸಲ್ಬೊರ್ಕಿ ಸಲ್ಲೀಲೆಯಿಂ ರೊಂ। ಕಿಡುತಂ ಕಾಡೆಮ್ಮೆ ವಿಂಡೊಳ್ಮರ
ದುದು ಕಡುಪಿಂಸೂರ್ಧ್ವಲಕಾಯಂಲುಲಾಯಂ॥ ೬೪

ಕಂ॥ ತರಣಿಜಸೈರಿಭನೋ ಭೀ। ಕರಮಹಿಷಾಸುರನೊ ತಾನದೆನಿ
ದಿರಾಂತಾ। ಸುರದೀ ದೀಕ್ಷಿಸಿದುದು ವನ। ಚರಬಲಮುಂಸೆಗರಪ್ರವೀ
ಣಂ ಕೋಣಂ॥ ೬೫

ಅಂತೀಕ್ಷಿಸಿ

ಮ॥ ಸ್ರ॥ ಅತಿಕೋಪಂ ಮಿಕ್ಕು ಕೋಡಂಜಡಿದುಬಿಡದೆ ಕಿಗ್ಗಣ್ಣಿನಿಂ
ನೋಡಿ ಕಾಯ್ಪಂ। ಕ್ಷಿತಿಗಾಸ್ಯಂ ತಗ್ಗಿ ಬಾಲಂಮಿಗೆನೆರೆದೊಗೆಯಲ್ಬು
ರ್ಬಿ ರೊಂಕಿಟ್ಟು ಬೆಂಕೋಂ। ಡತುಳವ್ಯಾಧಾಳಿಯುಂ ತಳ್ತಿರಿದುದು ಬ
ಹಳತ್ರಾಣನದು ಪ್ರಮಾಣಂ। ಜಿತಧಾನುಷ್ಕೋಗ್ರಬಾಣಂ ಘನತರಮ
ಹಿಷೀಪ್ರಾಣನಾಕಾಡಕೋಣಂ॥ ೬೬

ಅಸಮಯದೊಳ್

ಕಂ॥ ಕಡುಗೋಪದಿ ವನಚರರಂ। ಕೆಡೆದುಳಿದಿರಿದೆತ್ತಿ ಕೋಟ್ಟಕೋ
ಣನಕೋಡಿಂ। ಪಿರಿದಾರ್ದು ಖಡ್ಗದಿಂ ತಲೆ। ಗಡಿಯಲ್ಪೊಡೆದಿಳೆಗೆ ಕ
ಡಪಿದಂ ಕಣ್ಣಪ್ಪಂ। ೬೭

ವ॥ ಮತ್ತ ಮಾಪುಳಿಂದಾಧಿಪ ನಪ್ಪಕಣ್ಣಪಂ ಬಳೆವರೆ ಮುಂದೊ
ದುಪೆರ್ಮೆಯೊಳ್।

ಮ॥ ಸ॥ ಕ್ಷಿತಿಯುಂವಾಲಾಗ್ರದಿಂದಂಪೊಡೆಯುತೆಮಿಗೆಪುರ್ಬಿಕ್ಕ್ಯತ
ವಿಸ್ಫುಲಿಂಗ। ದ್ಯುತಿಯುಂಪೋಲ್ವಕ್ಷಿಯಿಂದಂದೆಸೆಗಳನೊಲವಿಂನೋಡು
ತ್ತಂಕ್ಮರುವಂಕೆ। ತ್ತುತೆಬಾಯೊಳ್ಜಿಹ್ವೆಯಂಚಾಲಿಸುತೆಸಮುಪದಂಗ

ತ್ರಿಶೂಲ್ಯದುರ್ಗದ ತ್ರ್ಯ| ಸ್ವತಧೀರಂ ಭೀತಿದೂರಂ ಬಲಯುತನರ ಶಾ
ರ್ದೂಲನಾ ಭೀಳಶೀಲಂ|| ೬೮

ಕಂ| ಒಲಿದಾದುರ್ಗ ಗರ್ಜಿಸುವ ಪೆ| ರ್ಬುಲಿಯುಬ್ಬರ್ಮಂ ಕಂಡು ಕಾ
ಯ್ದು ಕಡುಪಿಂದಂ ಪೆ| ರ್ಗಲಿಸಿ ಬಳವಂತ ವನಚರ| ಕುಳದವ ಬಬಬಿ
ನುತೆ ಮುತ್ತಿ ಕವಿಯುಲ್ಕಾಗಳ್|| ೬೯

ಮ| ಸ| ಮೊರೆಯಂ ಸೌದರ್ಾಡಿಬಾಲಂ ತೋನೆಯೆ ಕುಸಿದಗೋ
ಣತ್ರಿನಟ್ಟಾಲಿಯಿಂ ಹ| ವ್ವಳಿಸುತ್ತಂ ನೋಡಿಮೆಲ್ವಾಯ್ದು ಧಟರಬಸ
ರಂ ಪೋಯ್ದು ಸೀಳ್ದಿಕ್ಕಿ ಬಾಯ್ವಿಟ್ಟಳೆದಾ ರಕ್ತಾಂಬುವಂಸುರ್ವನೆಕುಡಿ
ದಿದಿರಾಂತಿರ್ದ ಶಾರ್ದೂ ಲನಂಬ| ಲ್ಕುಳಿಸಿಂದಂನೋಡಿದಂಕೇಸುರಿಯ
ನುಗಳ್ವ ಕೆಂಗಣ್ಗಳಿಂದಂಪುಳಿಂದಂ| ೭೦

ವ| ಅಂತು ನೋಡಿ ತತ್ಪುಳಿಂದಾಧೀಶನಪ್ಪ ಕಣ್ಣಪ್ಪಂಕೋಪವುಂ
ತಾಳ್ದು|

ಚಂ| ಜರದರೆಯುಟ್ಟ ಮುಟ್ಟಪೊಡೆದೊರ್ವ ಕಿರಾತನವುಸ್ತಕಾ
ಗ್ರಮಂ| ಘರಿಘುಚಿಲೆಂದೆ ನಳ್ಪಿಡದೆ ಕರ್ಚಿಕರಂ ಮೊರೆಯುತ್ತಿರಲೆ
ಚೊ| ಬ್ಬರಿದು ಕಠಾರವುಂ ತಿರುಪುತೆತ್ತಿದ ಕೈವಿಡಿಜಾರ್ವಬಾಯನೊ
ತ್ತರಿದು ಚ ಮೂರುವಂ ಧರೆಯೊಳಿಕ್ಕಿದ ನಾರ್ಪಿನೊಳಂದು ಕ್ಷ
ಣ್ಣಪಂ|| ೭೧

ವ| ಮತ್ತ ಮಾಕಿರಾತಾಧೀಶನಪ್ಪ ಕಣ್ಣಪ್ಪಂ ಬರೆವರೆಮುಂದೊಂ
ದು ಪರ್ವತಿಯೊಳ್||

ಕಂ| ಕರದಿಂದಜಗರವಂ ಪಿಡಿ| ದಿರಚೆತ್ತಿಯೆ ಬಿಸುಟುದಾಡೆಯೊ
ರ್ಗಿರಿಡಾಗಾ| ಸುರದಿಂ ಝಾಡಿಸುತಂಪುದ| ಕರಿಚರುತಿರೆ ಕಂಡುಮು
ತ್ತಿಕವಿದರ್ಬಿಯುದರ್|| ೭೨

ವ| ಅದಲ್ಲಿಬೆ ಮತ್ತೊಂದೆಡೆ ಯೊಳೊಂದಿ ಭೇಂದ್ರನಂ ಮೃಗೇಂ
ದ್ರಂಕಂಡು||

ಚಂ| ಕರಿವರವುಸ್ತ ಕಾಗ್ರಕುರಲಂಘಿಸಿ ಮೇಲಿರಗಿರ್ದ ಭಾರಿಯಂ|
ಬಿದಧಟಂ ಕನಲ್ದು ಫುಟವುದ್ದಿದಿರಾಂತ ಲಗಿದ ಕುತ್ತಿಯು| ಬ್ಬರಿ
ಸು ತೆದಂಡೆಯೊತ್ತಿ ಶಿವಮಂದಿರ ಕೂಟದಪೇಲಿ ಬರ್ಪಭೀ| ಕರತ
ರ ಸಿಂಹಶೂಲಿ ... ಕೊಳ್ಳುದ ಕಣ್ಣಪಂ|| ೭೩

ವ॥ ಅದಲ್ಲದೊರ್ವ ಶಬರಂ ನಿಜಶಬರಿವೆರಸುಬರುತಿರ್ಪಾಗಳ್॥
ಕಂ॥ ಜಡಿದಿದಿರೊಳ್ಸಿಂಗಂ ನಿಲೆ। ಕಡುಭಯಮುತ್ತೊಡನೆ ಬರ್ಪವ ನಚರಿಬೆನ್ನಂ॥ ಬಿಡದಪ್ಪಲ್ಕನುರಾಗಂ। ಬಡೆದುರೆವೆಯ್ಮರೆದು ಶಬರನಿರ್ಪವಸರದೊಳ್ ॥ ೭೪
ಚಂ॥ ಮುಸಗಿಕನಲ್ದುಸಿಹ್ಮವಿರಪೆಯ್ದಿದಿ ಕರಾಗ್ರದಿ ಪೊಯ್ಯೆನೋವಿ।ನಿಂಮಿಸುಕದೆ ಮತ್ತಮಿರ್ದುರರದವೊ ಲಂಗಾಯುದರಕ್ತ ಮೋಡ ನೀ॥ ರಸತರುವಂ ಮಲಂಗಿದಂಗೂರಿಸವಿಾಪದೊಳಾತ್ಮಕಾಂತೆ ರಾ। ಜಿಸಲೆ ಸೆದಿರ್ದ ನೀಕ್ಷಿಪೊಡೆಶೂಲನ ಬೀರನವೋಲ್ವನೇಚರಂ॥ ೭೫
ವ॥ ಅಂತದಂ ಕಿರಾತಾಧೀಶ್ವರನಪ್ಪ ಕಣ್ಣಪ್ಪಂ ಕಂಡುಕುಪಿತನಾಗಿ ತರುಣಿಯ ಸೋಂಕಿಂ ಬೇಡಂಪರವಶನಾದದರೊಳಿರಗಿತೆನುತಂಶಬರೇಶ್ವರನಪ್ಪಕಣ್ಣಪಂ ಕೇ ಸರಿಯಂ ತಲೆಗಡಿಯಲೆಚ್ಚು ಕೆಡಪಿದ ನಿಲೆಯೊಳ್॥ ೭೬
ವ॥ ಆಳಮುಖುದೊಳೊಂದು ಮದಾಂಧಸಿಂಧುರಂ ಮುನತಿಬಳನಪೊರ್ಬ್ಬಲುಬ್ಧಕಂ ಕಂಡುಕಡುಮುಳಿದು।
ಚಂ॥ ಘನಬಳನಪ್ಪ ಗಂಧಗಜವಕ್ಷಮ ನಾರ್ದೆಸೆಯಲ್ಕೆಬೆರ್ಚಿಭೋಂಕನೆ ತಿರುಗಾಶರಂ ನುಸುಲ್ದು ಪೆಂಚಕದಿಂ ಪೊರಮುಟ್ಟುಬಂದದೆಚ್ಚನತಲೆಯಂ ಕೊಳಲ್ಕರಸಿ ಸಿಂಹ್ಮದವೋಲ್ಲೆಯ ನಟ್ಟಿಗಿತ್ತು ತ॥ ದ್ವನಚರ ನಂದಿನಗ್ಗದ ನೃಸಿಂಹ್ಮನ ವೊಲ್ಪಿರಿದೊಪ್ಪಿ ತೋರಿದಂ॥ ೭೭
ವ॥ ಅದಲ್ಲದೆಮತ್ತೊಂದುತಾಣದೊಳ್।
ಕಂ॥ ಕರಿಬಿದುವನೊರ್ವ ಶಬರಂ ಶರದಿಂದೆ ಸೆಯಲ್ಸುರ ಕ್ಷಮೌಕ್ತಿಕ ನಿಕರಂ। ಸುರಿತರೆ ಮುಗ್ಧವನೇಚರಿ। ವರಬದರೀ ಫಲನೆನುತ್ತಮಾಯ್ವುತಿರ್ದಾಳ್॥ ೭೮
ವ॥ ಅದಲ್ಲದೆಮತ್ತೊಂದುತಾಣದೊಳ್।
ಕಂ॥ ಮರೆಯೊಳ್ಕರಿ ಕರಿಯೊಳ್ಹರಿ, ಹರಿಯೊಳ್ಶರಭಂ ಮಹೋಗ್ರಶರಭದೊಳತಿ ಭೀ। ಕರಭೇರುಂಡಂ ಪೊಣರುತ್ತಿರದಿನಿತಂ ಕಣ್ಣಪಂ ಪೊಡರ್ಪಿಂದೆಚ್ಚಂ॥ ೭೯
ವ॥ ಮತ್ತಂಮುಂಪೊಂಡೆಯೊಳ್॥
ಕಂ॥ ಕಸ್ತೂರಿಯ ಮೃಗಮುನವಸುತೆ ಪುತ್ತಿನಕೆಲದಲ್ಲಿ ಕೇವಳ

ಬಿಗಳಂ। ಬೆಂಬತ್ತುತ್ತಂ ಕಾಡಾವಿನ। ನೊತ್ತುವುನೆಸೆವುತ್ತೆ ಶಬರಿ
ಯರ್ಪರಿಯಿಟ್ಟರ್॥ ೯೦

ಪಿಣಿಲಿನ ಪಿಂಭಾಗದ ವಾ। ರಣಮುಃಕ್ತೋತ್ಕರದ ಹಾರವುಂ ಪೀಲಿ
ಯಚ। ಲ್ಲಣದಂದೆಯ್ದಂ ಮೆರೆವು। ತ್ತುಣಿಕಿರ್ದು ಪುಳಿಂದಿಬಡ್ಡಿಯಂ ಕೆ
ಡೆವೆಚ್ಚಳ್॥ ೯೧

ಮತ್ತಮೊರ್ವಳ್॥

ಪಿರಿದು ವನೇಚ ರಿಳ್ರುಟವೇ। ಟ್ವೈರಳಿಯ ಕಿಚ್ಚಿಸುರನೆಸೆಯೆ ಬೆನ್ನಲ್ಲಿಕ
ವ। ಲ್ಸರಳೊಡೆದು ಮಾಡುವೆಳೆವರೆ। ವೆರಸಾಡುವ ಹರಿಣನಂದಮುಂ
ಪೋಲ್ತುದಿತಾಂ। ೯೨

ವ। ಮತ್ತಂ ಮದಲ್ಲದೊರ್ವಪುಳಿಂದಿಬರುತ್ತಿರ್ಪಾಗಳ್।

ಚಂ। ಎರಡು ಮೃಗಂಗಳಾಂತು ಪೆರಸಾರ್ದುಪಳಂಚುವ ಸಂಧಿಯೊ
ಳ್ಕವಲ್। ಶರವಿಪುಳಿಂದಿ ಯೆಚೊಡೆ ಶಿರಂಬರಿದಾಂತ ಳವಳ್ಕದಟ್ಟಿ
ಯಿಂ। ದಿರದದನೆಯ್ದಿ ಪೊಯ್ದು ಫಣಿಗೊಂಡತಿ ಕೋಪದಿ ಪತ್ತಿರಲ್ಕೆ
ದ। ಚ್ಚರಿತನು ಯುಗ್ಮಕೊಂದೆ ತಲೆಯೆಂದೆನುತಂ ಬೆರಗಾಗಿನೋ
ಡಿದಳ್। ೯೩

ಮತ್ತಮೊರ್ವಳ್।

ಕಂ। ಧನುವಿನಗುಣಮಂ ಪಿಡಿದಾ। ದನಿಯೋಕೃತ್ತಿಯಾಗಿ ಪಾಡಿ
ಗೋರಿಯೊಳಂ ನೆ। ಟ್ಟನೆಮೋಹಿಸಿ ಮೆಯ್ಮರೆ ದೇ। ಣನನೊರ್ವಪು
ಳಿಂದಿಯೆಚ್ಚು ಕೆಡಪಿದಳಾಗಳ್। ೯೪

ಚಂ। ಬುಡುಬುಡು ಪೇರಿನಿಂದ ಮರೆಗರ್ಜಿದ ನಾಲಗೆಬಿಟ್ಟುದಿಟ್ಟ
ಗ। ಳ್ಸಿಡುಗುವ ಮೆಯ್ಯಾಲಲ್ವ ಕಿವಿಕೋಡಡಿಯಾದ ಕೊರಳ್ಬಿದಿರ್ಚ
ತಿ। ಸೆಡಿಕಡೆವಾಯು ಲೋಳಿ ಪೆರಸುಬ್ಬಸದಿಂ ಪೊಳರುತ್ತೆ ಜೀವವ
ಮಂ ಬಿಸುವ ಮಹಾಮೃಗಂ ದರುಣಮಂ ಪಿಡಿದಿತ್ತು ದುತಪ್ಪನಾಂ
ತದೋಳ್। ೯೫

ವ। ಮತ್ತಮೊಂದೆಡೆಯೊಳೊರ್ವಲುಬ್ಧಕಂಪರಿಯಿಟ್ಟಾಗಳ್

ಕಂ। ಒಳವಂ ಮರೆಯಲ್ಕೆಂದತಿ। ಬಳಹರಿಯುಂ ಕರಿಯುಸೇಣನಂಪಿ
ದಿಪಾಗಳ್। ತಿಳಿದು ನಿಜಸತಿಯ ನಡೆಪೋಲೆ, ಬಿಳುಗಂಗಳಪೋಲ್ವ
ವೆಂದು ಕೊಲ್ಲಂಬಿಲ್ಲಂ। ೯೬

ಮತ್ತಮೊರ್ವಂ

ಚಂ ವನಚರನಾರ್ದೆಸುತ್ತೆ ಸೆಯುಲೊಲ್ದಿದೆ ನೋಳ್ಪಕುರಂಗಮುಂ ಕರಂ| ಮನಮೊಸೆದೀಕ್ಷಿಸುತ್ತ ಮಿರಲಂ ತ್ಯವುಳಿಂದ ನದೋರ್ವ ನಾರ್ದು ಕುರಂ ಗನನೆಸೆಯಲ್ಕು ರಂ|ಗನದು ಬೀಳದ ಮುನ್ನಮೊ ರಲ್ದು ನಿಟ್ಟ ಪಾ| ಘನ ಬಳಲುಬ್ಧಕಂ ಧರೆಗೆ ಧೊಪ್ಪನೆ ಬಿರ್ದನ ದೇಂವಿಚಿತ್ರಮೋ|| ೮೭

ಅದಲ್ಲದೆಮತ್ತೊಂದುತಾಣದೊಳ್

ಚಂ|| ಮಿಸುಗುವ ಪಜ್ಜೆಯುಂ ಪಸಲೆಗೆತ್ತೆಳ ಸುತ್ತರುಣಾಶ್ಮಕೊಲ್ದಲಂ| ಘಿಸಿನಿಲೆ ಲೋಹಿತಾಂ ಶುತನುವಂ ಮುಸುಕಲ್ಕಿದ ವಾಗ್ನಿ ಕೊಂಡುದೆ| ನ್ನಸಿಯುಳನೆಂದು ಬಿದ್ದಮೃಗಮುಂ ಮುಗುಳೀಕ್ಷಿಸಿಭುಲ್ಲೆ ಮೋಲಿಬಿ| ದ್ದಸುಗಳೆಯಲ್ಕೆ ಕಂಡು ಮರುಭೂಪನುತಂ ಕೆಡೆದಂವ ನೇಚರಂ| ೮೮

ಮತ್ತಮದಲ್ಲದೆಯುಂ

ಕಂ ನಲವಿಂ ಪೋದಗೆಗಳಪಿಂ| ಗಲೆಗಳ ಪೊರ್ಣಕ್ಕಿಗಳ ಮಯೂ ರಂಗಳ ಕೋ| ಗಿಲೆಗಳಧನಿಯಿಂ ಲುಬ್ಧಕ ರುಲಿಯ ಲ್ವಗಪಿತತಿ ದೆ ರ್ಚೆಪಾರಿದುವಾಗಳ್| ೮೯

ಚಂ|| ನೆರೆದು ಪುಳಿಂದರಾರ್ದು ಮೊಗಕಿಕ್ಕಿದ ಟೊಪ್ಪರಮುಂ ಕ ಳಲ್ಚಿನೇ ವರಿಸಿ ನಭಕ್ಕೆ ತೋರಿಬಿಡೆ ಪಾರಿಪದಾಗ್ರದಿ ನೊತ್ತಿತುಂ ಡದಿಂ ಪಿರಿದಿರಿದೆತ್ತಿ ಪಕ್ಷಯುಗದಿಂ ಪೊಡೆದುದ್ಧತ ಳಕವಂಗ ಳಾ ಶುಗದೊಳುರುಳ್ಚಿ ಪಕ್ಷಿಗಳ ವೃಷ್ಟಿಮೊಲಾಯ್ತು ವನಪ್ರದೇ ಶದೊಳ್| ೯೦

ಕಂ ಸೀಗಡಿಕೊರವಂ ಬಂಪುಬ ಸೇಗಂ ಗೊರವಂಗೆಂದೆ ಬಾ ಳೆಸಕ್ಕರೆ ಗಂಟೆಂಡಿಗಾನಾನೆ ಮೂಗವುದಲೆಂಬ ಗಣಿತ ಶಕುಂತಾಳಿಗ ಳನೆತೆಗದಬೇಡರ್|

ಮತ್ತಂ

ಚಂ ಪಳಹವಬೇಂಟೆ ಸಂಡಪಟವೇಂಟೆಗಳುನ್ನತ ಚಿತ್ರವೇಂಟೆ ಯು| ಗ್ಗಳಿಕೆಯ ಗೋಣಿವೇಂಟೆ ತಡವೇಂಟೆ ನೆಗಳ್ಕೆಯ ತೋಹು ವೇಂಟೆ ಸರ ಗಳಸಿದನೀರವೇಂಟೆ ಘನಸೋಹಿನವೇಂಟೆಯೆನಿಸ್ಸನಾ

ವುಮಂ ತಳಿದೆಸೆವೆಂಟು ಬೇಂಟೆಗಳ ನಾಡಿದ ನರ್ಥಿಯೊಳಂದು ಕಣ್ಣಪಂ॥ ೯೩

ಅಲ್ಲಿಂಬಳಿಯಂ

ಕಂ ಕಡುಪಿನ ಬೇಂಟೆನಿಲಲ್ಕಂ॥ ಚಳಧನಿಯಿಂ ಶಬರರುಲಿಪ್ರುವಾಣ್ಯಾಗಳ್ತಾಂ॥ ಪಡೆನಲವಿಂದಿರುತಿರ್ದುರ್ ದುಸಿಡಿಲರವಂನಿಂದುತೋರ್ಪರ್ ಮೇಘದತೆರದಿಂ॥ ೯೪

ವ॥ ಅಂತುಬೇಂಟೆಯುಂಮಾಣ್ದಾಗಳ್॥

ಕಂ ಪಲತೆರದಿಂಪರಬಲಮೃಗ॥ ಕುಳವೆಂಬೀ ಮೂರುತರದಬೇಂಟಿ ಗಳಂದೋ॥ ರ್ಬಲಶಬರರಾಡಿ ಪಿಶಿತಾ ವಳಿಗಳ ಪೊರೆವೆತ್ತು ಬಂದುದಂದೇಂ ಪೊಗಳ್ವೆಂ ೯೫

ಪೊತಿಯ ಬೆಕ್ಕರಳೆಯ ಮರಿ॥ ಮಾತಂಗದ ಮುತ್ತು ಪೀಲಿಯೊರೆಚ ಮರೀಜ॥ ವ್ರಾತವೆನಿಪ್ಪ ವನಾಂತು ಕಿ॥ ರಾತರ್ನಿಜಪಕ್ಕಣಕ್ಕೆ ನಡೆತರುತಿರ್ದರ್॥ ೯೬

ಚಂ॥ ಕರಿವರದಂ ತಮಂ॥ ಸುಲಿನಪೆರ್ವೊಲನಂ ಗುದಿಗೆಯ್ವುಪೊನ್ಗಳಂ ಹಿಡಿದೊಡೆಯುಂ॥ ಉಲಾಯುಸಿರಮಂಭಯುಭೀಕರಕೋಕಿಪಂದಿಯಂ ಹರಿಣನಚರ್ಮವಂ ಮುರಿದು ಕಟ್ಟಿದಪೇರು ಡುವಂಪೊದಳ್ದತಾ॥ ಳ್ದಿರದೆವುಗುಳ್ದು ಪಕ್ಕಣಕೆ ಬಂದುದು ಧೀರಕಿರಾತಸಂಕುಳಂ॥ ೯೭

ವ॥ ಅಂತುನಿಜಬಲಂ ಬೆರಸು ಶಬರಾಧಿನಾಯಕನಪ್ಪ ಕಣ್ಣಪ್ಪಂತತ್ಪಕ್ಕಣಮಂ ಪೊಕ್ಕಿರಲಾಗಲ ದರೊಳೊರ್ವ ವನೇಚರಂ ನಿಜಾಲಯಕ್ಕೆಬಂದು

ಚಂ ವನಚರ ನುಗ॥ ಸಿಹ್ಮನಖಮಂ ಗಜಮೌಕ್ತಿಕವುಂ ಪೊದಳ್ದತಂ॥ ದಿನಿಯಳ ಕೈಯೊಳಿಕ್ಕಿದೊಡೆ ಕಾಯ್ದುಬಿಸುಟ್ಟಳದೊರ್ವನಾರನಾ॥ ವನದೊಳಗಂ ತೊಳಲ್ದು ಬರಿಗೈಯೊಳೆ ಬಂದೊಡೆನೊಡಿ ಮಚ್ಚಿತ॥ ನ್ನಿನಿಯುನನಪ್ಪಿದಳ್ ಶಬರಿನಲ್ಮೆಯೊಳೆಂದೊಡದೇಂವಿಚಿತ್ರವೋ॥ ೯೮

ಮತ್ತವೊರ್ವಂ

ಕಂ ಕರದಕ್ಷ ತಂಗಳಬ್ಬರಿ॥ ಗೊರಳೆಡೆಯೊಳಿಕ್ಕೆ ಕಂಡು ತನ್ನ

ಯನಲ್ಲ| ಳ್ಪುರುಡಿ ಪಳಿಂದಿ ಕೌಸಂಕುಳಿಂ| ಳಿರದಿ ಭರಿಪುಗಳನಿ
ರುಂಕಿತ್ರಂದಂಶಬರಂ|

ವ ಅಂತೀಪರಿ ಯೊಳ್ವನೇ ಚರರ್ಪ್ಸಕ್ಕಣಂ ಗಳಂ ಪ್ರೇಕ್ಕಿರುತಿ
ರ್ಪನ್ನೆಗಂ

ಚಂ| ಪಿರಿದಪರಾಬ್ಧಿ ಯೊಳ್ವಿರ್ದ್ದ ರಶ್ಮಿಗಳೆಂಬ ನೆಗಳ್ದ ಜಾ
ಲಮಂ| ಪರಪಿನಭಕ್ಕೆ ಸೇದಿ ತೆಗೆದಲ್ಲಿ ಬಿದಿರ್ಚ ನಿರೀಕ್ಷಿಸ
ಲ್ಕೆ ನಿ| ರ್ಭರಿತ ಕುಳೀರ ಮೀನಮಕರಂಗಳ ರಾಶಿಗಳಾಗೆ ರಾಗದಿಂ
ಚರಿಯಿಪ ಜಾಲಗಾರನೆನೆ ಭಾಸ್ಕರನೊಪ್ಪಿದ ನಸ್ತಶೈಲದೊಳ್||೯೯

ವ| ಮತ್ತಮನಂತರಂ

ಕಂ| ಕರದಿಂದೆ ಕಾಲನೆಂಬ ಗ| ಚರನಂ ಬರಭೂಮಿಯಿಂದೆ
ನೂಂಕಲ್ಕಿಡೆದಾ! ಪರಮಧ್ರು ಘೃತ|ಮೆಂಬಂತಿರೆ ನೆರೆಬಿರ್ದ್ದುದು ಪ
ಶ್ಚಿಮಾಬ್ಧಿಯೊಳಗಿನಬಿಂಬಂ||

ಅಂತಿನನಪರಾಬ್ಧಿಗೆಯ್ದಿದಾಗಳ್

ಕಂ| ಮುಳಿದು ತಮ ಪಬ್ಜಸಖನಂ| ದಿಳಿಯಿಸಿತಿನ್ನ ಕಟಪೆಳ
ಗಪ್ಪೆಲ್ಲಿಯದೆನುತಂಕಳವಳಸಿ| ಪಧುವನರಸ| ಲ್ಕೊಳನೊಳಗಂ ಚಕ್ರ
ಪಂತೆ ತಿರುಗಿತ್ತು ಚಕ್ರಂ|| ೧೦೧

ಆಸಮಯದೊಳ್||

ಪರಳೆಯನುದಯಾದ್ರಿ ಯಕೇ| ಸರಿ ಪೊಯ್ವಲ್ಕೆತ್ತರುಣ್ಮಿತ್ತನ್ನಂಮು
ಸುಕ| ಲ್ಕಿರದಮ್ಮದೆ ಪೊರಮಟ್ಟಂ| ತರ್ರುಣಪ್ರಭೆಯಿಂದೆ ಚಂದ್ರ
ನುದಯಂಗೆಯ್ದಂ|| ೧೦೨ ಆವೇಳೆಯೊಳ್

ಚಂ| ವರಮೃಗಜಾಳ ಸೃಕ್ಕ್ವಘನಭೇನ ಮನಃರ್ವಿ ಗುದುಳ್ಚಿಕೇ
ತಕೀ| ಪರಿಮಳದೊಳ್ಮುಳುಂಗಿ ವನಜಾಕರ ದೊಳ್ನಲಿದಾಡಿ ಷಟ್ಪ
ದೋತ್ಕರದೊಡನಾಡಿ ಪೂತಲತೆಯಂತೊನೆ ದಾಡಿನಿಜೇ ಚ್ಛೆಯಿಂದೆ
ಸಂ| ಚರಿಸಿದ ನುಪ್ಪ ಲೋಕಸುಖ ಪೂರಣನೆಂದು ನಿಶಾಸಮಿ
ರಣಂ|| ೧೦೩

ವ| ಅಂತಾಸಮಯ ದೊಳ್ಕಣ್ಣಪ್ಪಂ ನಿಜಪುಳಿಂದೀ ಸಮೇತಂಸು
ಖನಿದ್ರೆಯೊಳಿರ್ಪನ್ನೆಗಂ||

ಕಂ| ಕೆಳೆಯುಬಿಗಿ ಚಂದ್ರನ ಪ್ರಭಾ| ಚ್ಛಳವುಂ ಸಾರ್ದ್ದಸಂ ತ.

ಪಾಂಥವೋಡಿತ್ತುನಭ|ಸ್ಥಳದೊಳು ಹಳಹಳನೊಂದೊಂ| ದುಳಿದುವು
ತಾರಾಳಿನೋಳ್ಪೊಡರುಣೋದಯದೊಳ್|| ೧೦೪

ಜಳರುಹ ಮಿತ್ರನ ನುದಯೊ| ಚಳನಿದಿಗೊರ್ಳಲೆಂದು ಸಾದರ
ದೊಳಸುಕೆಯು ಕೆಂ| ದಳಿರ್ಗಳ ನೆತ್ತಿದಕೆಂಗುಡಿ| ಗಳ ಕೆಂಪೆನೆಪ
ರ್ಬಿದತ್ತು ಸಂಧ್ಯಾರಾಗಂ|| ೧೦೫

ವನಜಭವಂ ಭೂಸತಿಗ| ತ್ಯನುನಯದಿಂ ಸಮೆದ ಭೂಷಣದ ಮು
ತ್ತುಗಳೆಂ| ದೆನೆ ತೊಳತೊಳಗುತ್ತಂತ| ದ್ವನದೊಳ್ಪನಿಪುಲ್ಲುಗಳ್ಕರಂ
ಸೊಗಯಿಸುಗುಂ|| ೧೦೬

ಚಂ| ವಿರುಪಲವರ್ಾಸಿ ನೊಳ್ಪತಿಯು ಸಂಗಡಸೌಖ್ಯಮನಾಂ
ತುನಾಡೆ ಮೆ| ಯ್ಮರೆದೊರಗಿರ್ದ ಲುಬ್ಧಕಿಯು ಪೆರ್ವೊಲೆಯೊಳ್ಪೊ
ರಳ್ದೊಪ್ಪುತಿರ್ಪ ಬಾ| ಯ್ದೆರೆಯು ನೊರಲ್ದು ಚುಂಬಿಸಿ ಮನೋಜ
ನಿವಾಸಮನಂಟ ರಾಗದಿಂ| ಮೆರೆದುದು ತೆಂಬೆಲರ್ಬಿಡದೆ ಪುಂಸ್ಕ್ವಲ
ನಂದದೆಸುಪ್ರಭಾತದೊಳ್|| ೧೦೭

ಉ| ವ್ಯಾಳಗಜಂ ಗಳಾತ್ಮರದ ನಂಗಳನೀಡಿರಿಯಲ್ಕಭಕ್ಕೆ ಪೋ
ಳಾಳಿಯೊಳಿರ್ದ ಗೈರಿಕದಲೋಹಿತ ಧೂಳಿಗಳೀಕ್ಷಿಸಲ್ದಿಶಾ| ಜಾಲದೊ
ಳಲ್ಲಿಗಣಪರ್ಲಬನ್ರ್ಾರೆ ತೋರುತಿರ್ಪ ವೋಲ್| ಶೈಲದೊಳದ್ಭುತಂ
ಮಿಗವಿರಾಜಿಸುತಿರ್ದುದುಸುಪ್ರಭಾತದೊಳ್|| ೧೦೮

ಆಸಮಯದೊಳ್||

ಕಂ| ಪರಮಪ್ರಿಯದಿಂ ಶಚಿತ| ನ್ನರಸನೆನಿಪ್ಪಮರಪತಿಗೆ ತೋ
ರಿಸಿ ದತಿಬಂ| ಧುರಮಣಿದರ್ಪಣ ಮೆಂಬಂ| ತಿರಲೊಪ್ಪಿತ್ತು ದಯ
ಭೂಧರದೊಳಿನಬಿಂಬಂ||

ವ| ಅಂತುನೇಸರ್ಮೂಡಲೊಡನೆದ್ದು ನಿಜಕಿರಾತಬಲಂಬೆರಸುಕ
ಣ್ಣಪ್ಪಂ ಸಿಚ್ಚ್ಕಿನಂದದಿಂಬೇಂಟೆಗೆಪೊರಮೊಡುವಾಗಳ್||

ಉ| ಮೆಟ್ಟಿಪಚಿಕ್ಕಿನೆಕ್ಕಡ ಕರಾಗ್ರದಕೂರ್ಗಣೆ ತಾಳ್ದಕಾ ಮರ್
ಕಂ| ಕಟ್ಟಿದದಟ್ಟಿಸೆಕ್ಕಿದ ಲಗಂಜನಶೈಲದ ಕರ್ಪನಾಂತಮೆಯ್ಯ| ಟ್ಟಿ
ದಪ್ಪಕೆಂಪಡರ್ದದಿಟ್ಟಕುರುಳ್ದಲೆಸೇರಪಿಂಾಸೆಗ| ಳ್ಕಿಟ್ಟಿಸಲೊಪ್ಪೆವೀರರ
ಸಮೂರ್ತಿಯೊಳೊಪ್ಪಿದನಂದುಕಣ್ಣಪಂ|| ೧೧೦

ವ| ಅಂತುಕಣ್ಣಪ್ಪಂನಡೆವಾಗಳ್||

ಕಂ| ಬಲಗಣ್ಣೊಳಗಳ್ಕೆತ್ತೆ| ಪ್ಪಲಯುತವಪ್ಪ ಮೃಗವಿಂದು ಸಿಲ್ಕುವ ಪ್ಪದಕಿದುಲೇಸಂ| ಸಲೆಸೂಚಿಪುದೆನುತಂ ಕಡು | ಗಳಿಕಣ್ಣಪ್ಪಯ್ಯನಧಿಕ ಮುದಮಂತಾಳ್ದಂ||

ವ| ಅಂತುಮುದಮಂತಾಳುತ್ತಿರೆ ಕಾಲತ್ತಿಯಮಲೆಯೊಳ್ನಾನಾ ಮೃಗದಬೇಂಟೆಗೆನಿಜಶಬರಬಲಕ್ಕೆ ಕೈವೀಸಿದಾಗಳ್||

ಮ| ಮರೆವಿಂಡಂತರಿದಿಕ್ಕಿ ಖಡ್ಗಿಚಯಮಂ ಸೀಳ್ದಿಕ್ಕಿಪೆರ್ಗೋರ್ಣನಂ ಭರದಿಂದಂ ಕಡಿ ದಿಕ್ಕಿಪಾಯ್ವಪುಲಿಯಂ ಪೊಯ್ದಿಕ್ಕಿಬರ್ಬಂದಿಯುಂ| ಬರಿಯಿಟ್ಟಾರ್ದಸೆ ದಿಕ್ಕಿಗಂಧಗಜಮಂ ಕೊಂದಿಕ್ಕಿ ಮಾರ್ಪಾಂತಕೇ| ಸರಿಯಂ ಕೊಯ್ದು ರೆಸೊರ್ಕಿನಿಂದೆಶಬರರ್ಬೊರ್ಬ್ಬಿಕ್ಕಿದರ್ಬೇಂಟೆಯೊಳ್|| ೧೧೨

ವ| ಅಂತುಬೇಂಟೆಯಾಡುವ ಶಬರರಾಟೋಪಕ್ಕೆ ಮೆಚ್ಚಿ ತಂಕಣ್ಣಪ್ಪಂಬರುತಿರ್ಪಾಗಳ್||

ಕಂ|| ಹರನೊಲವಿಂತನ್ನಗಣೇ| ಶ್ವರನೊರ್ವಂಶಬರಜನ್ಮದೊಳ್ಬಂದತ್ತಾ| ಸುರದೊಳ್ಕಣ್ಣಪವೇಷದಿ| ನಿರೆಮೆರೆಯಲ್ಕೆಂದು ಕಳುಪಿದಂಪ್ಪಗವೊಂದಂ|| ೧೧೪

ವ|| ಅಂತೀಶ್ವರಂತಾನಿರ್ದೆಡೆಗೆಕಣ್ಣಪ್ಪನಂ ತೆಗೆದುಕೊಂಡುಬಪ್ಪ ಡೆಂದುವೊಯೊಮೃಗವಂ ನಿಯಾಮಿಸಿಕಳುಪಲ್ಕಾಗಳ್||

ಕಂ|| ಹರನಾಜ್ಞೆವಿಡಿದುಘನವಾ| ಗುರಿಯಂನೆರೆದಾಂಟಿ ಶಬರರಂ ಕ್ಕಿಸಡಾ. ಸುರದಿಂಮೊಯೊಮೃಗಷೊಂ| ದಿರೆಕಂಡಂ ಬಿಂಜದಡವಿಯೊಳ್ಕಣ್ಣಪ್ಪಂ|| ೧೧೫

ಅಂತುನೋಳ್ಪಾಗಳ್||

ಚಂ|| ನಳನಳಿಸುತ್ತೆ ಕೊರ್ಬಿದಳವೇರಿಕರಂಕೋಕಿಟ್ಟುಪೆಟ್ಟಿಹ| ಪ್ಪಳಿಸುತಿರಲ್ಕೆನೋಡಿಕಳಿಕಣ್ಣಪನಾರ್ದಸೆಯಲ್ಕೆಬಾಣಮಂ| ಸೆಯೆನಭಕ್ಕೆಲಂಘಿಸಿಮುಗುಳ್ದಡಿಯಂ ಮಿಗೆಸೇದಿವಳ್ಳಿಯಿಂ| ಕಳವಳಿಪಪ್ಪಿಯಿಂಸರಳಿಸುತ್ತಿರದೋಡುತಮಿರ್ದುದಾಮೃಗಂ|| ೧೧೬

ವ|| ಅಂತೋಡುವ ಮಾಯಾಮೃಗವಂಬೆಂಬಿಡದಟ್ಟುತ್ತ ಮಾಗಳ್||

ಕಂ|| ಮುಳ್ಪೊಳ್ಕಲ್ಗೊಳ್ಪುಲ್ಗೊಳ್| ವಲ್ಲಿಯೊಳುರತಲ್ತಪೊದರಸೊಳ್ಗಿಡುಮರನೊಳ್ |ಪಳ್ಳದೊಳಿಡುಕುರಿನೆಲೆಯೊಳ್ಕೊಳ್ಳದೊಳೋಡು

ಸ್ತ್ರಮಿದರ್ಪ ದಂತಾಹರಿಣಂ|| |೧೧೬||
ವ|| ಅಂತೋಪಾತಿಪೆರ್ ಗಳ್||
ಕಂ|| ಪೊಕ್ಕಲ್ಲಿಪೊಕ್ಕು ಬೆಂಬಿಡ|ದಕ್ಕಜದಿಂಬರ್ಪ ಕಣ್ಣಪನನಾಹರಿಣಂ
ಮಿಕ್ಕೋಡಿಕೊಂಡುಪೋದುದು | ಮುಕ್ಕಣ್ಣನಬೆಸದಿನಗಡೊಳದನೇ
ಪೊಗಳ್ವೆಂ|| ೧೧೭||
ಭರದಿಂದಾಹರಿಣಂಬಂ| ಧುರತಿರಕಾಲತ್ತಿನಾಥಲಿಂಗಂನೆಲಸಿ| ರ್ಪುರು
ತರವರಮಣಿಮಯಮಂ| ಡಿರದೊಳ್ಪೊಕ್ಕಲ್ಲಿಮಾಯವಾಯಿತ್ತಾಗಳ್||
ವ|| ಅಂತುತಿರಿಕಾಲತ್ತಿನಾಥಲಿಂಗದೇಹದೊಳ್ಪೊಕ್ಕು ಮಾಯವಾದ
ಮೃಗಮಂಕಣ್ಣಪ್ಪಂಕಂಡು||
ಕಂ|| ಅರಸಿತಿರುತಿರುಗಿ ಕಾಣದೆ ಬೆರಗಿಂಬಂದಲ್ಲಿ ಬಾಗಿಲೊಳ್ನಿಂದಾ
ಗಳ್! ಮರೆತರೆಕದವುಗಳಂನೀಂ! ನೆರೆಯೆನ್ನವನಪ್ಪುಡೆಂದನಾಕಣ್ಣ
ಪ್ಪಂ|| ೧೧೮
ತವಕದಿನೆನ್ನವನೇಯೆ|ನ್ನವನೇತೆರೆಕದಪನೆಂಬನುಡಿಗೇಳ್ದಾಗಳ್|ಶಿವ
ನಾಕದಪಂತೆರೆಯಲ್ಕು|ವಯಪದೊಳ್ಬೆಚ್ಚಿಹರುಷಪುಳುಕಿತನಾದಂ||
ವ|| ಅಂತುಕದಪಂತೆರೆಯಲ್ಕೆನೋಡಿ ಯಿನ್ನುನಿಂನಂಯೂ ಳವನಪ್ಪೆ
ಪೋದಮೃಗಮಂ ಕೊಟ್ಟೊಡೆನಿನ್ನವನಪ್ಪೆ ನಾಂನಿನ್ನವನಪ್ಪೆ ನಾಮೃ
ಗಂದಾರಕಿದೊಡದಂತರದೊಳ್ಪಂಡಮಂನಿನಗೆಭಾಗಮನೀವೆನೆನುತ್ತಿ
ರಲಾತಿರಕಾಲತ್ತಿನಾಥಂ ಮತ್ತೆವನೆನ್ನ ಮೇಲೆ ಮಾಳ್ಪಮೋಹವರಿದಂ
ದು ಕರುಣದಿಂ ದೊಳಗಿರ್ದಮೃಗಮಂ ತೋರಿಸಲ್ಕಂಡುಬರ್ಪ ಸಂತ
ಸಂಬಟ್ಟುನಂಬುಗೆಯೇರಿ ಭಾವುದೇಸತ್ಯಸಿದ್ಧಿಯುಪ್ಪೊಡೆನ್ನಂಪಡೆದೆ ನೀ
ನೆಗೆನಾಂ ನಿನಗುಳ್ಳವನಾಂ ಪಿರಿಶಿಲ್ಲನಿನಗೊಕ್ಕಲ್ದಾರಕಿದೆನಿಂದುಮೊ
ದಲಾಗಿ ಯಿರುಳುಂ ಪಗಲುಂಬಿಡದಂದುಂನಿನ್ನ ಪೊರೆಯೊಳರ್ಪೆ ನಂಜ
ದಿರೆಂಬುನಂಬುಗೆಯಂಕೊಟ್ಟುಕಿರ್ಪ ಕುಕ್ಕಿರದಣಿರ್ದಾಡಿ ದಾಗಳ್ ||
ಕಂ|| ಸೊಗಯಿಪಪಂಚಾಕ್ಷರಿಯಂ|ನುಗುಳುತ್ತಿರ್ಪೀಗಿನ ಸ್ತ್ರಮಂ
ತೊಟ್ಟರು|ತ್ತಗಿದುಂಕಣ್ಣಪ್ಪಂತ|ನ್ಮೃಗವಿಳೆಯೊಳ್ಬೀಳಲೆಚ್ಚು ಕೆಡಪಿ
ದನಾಗಳ್|| ೧೨೦||
ಅಂತುಕೆಡಪಿ||
ಪಟ್ಟಂಬಂವೆರಸ್ಸುಮೃಗಮಂ|ಬಿಚ್ಚದೆಮುಂಗಿಟ್ಟು ತಳುವದೆನಗಂ ನಿನ

ಗಂ॥ಪಚ್ಚೆಲಮನೀಗೆನುತ್ತಂ। ನಿಚ್ಚಳಗಲಿ ಕಣ್ಣಪಯ್ಯ ನೊಲವಿಂನುಡಿದಂ॥ ೧೨೨॥

ವ॥ ಅಂತುನುಡಿದಾಮೃಗವಂ ಬಿರ್ಚಿ ವೆಲ್ಗಂಡಂಗಳಂ ತೆಗೆದೆರಡುಭಾಗವಾಗಿಪಚ್ಚಿ ನಿನ್ನಭಾಗ ಮನದಾರಕ್ಕೈಯೊಳ್ಕುಡುವೆ ನೆನುತೆನ್ನ ವನೀನಿನಗುಳ್ಳವನಃ ನಲ್ಲದಿನ್ನಾರೆನುತ್ತ ಭಾಗಮಂತನ್ನಮುಂದಿಗೆ ತೆಗದುಕೊಂಡುತಾಂಕಾಸಿಕುಡಲ್ವೇಡಿ ಪೊಸಸುಂಟಿಗೆಗೋಲನೊಂದಂಕಿಸಿಪೊಸಕಿಚ್ಚಂಪೊಸೆದುಪಟುವಂಪೊಡಿ॥

ಕಂ॥ ಕೆಂಪಿಂದಳದಿಂರಸದಿಂ। ಕಂಪಿಂಡಿಡಿದಿರ್ದ ಖಂಡಮಂಕಾಸಿಪೊದ॥ಳ್ದಿಂಪಿನ ಪಾಕಮನರಿವೊಲ। ನಿಂಪೊರ್ದೊಳಿಕ್ಕಿ ಕಣ್ಣಪಂತೆಗದಿಟ್ಟಂ॥ ೧೨೪॥

ಅಂತುತೆಗೆದಿಟ್ಟು॥

ಕಂ॥ ಪರಿಪಾಕವಾದಮಾಂಸೋ।ತ್ಕರಮನದಂಮುತ್ತ್ರದೆಲೆಯುಪತ್ರಳಿಯೊಳಗಿ। ಕ್ಕಿರದಾಗಳ್ಮುಂದಿಟ್ಟಾ। ದರದಿಂದೆ ಸ್ನವನೆಪಸಿದೆ ವುಣ್ಣೆನುತಿರ್ದಂ॥ ೧೨೪

ವ॥ ಅಂತಾಕಣ್ಣಪ್ಪಂ ನುಡಿವುತ್ತಿರಲ್ತಿರಿ ಕಾಲತ್ತಿ ನಾಥನದಂಕೈಕೊಂಡ ವ..ಳ್ಕಿಯಿಂ ತಾನಾರೋಗಿಸಿದಂತೆ ಮಾಡಿ,ಮುತ್ತಾತಂಕಾಣದಂತಾಮಿಷ ವಾಂತನ್ನ ಪಿಶಾಚತತಿಗೀವುತ್ತಿರ್ದನಂತುಮಲ್ಲದೆಯುಂ॥

ಕಂ। ಆತನಕಡುನೇಹಮನಂ। ತಾತನ ಘನಭಕ್ತಿರಸ ಮನಾತನಗುಣಮಂ। ಪ್ರೀತಿವಿಗಲ್ಕಾ ರೋಗಿಸಿ। ಭೂತೇಶಂತಣಿದು ಪಾರ್ಶ್ವದಿಂದಿರ್ಪಗಳ್॥ ೧೨೫

ಕಡುಗಲಿ ಕಣ್ಣಪ್ಪಂ ಕಂ। ಡಡವಿಯೊಳುಪವಾಸವಿನಿತು ದಿನಮಿರ್ದದಕಂ। ಓಡವಾಡೆ ಮುನ್ನಪನೆ ನಿ। ನ್ನೊಡಲಂ ಸಾಗಿಸುವೆನಂಜದಿರ್ನೆನೆಂದಂ॥ ೨೦೬

ಧುರಗಲಿ ಕಣ್ಣಪ್ಪಂ ಪುರ। ಹರನಂ ಬಿಡಲಾರದೀಕ್ಷಿಸುತ್ತಿರಲಿತ್ತಲ್ತರಣಿಯು ಪರಾಬ್ಧಿಗಳಿದಂ। ಪಿರಿದುಂ ತಮಮುರ್ಬಿ ಕೊರ್ಬಿನಬಿ..ತ್ತಾಗಳ್॥ ೧೨೭

ವ॥ ಅಂತಿರ್ದ ಕತ್ತಲೆಯೊಳಾ.. ಮುನ್ನಪನೀಕತ್ತಲೆ ಯೊಳೆಂತಿರ್ಪ

ನೆಂದು ತಾಂಪೊರಮಟ್ಟು ಶುಷ್ಕಮಪ್ಪಕಾಷ್ಠಂಗಳಂತಂದು ಪೊತ್ತಿಸ್ಕಿ ಬೆಳಕಂಮಾಡಿ ಕಾಸುತೆನ್ನವನೇ ಸುಖವಶದಿಂ ನಿದ್ದೆಗೆಯ್ವುದೆನುತಂ ಪೊರಗನಾರಯ್ದು ಸುತ್ತಲೊರಲುತ್ತಿರ್ಪ ವೃಕಸೃಗಾಲಂಗಳ ನೆಬ್ಬಟ್ಟವುಲಿವ ಶಕುನಿಗಳಂಕ್ಕೈಚಪ್ಪಳೆಯಿಂ ಸೋಂದುಬಂದಾ ಮಗುಳ್ದು ಬಂದುಪತ್ತಿರೆ ಕುಳ್ಳಿರ್ದು ಜಾಗರಮಂ ಮಾಡುತ್ತಿರಲಿತ್ತಲ್॥

ಕಂ॥ ಕಲಿಕಣ್ಣಪ್ಪನದೋಷಂ। ತೊಲಗುವವೋಲ್ ತಿಮಿರಮೋಡಿ ಪುಣ್ಯದಪುಂಜಂ। ತಲೆದೋರಿತ್ತೆನಲುದಯಾಚಳ ಶಿಖರದೊಳುದಯಿಸಿತ್ತು ದಿನಕರಬಿಂಬಂ॥ ೧೦೮॥

ವ॥ ಅಂತುದಿನಕರೋದಯ ಕಾಲದೊಳ್ಕಣ್ಣಪ್ಪಂ ತಾಂಮುನ್ನೆದ್ದು ಕೈಮುಗಿದು ನಿರ್ರೈತಿಳಿಯಲ್ಕೆ ತಂದೆಹಸಿದೆಯೆನ್ನವನೆ ಪೊಸಮೃಗದ ಮಾಂಸಮಂ ತಂದೀಗಳಿಕ್ಕುವೆ ನಿನ್ನಾಣೆತಡವಿಲ್ಲದೆಬಂದಪೆ ನೆನುತ್ತಂ ಮುಂಡಾಡಿಬಿಗಿಯಪ್ಪಿಬಲವಂಧಗಲಲಾರದೆತಿರಿತಿರಿಗಿಬಂದುಬಂದುನೋಡಿನೋಡಿ ಬಳಿಕೇಂತಕ್ಕಾತಿರಿ ಕಲ್ಲತ್ತಿನಾಥನಂಬೀಳ್ಕೊಂಡುಪೊರಮಡಲಿತ್ತಲ್॥

ವ॥ ನೊಸಲೊಳಾಂತ್ತಿಲ್ದ ವಿಭೂತಿಕಂಧರ ದೊಳೊಪ್ಪಂಬೆತ್ತ ರುದ್ರಾಕ್ಷಿಗಳ್।ಪೊಸಪೂವಿಂದಿಡಿದಿರ್ಪಕಕ್ಷದಕರಂಡಂ ಕುಂಭದಗ್ರೋದ ಕಂಸ್ವಶಿರೋಭಾಗದೊಳೊಪ್ಪಿಸಪ್ರಿಯದಿನಂತಾಗಳ್‌ಶಿವಬ್ರಾಹ್ಮಣಂ ಕುಸುಮೊಸ್ತ್ರಾರಿಯ ಪೂಜೆಗದ್ರಿಯ ನಡರ್ದೆಯ್ತಂದ ನುತ್ಸಾಹದಿಂ॥

ಕಂ॥ ತಿರಿಕಾಲತ್ತ್ರೀಶನಮಂ। ದಿರಕೇಲ್ತಂಡಾಗಳಾಶಿವ ಬ್ರಾಹ್ಮಣನಾ।ಸುರದಪೊಲ ಸಿಡಿದಿರಲ್ಕೊ। ಕ್ಕರಿಸಿ ಮನಂ ಮರುಗಿ ಬೆರಗಿನೊಳ್ನಿಂದಿರ್ದಂ॥ ೧೭೦।

ಅಂತುನಿಂದಿರ್ದು॥

ಕರದಿಂಮೂಗಂಮುಚ್ಚಿ ।ತ್ತಿರದುಗುಳುತ್ತಕ್ಕಟೇಜುಗುಪ್ಸೆಯನಾವಂ। ಪರಪಿದನಿಂತೀ ಶಿವಮಂ।ದಿರದೊಳೆನುತ್ತ ಳಲಿಬಳಲಿದಂದ್ವಿಜನಾಗಳ್॥ ೧೭೧॥

ವ॥ ಅಂತುಕಡುಪೇಸಿದಾವ ಪಾಪಕರ್ಮನದೆಸೆಯಿಂದಾದುದೆನುತ್ತಾ ಶಿವಬ್ರಾಹ್ಮಣಂ ತಾಂತಂದಗ್ಘಣೆಯುಂ ಪುಷ್ಪಕರಂಡಮ ನೊಂದು ನಿರ್ಮಳಮಪ್ಪತಾವಿನಲ್ಲಿರಿಸಿ ಸಮ್ಮಾರ್ಜನಮಂತಂದ ದನ-ಡುಗಿಗೋಮ

ಿಯುದಿ ಸಾರಿಸಿಕನಲುತ್ತುಂನಗದ ನಿರ್ಝರೋದಕದೊಳ್ ಪೊಕ್ಕುಸು ಚೇಲಸನ್ನನಂಪೊಡಿ ಧೌತಾಂಬರಮನುಟ್ಟುವಿ ಭೂತಿರುದ್ರಾಕ್ಷಿಗಳಂ ತಾಳ್ದುಮುಗುಳ್ದು ಬಂದುದೇವಾಲಯಮುಮಂ ಪೊಕ್ಕಿಂತುವೊಳ್ಪರೆದೇವಾ ಯೆಂದುನೋಡುತ್ತುಂತಾಂ ತಂದಗ್ಘವಣಿಯಂ ತಿರಿಕಾಲತ್ತಿನಾಥಂಗೆಮ ಜ್ಜನಕ್ಕೆರೆದುರುದ್ರಸೂಕ್ತಮಂಜಪಿಸುತ್ತುಂಹಲವುಪತ್ರಪುಷ್ಪಂಗಳಿಂಪೂ ಜೆಯುಂಮಾಡಿ ಬಹುಳಧೂಪಮಂತಂದಿಕ್ಕಿ ಮಂಗಳಾರತಿಯನೆತ್ತಿ ನೈ ವೇದ್ಯಮುಂ ಸಮರ್ಪಿಸಿ ನಾನಾವಿಧಥಿಂಪೊಗಳ್ದಿ ಎಲೆದೇವಇನ್ನಾದುರಾ ಚಾರಿಯುಂ ಪೊಗಲೀಯದಿರ್ದಂಪೆ ಎಂದುಬೇಡಿಕೊಂಡುದಂಡಪ್ರಣಾ ಮಮುಮಂಪೂ ಡಿಕೈಮುಗಿದುಬೀಳ್ಕೊಂ ಡುತಚ್ಛಿವಾಲಯುದಕವಾಟಂಗ ಳನಿಕ್ಕಿ ತೆರೆಯುದಂತೆ ಸಂಕಲೆಯಂಪೂಡಿ ಬಿಯಗಮನಿಕ್ಕಿ ನಿಜಪುರ ಕ್ಕೆಪೋಗಲಿತ್ತಲ್॥

ಕಂ॥ ತಳುವಿದೊಡೆನ್ನವನುರೆಪಸಿ। ಬಳಲ್ವನೆನುತ್ತಿರದೆಪರಿದುಕಣ್ಣ
ಪ್ಪಂಜೆಳ್ವಳವುಳ್ಳ ಮೃಗಮನಾವನ।ದೊಳಗರಿಸಿದನಧಿಕತರದವೋಹ
ದೊಳಾಗಲ್॥ ೧೪೭॥

ಮಿಗೆತಿರುಗುತೆ ನ್ನವನಪ್ರೋ।ಟ್ಟೆಗೆಪೊಲ್ಲಂ ರೋಗದಿಂದೆ ಬಡವಾಗಿ
ರ್ಪಾ। ಮೃಗಮನುಳಿಯುತ್ತೆ ಕೊಬ್ಬಿದ। ಮೃಗವೊಂದಂ ಕಂಡು
ಕಣ್ಣಪಂಕವಿದೆಚ್ಚಂ॥

ಶರಹತಿಯಿಂದಾಮೃಗವಿಳೆ। ಗುರುಳದಮುನ್ನಿರದೆ ಪರಿದುಮೆಲ್ಲಿಂ ಪಿಡಿ
ದಾ। ಸುರದಿಂಬಿರ್ಚಿದಮೊಂಸೋ। ತ್ಕರಮನದಂಕಾಸಿ ಮಾಸಲಾಗಿ
ರೆತಳೆದಂ॥ ೧೪೮॥

ವ॥ ಅಂತುಮಾಸಲಾಗಿ ಬಾಸಣಿಸಿದ ಮಾಂಸಮುಂ ಕರತಳದೊಳ್ತಳೆ ದು ತಿರುಗಿಬರುತಂತನ್ನಮನದೊಳಿಂತೆಂದಂ।

ಕಂ॥ ಪಸಿವೆನ್ನವನೆನ್ನುಮನು। ಬ್ಬಸದಿಂದರಸುತ್ತ ಮಿರ್ಪ ನೀ
ಕಪಿಗಳ್ಬಂ। ಕಿಸಲಂಜುವನೋ ತಾನೆನು। ತಸುಪಿನೊಳುರೆ ಮರು
ಗಿಬಂದನಾಕಣ್ಣಪ್ಪಂ। ೧೪೯॥

ವ॥ ಅಂತೇಳ್ತಂದು ಬಾಗಿಲಿಕ್ಕಿರೆನೋಡಿ ಯೆನ್ನವನೇಕದವುಮಂ ತೆರೆಯೆಂಬ ಕಣ್ಣಪ್ಪನನುಡಿಗೆ ಶಿವನೋತುಬಿಯ್ಯಗಸಂಕಲೆಗಳ್ಪಣ ಖಣಯೆನುತ್ತುಂ ಪರಿದುಬೀಳ್ಕಿಕ್ಕ ... ಲ್ವಲಪೊಕು

ಪೊಡಮಟ್ಟೆರ್ಬರ್ನೆ ಯಿರ್ದೆತಂದೆಎಂದು ಮನದೊಳನುನಯಿಸುತ್ತಂ ರಂಗಮಂಟಪದೊಳ್ನಿಂದಿರ್ದು||

ಕಂ|| ಅರಲಂತೀವಿದ ಕರಡಿಗೆ| ಶಿರದಗ್ರಂತುಂ ಬಿದಗ್ಧವಣಿಕಳ ಸಂಬಾರ್|ವರನೈವೇದ್ಯದ ಪಾತ್ರಂ| ಕರವಾಗಲ್ಕಂಣ ಪಯ್ಯನೊಪ್ಪಿದ ನಾಗಳ್|| ೧೪೬|

ಅಂತೀಪರಿಯೊಳೊಪ್ಪುತ್ತಂ ಕಣ್ಣಪ್ಪಂ ಸಮೀಪಕ್ಕೇಳ್ತಂದುಮಹಾ ಭಕ್ತಿಯಿಂ ನಿಜಪಾದಪಲ್ಲವದಿಂ ಮುಂಪಾಡಿರ್ದ ಪೂಜೆಯಂ ವಿಸರ್ಜಿಸಿ ತಿರಿಕಾಲತ್ತಿನಾಥಂಗೆ ತನ್ನಮುಖಕಳಸದಗ್ಘಣಿಯಂಮಜ್ಜನಕ್ಕೆರದು ಮಸ್ತಕವೆಂಬಕರಡಿಗೆಯೊಳಿರ್ದ ಪರಿಮಳಪುಷ್ಪಂಗಳಂ ಪೂಜೆಯುಂಮಾಡಿ ಕರತಳವೆಂಬ ಪರಿಯಣದೊಳಿರ್ದ ಪೊಸಮಾಂಸಮಂ ನೈವೇದ್ಯಮಂ ಸಮರ್ಪಿಸಿ ಮನೋಭಾವದಿಂದುಣ್ಣೈತಂದೆ ಪಸಿದೈಯೆನ್ನಪಾಪಕರ್ಮನದೆಸೆಯಿಂಪೊತ್ತುಪೋದುದೀಯಪರಾಧಮಂ ನೋಡದೆಕೈಕೊಂಬುದೆಂದು ಕೈಗಳಿಂಮುಗಿದು ಬೇಡಿಕೊಳಲ್ಕಿತ್ತಲಾ ಶಂಕರಂ ಮುನ್ನಿನಂದದಿಂದುಂಡಂತೆ ತೋರಿಭೂತ ತತಿಗಿತ್ತು ತಣಿಪಲ್ ಶಿವನಾರೋಗಿಸದನೆಂದು ತಾಂಸಂತಸಂಬಟ್ಟು ಲಿಂಗಪ್ರಸಾದಮಂ ಸವಿದುಂಡು ಪರಮಾನಂದಮನೆಯ್ದಿ ಮನಮುಕ್ಕಿಕುಕಿಲಿರಿದಾಡಲ್ ಮನದಂದುಮುಂದೆನಿಂದಿರ್ದು||

ಕಂ| ನಲಿದುಮುಡುವಿಕ್ಕಿ ಗುಮ್ಮಡಿ| ಗೆಲವಂಪೆರ್ಗರಡಿಯುಂತೆಕುಪ್ಪಿಕ್ಕಿಕರಂ| ಕೆಲನಂಕಣ್ಣಪ್ಪಂಮುಂ | ದಲೆದುರುಬಿಂದುಮ್ಮಸಾಲೆಯೆನುತಂ ಕೆಲವಂ|| ೧೪೭

ಪಿರಿದುಂ ಕೊಂಬುಕೊಳಲ್ಮಾ| ವರಿಗಳನುಣ್ಚರಮನಾಸ್ಯದೊಳ್ತೋರುತ್ತ| ಚ್ಚರಿಯಿಗೆ ಸೀಳುಕ್ಕಿಪೋದರ ದಣಿಕೆದೊರ್ಂದೆಕಾಲೊಳಾಡುತ್ತಿರ್ದಂ|| ೧೪೮

ಶಾ| ಕೂಗುತ್ತಾರ್ದಲಗೆತ್ತಿನರ್ತಿಸುತೊರಲ್ದಾನಂದದಿಂ ಪಾಡುತಂ| ಬೀಗುತ್ತಂ ತೊನೆದಾಡುತಂ ತಡತಡಂ ಬೋಗುತ್ತೆಪಿಮ್ಮೆಟ್ಟುತಂ| ತೇಗುತ್ತಂ ಮರೆದುಬ್ಬಿಬೊಬ್ಬಿರಿವು ತಂಬೆಂಡಾಗಿಬಂದೀಕನಂರಾಗಂಕೈಯಿಗಲಪ್ಪುತಂಪರವಶಂಬೆತ್ತಿರ್ದನಾಕಣ್ಣಪಂ ೧೪೯

ವ| ಅಂತುಚಂದಚಂದದ ಬೇಟರಾಗಂಗಳಂತೋರಿ||

ಬೆಳಗಪನ್ನೆವರಂ ಜಾಗರಮುಂಮಾಡಿಯೆನ್ನೊಡೆಯನೆ ಪೊತ್ತುಪೋಕ ಪ್ಪುದು ನಾಂಬೇಂಟೆಯಾಡಲ್ಪೋಗಿ ಬೇಗಂಬರ್ಪೆನಾಂ ತಳುವಿದೆನಾ ದೊಡೆ ನಿನ್ನಾಣೆಯೆನುತ್ತಂ ಬಿಡಲಾರದೆ ಸುಯ್ದು ನ್ನ ಮುಬ್ಬೆಗದಿಂ ಪೊ ರಮಟ್ಟು ಕಣ್ಣಪಂಪೋಗಲಿತ್ತಲ್।

ಕಂ॥ ಕರಡಿಗೆಯುನಗ್ಗವಣಿಯನಾ। ದರದಿಂತಾಳ್ದಾಗಲಾ ಶಿವಬ್ರಾಹ್ಮ ಣನಾ।ಗಿರಿವರನನೇರಿನಲವಿಂ। ತಿರಿಕಾಲತ್ತೀಶಮಂದಿರಕ್ಕೇಲ್ತಂದಂ॥ ೧೪೦

ವ॥ ಅಂತೇಲ್ತಂದಾದ್ವಿಜಂ ಶಿವನಿಳಯದ ಪೊರಗೆನಿಂದಿರ್ದು ನೋಳ್ಪಲ್ಲಿ ಮುನ್ನಿನಿಂದಧಿಕಮಾಗಿ ಕೊಕ್ಕರಿಕೆಗಿಕ್ಕೆಯಾದ ಮಾಂಸಾಸ್ಥಿ ಶಕಲಂಗ ಳ್ಪರಡಿರೆ ಪೇಸಿಸಿಡಿ ವಿಡಿಗೊಳುತ್ತಂದೊಳ ಯಿಂಕೆಪೋಗದೆತಿರಿಕಾಲ ತ್ತಿನಾಥನೀಂ ಪೇಸಿಗೆಯರಾಶಿಗಳಂ ಸೈರಿಸಿಪ್ಪರೆಮತ್ತ ಮಾದುರಾಚಾರಿ ಯನಿಲ್ಲಿಪುಗಿಸುವರೆದೇವಾ ಎನುತ್ತಂಕಡು ಕೋಪದಿಂಡಿಂತೆಂದಂ॥

ಕಂ॥ ಇಂದು ಮೊದಲಾಗಿಯೀಪರಿ। ಯಿಂದಂಪೇಸಿಕೆಯೊಳಿರ್ದೆಯಾ ದೊಡೆಮತ್ತಾ। ನೆಂದುಂಬಾರೆಂಕ್ರೂರನು। ಳಿಂದನನಾ ನಿಲ್ಲಿಕೊಂದು ಬ ಳಿಕರ್ಚಿಸುವೆಂ॥ ೧೪೧

ವ॥ ಎಂದುಕೋಪಿಸುತ್ತಂ ಶಿವಬ್ರಾಹ್ಮಣಂ ಮುನ್ನಿನಪರಿಯಿಂಷ ಡುಸಮ್ಮಾರ್ಜನಂಗೆಯ್ದು ತಿರಿಕಾಲತ್ತಿನಾಥಂಗೆ ಪೂಜೆಯಂಮಾಡಿಪೊ ಡಮಟ್ಟು ಬೀಳ್ಕೊಂಡೆಲೆದೇವ ಮತ್ತಮಾವ್ಯಾಧನಂನಿನ್ನತ್ತಬಾರಪಂತೆ ಮಾಳ್ಪುದೆಂದು ನುಡಿವುತ್ತಂ ಕದಪುಗಳಂಬಲ್ಪಾಗಿಕ್ಕಿ ಪೋಗಲ್ಕಾಗಳ್।

ಕಂ॥ ಇತ್ತಗಿರಿಜಾತೆತಿರಿಕಾ। ಲತ್ತೀಶ್ವರನೊಡನೆ ನಗೆಯನೊಷರಿಸಿ ಮುದದಿಂ।ಮತ್ತಂಸರಸದಿಮುರುಳ್ಗಳ। ಪೊತ್ತದಪತಿಕೇಳೆನುತ್ತೆ ಬಂದಿಂ ತೆಂದಳ್॥ ೧೪೨

ಶ್ರುತಿಮತದಿಂ ವರಭಸಿತದಿ। ನತಿಶುಚಿತನದಿಂದ ಮುಷ್ಟಪಿಧದರ್ಚ ನೆಯಂಮತಿಮಾಡುವ ನಿವನೊಳ್ಪತಿ। ಗಳನೀಂಬಾಯ್ಮಿಡು ಕದಿರ್ಪುದ ನಗಿದುಚಿತ್ರಂ। ೧೪೪।

ಎಲೆದೇವನಿನ್ನಪೊಡೆಲಿನ ಛಲದಬೆಡಂಗಿನಂತಿದೆನಗೆತಿಳಿಯದುನೋಡ। ಲ್ಕಿಳೆಗೆ ವಿರುದ್ಧಂಮಿಗೆನಿಂ। ನೊಲವೆನಗಚ್ಚರಿಯೆನುತ್ತ ಉಮೆಯಿಂ ತೆಂದಳ್।

ಪದಪಿಂಡಂಪೂಜೆಯನೊಪೆವುದು ಮುಕ್ಕುಲನೀರಿನಿಂದೆ ಮಜ್ಜನ

ಮಂವಾಳ್ಪುದು ಮುಡಿಯುರಲೆಂದರ್ಚಿಸು| ವುದಮಾಂಸದ ಬೋನವಿ
ದೀವುದುಮಪೂರ್ವಂ| ೧೪೫|
ಎಂದುಮತ್ತಮಿಂತೆಂದಳ್|
ಭವನಿನ್ನನೆನ್ನವನೆಯಿ| ನ್ನವನೇನೆನುತಿರ್ಪನ್ ಕಣ್ಣಪನನುಡಿಯುದು
ಮಂ ತ್ರಯೋಜನವೋ ಎನಲುಮಂಗಾ| ಶಿವನಾಗಳ್ಸರಸದಿಂ ದನೆಗು
ಶಿಂತೆಂದಂ|| ೧೪೬
ಚಂ|| ಶ್ರುತಿಗಳಮಾರ್ಗವೊಂದು ನಡೆಯೊಂದು ವಿಭೂತಿಯನಿಟ್ಟ
ವೇಷದುನ್ನತಿಕೆಯುದೊಂದು ಕಲ್ಮಷದಚಿತ್ತಮದೊಂದು ಮಹಾಗ
ಮೋಕ್ತಿಯಿಂ| ತುರೆಮಿಗೆಕೊಡುವ ಷ್ಟವಿಧಾರ್ಚನೆಯೊಂದು ಮಭಾ
ವಮೊಂದುಸಂ| ತಸವೆಸೆವುತ್ತೆ ನಾಡೆಹೊರಹಜ್ಜದ ಭಕ್ತಿಯೊಳರ್ಪ
ನಾದ್ವಿಜಂ|| ೧೪೭
ಕಂ|| ನೆರೆಸಹಜಭಕ್ತಿಯಿಲ್ಲದೆ| ಬರುಭಸಿತಕೆ ಬರುಜಪಕ್ಕೆ ಬರುಮಂ
ತ್ರಕ್ಕಂ| ಬರುಪೂಜೆಗೆ ಬರುಘಂಟೆಗೆ ಬರಿದಾನೊಲ್ವವನೆಗಿರಿಜೆಗೆಂದಂ
ಗಿರಿಶಂ|| ೧೪೮
ವ|| ಎಂದಾಗಿರಿಶಂಡಂ ಭಕ್ತದ್ವಿಜನಂ ನಿರಾಕರಿಸಿಮತ್ತಮಿಂತೆಂದಂ
ಕಂ| ಮನೆಯುಂನಿಜವಲ್ಲಭೆಯುಂ ವನಚರನಿಕರಮು ನೆಪೆರದುಬಿಟ್ಟೆ
ನ್ನಂನೆ| ಟ್ಟನೆಮೆಚ್ಚಿಪ್ಪ ನಿರುಳ್ಪಗ| ಲೆನುತೆ ಭವಂಕಣ್ಣಪಯ್ಯನೊಳ್ಪಂ
ಪೇಳ್ದಂ|| ೧೪೯|
ಪಿರಿದುಂ ನಲವುಳ್ಳಂಗನೆ| ಚರಣದಿನೊದೆದೆಲವೊ ಬಾರೆನುತ್ತಂಜಲ
ನಾ| ದರದಿಂದಿಕ್ಕಲು ಮುದಮಂ| ಕುರಿಪಂತಿರಲಿನಗೆ ಕಣ್ಣಪಯ್ಯನೆ
ಮೇಳಂ|| ೧೫೦
ಪಿರಿಕೊಡವನೆ ನಗತ್ತ್ಯಾ| ಸುರದಿಂದರ್ಚಿಸುವನೆನ್ನ ಮಾಯೆಯೆಬಿಡೆ
ದಂ| ತಿರುತುಂಬಿಗುರ್ಪುಸಾದ್ರುದು| ಗಿರಿಸುತೆಕೇಳೆಂದುತಿಳಪಿದಂ
ಪುರಮಥನಂ|| ೧೫೧
ವ| ಅಂತೆನುತ್ತಮದುಕಾರಣಂಕೇಳ್ದೆವಿಮದ್ಭಕ್ತಿ ಪಿಡಿದಿರ್ಪ ಕಣ್ಣ
ಪಯ್ಯಂಗನಾಚಾರಮೆಂಬುದಿಲ್ಲಮವನಮುಕ್ಕುಳಿನೀರನಗೆಗಂಗೋ
ದಕಂ ಅವನಮುಡಿಯಲರಪೂಜೆಯೆನಗೆ ಪಾರಿಜಾತಕುಸುಮದರ್ಚ
ನೆ ಯವನರ್ಪಿಸುವ ಮಾಂಸದನ್ನೈವೇದ್ಯಮೆನಗೆ ದಿವ್ಯರಸಾನ್ನ ಮ

ವನೊಳವಿಂದೆ ನವನೆಯೆನ್ನವನೆ ಯೆನ್ನವನೆಯೆಂಬ ನುಡಿಯೆನಗೆ ಪಂಚಾಕ್ಷರಿಯ ಮಂತ್ರಮವನ ಹೊರಗೆ ಕಲ್ಮಷಂ ತೋರ್ಪುದವನ ಮನದೊಳಗಮೃತ ವಾಗಿರ್ಪುದದು ಕಾರಣ ಮವನ ಭಕ್ತಿಭಾವಕ್ಕೊಲ್ದು ಮೆಚ್ಚಿಪ್ಪೆಂ ಮತ್ತಂ ನೀಂ ಪೋಗಿ ಶಿವಬ್ರಹ್ಮಣನ ನಾಂ ಪೋಗ್ಯ ಕಣ್ಣಪ್ಪಯ್ಯನ ಭಕ್ತಿಯ ನೆರವಣಿಗೆಯ ಸೀಕ್ಷಣಂ ತೋರ್ಪೆಂ ಸೃರಿಸೆನುತ್ತೀಳನೆಯ ದಿವಸದೊಳ್ಕಪಟನಾಟಕ ಸೂತ್ರಧಾರಿಯಪ್ಪೀಶನಂ ದುಪಾಯಮಂ ನೆಗಳವಪ್ಪಗಳ್॥

ಕಂ॥ ಎರಪಿನಸುಗಿಯ ನೊಂದಂ। ಭರದಿಂದಂ ತಂದು ಪಿಡಿದುಕೊಂಡಾ ದ್ವಿಜನಾ। ಸುರದಿಂ ಕೊಲಲೇಂ ತದ್ವನ। ಚರನನೆನುತ್ತಿ ಭುವನಕಿರದೇಳ್ತಂದಂ॥ ೧೫೩

ವ॥ ಅಂತೇಳ್ತಂದು ತಿರಿಕಾಲತ್ತಿನಾಥ ನಿಳಯಮಂ ಪೊಕ್ಕನೋಳಪ್ಪಗಳ್॥

ಚಂ॥ ಸುರುಚಿರಲಿಂಗಮಧ್ಯದೊಳಗಕ್ಷಿಯುಗಂ ಪೊರಪೊಣ್ಮಿತೋರುತಂ। ತೆರಡರೊಳೊಂದು ಕಣ್ಣೊಡೆದು ರಕ್ತಜಲಂ ಸುರಿವುತ್ತಿರಲ್ಕೆ ಕಂಡೆರಡೆನವಸ್ಥೆವಾಯ ಎನುತಳ್ಕಿದು ಭೂಪತಿಗಳ್ಗೆ ಪೇಲ್ಲಿಯಂ। ನಿರುತದಿನಾಳ್ಪುದೆಂದೆನುತಲಾ ದ್ವಿಜನೆಂಬುತ ಪೋದನಲ್ಕರಿಂ॥ ೧೫೪

ವ॥ ಅಂತು ದ್ವಿಜಂ ತಾನಿರ್ದಪುರಕ್ಕೆ ಪೋಗಿ ತದ್ವೃತ್ತಾಂತಮನರಿಪಲ್ಕಾಪುರಜನಮೆಲ್ಲಂ ಬಂದು ನೋಡಿ ಮಹಾಭಯಮಂ ಗೊಂಡು ಲಿಂಗದೊಳಗೀಪರಿಯಪ್ಪುದೆಂಬುದುತ್ಪಾತಮೆನುತ್ತಂ ನೋಡಲಮ್ಮದೆ ಜನಮೆಲ್ಲಂ ತಿರಿಗಿಪೋಗಲಿತ್ತಲ್॥

ಕಂ॥ ವನದೊಳಗೆ ತಿರುಗಿ ಬೇಂಟೆಯನನುನಯದಿಂದಾಡಿ ಮೃಗದ ಮಾಂಸಸಮೇತಂ। ಘನಬಳ ಕಣ್ಣಪ್ಪಂ ಭೋಂ। ಕನೆ ಮಗುಳ್ದು ಶಿವಾಲಯಕ್ಕೆ ನಡೆತರುತಿರ್ದಂ॥ ೧೫೫

ವ॥ ಅಂತು ನಡೆತರ್ಪಾಗಳೆಡದ ಕಣ್ಕೆತ್ತ। ಲಿದರಿಂದೇನಪ್ಪುದೋ ಮನಂ ಮರುಗುತಿರ್ದಪ್ಪುದೆನ್ನವನೇನಾಗಿರ್ದಪನೋ ಎನುತ್ತಂ ತಿರಿಕಾಲತ್ತಿನಾಥನಿಳಯಮಂ ಪೊಕ್ಕು ಪೊಡಮಟ್ಟು ನಿಂದಿರ್ದುನೋಳ್ಪಾಗಳ್॥

ಕಂ॥ ಪರಿಕಿಸಲಾಲಿಂಗದ ಕ। ಣ್ಣೆರಡರೊಳೊಂದೊಡೆದು ರಕ್ತಜಲಮದು ಸುರಿವುತ್ತಿರೆ ಕಂಡು ಕಣ್ಣಪಂ ಬಿಲ್ಲರಳಂ ಪಿಶಿತಮನೆ ಬಿಸುಟು ಸ್ಮ

ವೆರಗಾದಂ॥ ೧೫೫

ಅಂತುಸ್ಮೈವೆರಗಾಗಿ॥

ಚಂ॥ ಪೊಡೆಗಡೆದುರ್ಬಿ ಯೊಳ್ಪೊರಳು ಸುಯ್ವುತಲಿನ್ನವ ನೊರ್ವ ತಿರ್ಪ ಕ। ಣ್ಣೊಡೆದುದು ಬೆಂದೆನಕ್ಕಟಕಟಾಯೆನುತಂ ಮರುಗುತ್ತನಾಡೆ ಬಾ। ಯ್ಬಿಡುತಲಿ ತಂದೆನೊಂದೆ ಯೆನುತೋವುತೆ ಪತ್ತಿರಸಾರ್ದು ರಕ್ತಮಂ। ತೊಡೆದತಿದುಃಖವಾರ್ಧಿಯೊಳ್ ಮುಳ್ಕಿದನಳ್ಕಿದನಂದು ಕಣ್ಣಪಂ॥ ೧೫೬

ಕಂ॥ ಪೊರೆಯಿಂದಾನಗಲ್ದಿನಿತರೊ। ಳರದೋಳ್ಪೋಕ್ಕ ಚಿನ್ನತನ್ನಯುಕೋಡಿಂ। ದೊರಕಲ್ಕಣ್ಣೊಡೆಯಿತ್ತಿದು। ನಿ[illegible]ಕರದಿನೊರಸುತ್ತಿರ್ದಂ॥ ೧೫೭

ವ॥ ಅಂತು ಕರತಳದಿನಡಿಗಡಿಗೊರಸಿನೋಡಿಪಿರಿದಳಲುತ್ತುಮೌಷಧಿಯುಮಂಕಂಡೆನೆನುತ್ತಾಗಳ್॥

ಕಂ॥ ಪರಿಕಿಪೊಡೀಕಣ್ಣಿಂಗಾ। ದರದಿಂದೆನ್ನಕ್ಷಿಯಿಟ್ಟೊಡಾಗದೆಯಂಮು। ಚ್ಚೆರವೀವೆ ನೆನುತಪೊಳ್ಪಿಂ। ಧುರಗಲಿ ಕಣ್ಣಪ್ಪನಾದ್ರ್ದಸರಳಂಸೆಳೆದಂ॥ ೧೫೮

ಅಂತುಸರಳಂಸೆಳೆದು॥

ಚಂ॥ ಪಿರಿದ ಬಬೆಂಡೆನುತ್ತ ಪುಟವೆರ್ದಧಟಿಂನಿಶಿತಾಸ್ತ್ರದಿಂದವಿಾಂ।ಟರದನಿಜಾಕ್ಷಿಯಂ ತೆಗೆದುತಚ್ಛಿವಲಿಂಗದಭಿನ್ನನೇತ್ರದೊಳ್ ತ್ವರಿತದಿನಿಕ್ಕಿನೋಡಲಳವಟ್ಟು ಕರಂಪೊಳೆಯತ್ತು ಲೊಪ್ಪಲ। ಚ್ಚರಿಮಿಗೆವುಚ್ಚಿಸಂತಸಮುನೆಯ್ದಿದನಾಶಬರೇಶ ಕಣ್ಣಪಂ॥ ೧೫೯

ಕಂ॥ ಅಂತಾಕಲಿಕಣ್ಣಪ್ಪಂ। ಸಂತೋಷಮನೆಯ್ದುತಿರ್ಪ ಸಮಯದೊಳಾಗಳ್। ಕಂತುಹರನಿರ್ದ ಕಣ್ಣ್ಣೊಡೆ। ದಂತಿರೆ ತೋರಲ್ಕೆ ಖಡಖಡಂಮಿಗೆನಕ್ಕಂ॥ ೧೬೦

ಅಂತುನಗುತ್ತಿಂತೆಂದಂ॥

ಮ॥ಸ್ರ॥ ಇದಕಿನ್ನಾನಂಜೆನಂಜೆಂಪರಿಕಿಪೊಡೆ ನಗಿನ್ನೊಂದುಕಣ್ಣುಂಟುನೀಂಮು। ತ್ತದಕಂನೀನುಂಟು ಕೇಳೆನ್ನವನೆ ಯೆನ್ನವನೆ ಯೆನುತಾತ್ಮಂಘ್ರಿಯುಂಗುಷ್ಠಮಂತ। ಪ್ಪದವೋಲ್ತ ಭಿನ್ನನೇತ್ರಾಂತದೊಳಿರಿಸಿನಿಜಾಸ್ತ್ರದಿಂ ತನ್ನಕಣ್ಣಂ ಪದಪಿಂವಿಾಂಟಲ್ಕೆ ಕಣ್ಣಪ್ಪನನುರಪಿಡಿ

ದೊಲ್ದಪ್ಪಿದಂಚಂದ್ರಚೂಡಂ॥ ೧೬೦
ವ॥ ಅಂತುತಿರಿಕಾಲತ್ತಿನಾಥಂತದ್ಭಕ್ತಿಗೆ ಮೆಚ್ಚಿ ಕಣ್ಣಪ್ಪನನಪ್ಪಿಕೊ
ಡಿರ್ಪುತ್ತಾಗಲ್॥
ಕಂ॥ ಸುರದುಂದುಭಿನೆರೆವೊಳಗಲ್। ಸುರಭೂರುಹಕುಸುಮವೃಷ್ಟಿ
ಭೋರನೆಸುರಿಯಲ್। ಸುರಸತಿಯರ್ನರ್ತಿಸಿದಾಡಲ್। ಸುರಪತಿನುತ
ಶಂಭುತೋರಿದಂನಿಜರೂಪಂ॥ ೧೬೧
ನದಿಶಶಿಶಿಖಿಫಣಿಗಣ್ಣಿಂ ಸದಮಳಭಸಿತಂಗಜಾಜಿನಂಮೆರೆಯಲ್ಕ
ಪ್ಪಿದನಗಜೆವೆರಸು ದಶಭುಜ। ದೊದವಿಂಪಂಚಾಸ್ಯದಿಂ ಮಹೇಶ್ವರನಾ
ಗಳ್॥ ೧೬೨
ಪುರಹರನದಿವ್ಯರೂಪಂ। ಪರಮಸುಖಂಬೆತ್ತು ನೋಡಿಪರವಶದಿಂ
ಚರಣಾಂಬುಜದೊಳ್ಪೊರಳು। ತ್ತಿರುತಿರ್ದಂ ಭಕ್ತಿಭಾವದಿಂಕಣ್ಣ
ಪ್ಪಂ ೧೬೩
ವ॥ ಅಂತುತನ್ನಡಿಗೆರಗಿರ್ದ ಕಣ್ಣಪ್ಪನಂಪಿಡಿದೆತ್ತಿ ಮೆಯ್ದಡವಿ ಬೋ
ಳೈಸಿ ನಂದೀಶವೀರಭದ್ರಾದಿಪ್ರಮಥಗಣಂಗಳ್ಕೇಳುತ್ತಿರಲ್ಗಿರಿಜಾತೆಗಾ
ತಿರಿಕಾಲತ್ತಿನಾಥನಿಂತೆಂದಂ॥
ಕಂ॥ ಕಂಡಾಗಿರಿಸುತೆಧರಣೀ। ಮಂಡಲದೊಳಗಿವನ ಭಕ್ತಿಗೇಂದೊ
ಭೊರೆನುತಂ ಕೊಂಡಾಡಿಪೊಗಳ್ದನಾಥಣೆ। ಕೊಂಡಲನೊಲವಿಂದೆ ಕಣ್ಣಪ
ಯ್ಯನನಾಗಲ್॥ ೧೬೪
ವ॥ಅಂತುಪೊಗಳುತ್ತೆಮತ್ತಮಾಶಿವನಿಂತೆಂದಂ॥
ಕಂ॥ ಗಿರಿಸುತೆಕೇಳೆಲ್ಲರ್ಗಂ। ನೆರೆದಕ್ಷಿಯನಿತ್ತವೆನೆನಗೆ ಕಣ್ಗೊಳ್ಪಂ
ಪಿರಿದೆನ್ನಯಕಣ್ಣಪ್ಪಂ ಧರೆಯೊಳ್ಕಣ್ಣಪ್ಪನೆಂದ ಪೊಗಳ್ದನ ಮೇಶಂ॥
ಎಂದುಮೇಶಂಕಣ್ಣಪ್ಪನಂ ಪೊಗಳುತ್ತಿರ್ಪಾಗಳ್!
ಕಂ॥ ಘನವೀರಭಕ್ತಕಣ್ಣಪ್ಪನ ನೀಕ್ಷಿಸಲೆಂದು ಧರಣಿಗಿನಬಿಜ
ಭೋಂ। ಕನೆಬಂದುದೆಂಬ ಪೋಲ್ನೊತನರತ್ನವಿಮಾನವಿರಪಬಂದ
ತ್ತಾಗಳ್॥
ವ॥ ಅಂತುಬಂದದಿವ್ಯಪುಷ್ಪಕಮಂ ಸದಾಶಿವಂನೋಡಿ ಮನಪೊಸೆದ
ಲಿಕಣ್ಣಪ್ಪನೀಂಪುಗುವುದೆಂದುನಿರೂಪಿಸಲ್ಕಾತಂಪೊಡಮಟ್ಟುಕೈಮು
ಗಿದು

ಕಂ|| ಒದವಿದಕಾಗರ್ಾಲದವೋಲ್ ಘೆದೊಳಿಸೆವೆಳಮಿಂಚಿನಂತೆದಂತ
ಪ್ರಭೆಯಾ| ಸ್ಯದಿನುಣ್ಮಿಪಸರಿಸುತ್ತಿರೆ| ಮುದದಿಂಕಣ್ಣಪ್ಪನಾಶಿವಂಗಿಂ
ತೆಂದಂ|| ೧೬೮

ಹರನಿನ್ನಂಪೂಜಿಸಿದೀ| ಶರೀರವಂದಿಳೆಯುಳ್ಳಿಮೆರೆಯುಲಿನ್ನೊಂದುಕಳೇ
ವರವಿತ್ತೆನ್ನನು ನೊಯ್ಯುವುದು| ವರಕಳಧೌತಾದ್ರಿಗೆಂದನಾಕಣ್ಣ
ಪ್ಪಂ|| ೧೬೯

ಎನೆಕೇಳ್ದಭವಂಕಣ್ಣ| ಪ್ಪನಮುನ್ನಿನತನುವನವನಿಯ ಳ್ಳಿರಿಸಿ ಮಹಾ
ಘನ ದೇಹಮನೊಂದಂ ಕೊಟ್ಟನನಯುದಿಂದೇರಪುಷ್ಪಕಮನೆನು
ತಿರ್ದಂ|| ೧೭೦

ವ|| ಅಂತುತಿರಿಕಾಲತ್ತಿ ನಾಥನಪ್ಪಶಿವಂ ನಿಬೂಮಿಸಲ್ಕಣ್ಣಪ್ಪಂಪರ
ಮಾನಂದದಿಂ ದಿವ್ಯಪುಷ್ಪಕದೊಳಿರಲ್ಕಾಗಳ್|

ಚಂ|| ಮಿಳಿರ್ವವೃಷಧ್ವಜಂ ಗಗನಮಂಡಲದೊಳ್ಪಾಳಿದಾಡೆ ದಿಕ್ಕ
ಟಂ| ಗಳನಮರಾನಕಪ್ರಜಮುಘಾಘ್ವನಿತೆಕ್ಕನೆತೀವೆಡೇವಸಂಕುಳಮ
ನುರಾಗದಿಂಪೊಗಳೆಕಣ್ಣಪನೇರಿದದಿವ್ಯಪುಷ್ಪಕಂ| ಜೆಳಜೆಳಗುತ್ತ ಮು
ತ್ಸವದಿ ಬಂದುದುತಾರಗಿರೀಂದ್ರಕಳ್ಕೆಂ|| ೧೭೧|

ವ|| ಅಂತಾರಜತಾದ್ರಿಯಂ ಪೊಕ್ಕಗಣಾವಲ್ಲಭಂ ಕಣ್ಣಪ್ಪಂಬೆರಸಾನಿ
ಜಾಸ್ಥಾನಮಂಟಪದೊಳ್ವೀರ ಭದ್ರಾದಿಪ್ರಮಥಗಣಂಗಳ್ವೆರಸೊ
ಡ್ಡೋಲಗಂಗೊಟ್ಟುಕುಳ್ಳಿರ್ದಾಗಳ್|

ಕಂ|| ಕರುಣಾವಲೋಕನೀಶ್ವರ| ನಿರೀಕ್ಷಿಸಲ್ಭಕ್ತಭಾಜನಂ ಹಾರೈ
ಸು| ತ್ತಿರೆಕಣ್ಣಪ್ಪಂ ಗತ್ಯಾದರದಿಂ ಗಣಪದಮನಿತ್ತು ಶಿವಗಿಂತೆಂದಂ||

ವರಮುಖಕಳಸವಜಲದಿಂ| ಶಿರದಲರಿಂದನ್ನಪಿಶಿತದಿಂದೆನ್ನುಮನೀ
ಪರಿಯಿಂ ಭಕ್ತಿಯೊಳೊಲಿಸಿದ| ವರದಾಕಣ್ಣಪ್ಪನಲ್ಲದೆಂದಂ ಗಿರಿ
ಶಂ|| ೧೭೨

ವ|| ಅಂತಾಕಣ್ಣಪ್ಪನಭಕ್ತಿಯು ಮುಗ್ಧಭಾವಮುಂಸದಾಶಿವಂ ಭಕ್ತ
ಭಾಜನಂಮೆಚ್ಚಿಪೊಗುಳುತ್ತಮಿರ್ಪಾಗಳ್||

ಕಂ||ಸುರದನುಜಮನುಜಖೇಚರ ಗರುಡೋರಗಸಿದ್ಧಸಾಧ್ಯವಿದ್ಯಾಧ
ರಕಿಂ| ನರಗಂಧರ್ವಪ್ರಮುಖ, ರ್ಕರಸಭವಂಬೊರೆವುತಿರ್ದನಾಸ್ಥಾ
ನಿಕೆಯೊಳ್|| ೧೭೩

ಜನಿದಿರೆದ್ದು ರ್ವೋಗಿ ಕೈಗಳಂ ಮುಗಿದು ಶಿವೋಸ್ತು ಗ...ಬ್ಬಪೀಠಂಗ
ಳನಿಕ್ಕಿ ಕುಳ್ಳಿರಿಸಿಬಳಿಕಿಂತೆಂದಂ||

ಕಂ|| ಇರ್ಪುಳಿಲ್ಲಾ ಋಷಿಗಳ್ನೆರೆದಿಲ್ಲಿಗೆಬಂದಕಜ್ಜ ಮೊವುದೆನಲ್ಬ್ಯಕ| ಕತರ
ಕೋಪದಿನೆಲೆಭೂವರಕೇಳ್ನೆಮ್ಮ ಮಾರ್ಗ ಬಂದುದೊಂದುತ್ಪಾತಂ|| ೧೭

ವ|| ಅದೇನೆಂದುಬೆಸಗೊಳಲ್ಕೆಸವಣರಿಂತೆಂದರ್|

ಕಂ|| ಮುನಿಪುತ್ರನೆಂದಿವೊಪಲಾ| ದನೇಕಜೈನರನೆಕೊಂದಪಗೆಯು
ವ್ಮಾರ್ಗ್ಗಟ್ಟನೆಬಗೆಯುದೆಬಂದೂರಂ| ಘನಗರ್ವದಿವೊಕ್ಕು ಮಡದೊಳ್ಯ
ದನೆನೃಪತೀ| ೧೮|

ವ|| ಎಂದುಕೋಪಂಪುಟ್ಟನಂತೆ ದೂರಲ್ ಕೇಳ್ದು ಪಾಂಡ್ಯರಾಜಂವಿ
ಚಾರಪಂಕೊಂಡು ನಮ್ಮಮಾರ್ಗಬಂದಿರ್ದ ಪಿಳ್ಳೆನಾಯಿನಾರ| ನೇಳ್ವ
ಋಷಗಳಿಶುಗಡ ಸಮಸ್ತದರ್ಶನಂಗಳಂ ತರ್ಕಧೊಳ್ಗೆಲ್ವಂಗಡ| ಮ
ಕ್ರಮಾಶ್ವರನಾಸ್ತಾಬಲದಿಂದಿರ್ಪಂಗಡ| ನೀವದುಕಾರಣಂ ಮುರಿವಸ
ಮರ್ಥಿಕೆಯುಳ್ಳೊಡೆ ಯಂತ್ರತಂತ್ರಮಂತ್ರಂಗಳಿಂ ಪರೀಕ್ಷಿಸುವುದೆಂ
ದು ಕಳುಪಲ್ಕಿರುಗಿ ಬಂದುಬಸದಿಯಂಪೊಕ್ಕು ಖಳವಿದ್ಯಾಚಕ್ರವರ್ತಿ
ಗಳೆನಿಪ ಸವಣಕ್ಕಳಿರ್ದಗಳ್||

ಕಂ|| ಜನಪನಗರ್ವದಿ ಸವಣ ! ಜಿನಭಕ್ತರನೆಯ್ದೆ ಕರೆದುಕಗೆಬಿ
ಟ್ಟರ್ಶಿ ಘನಶಿವನಿಳಯಪ್ವಾರ| ಕ್ಕನಲನನೊಳ್ದಿಕ್ಕಿ ಸುಡುವುದೆನೆಕೈ
ಕೊಂಡರ್||

ವ|| ಅಂತುಸಹಸ್ರಸಂಖ್ಯೆಯ ಜೈನರ್ತಮ್ಮ ಸವಣರಭಿಮಂತ್ರಿಸಿಕೊ
ಟ್ಟಗ್ನಿಯಂ ಕೊಂಡುತಿರುಜ್ಞಾನ ಸಂಬಂಧರಿರ್ಪ ಚೊಕ್ಕನಾಯಿನಾ
ರರ ನಿಳಯದ ಬಾಗಿಲ್ಗೆ ಬರುತ್ತಿರಲಿತ್ತಲ್||

ಕಂ|| ಇರುಳಿನಲಿಂಗಾರ್ಚನೆಯಂ| ಭರದಿಂಮಾಡಲ್ಕೆ ಭಸಿತರುದ್ರಾ
ಕ್ಷಗಳಂ| ಧರಿಯಿಸಿ ಹರನಣುಗಂ| ಕುಳ್ಳಿರಲಿತ್ತಲ್ಪಳರನಿಪ್ಪ ಜೈನರ್ಬಂ
ದರ್| ೨೦||

ಭವಗೇ...ಣದವೋಲ್ಮಾ| ನ್ನವೆಕದಪಿಕ್ಕಿರೆಕನೆಲ್ದು
ಜೈನಾವಳಿತ| ಚ್ಛಿವನಿಳಯದ ಬಾಗಿಲ್ಗಂ| ಸವಣರಬೆಸದಿಂದೆ ಕಿಚ್ಚನಿ
ಕ್ಕಿದರಾಗಳ್|| ೨೧|

ವ|| ಅಂತುದೊಸಕಕಪ್ಪ ಜೈನರಿಕ್ಕಿದ ಕಿಚ್ಚು ಚೊಕ್ಕನಾಯಿನಾರರ

ಲಿಂಗದನಿಳಯದ ಬಾಗಿಲೊಳ್ದ ಗಿಭುಗಿಲ್ಗ ರೆದುರಿವುತ್ತಿ ರ್ಪಾಗಳ್‌॥

ಕಂ॥ ಹರನಿಳಯದಬಾಗಿಲೊಳ್। ದುರ್ದ್ದಿಗಂಡೊಳಗಿರ್ದ ಭಕ್ತರೊರ ರುತ್ತಿರಲಾ। ತಿರುಪಿಳ್ಳೆಸಾಮಿನಾರ, ಹರ್ರನರ್ಚನೆಗೆಯ್ದು ಕೃಪೆಯೊಳಭಯಮನಿತ್ತರ್॥ ೨೨

ಅಂತಭಯಮನಿತ್ತಾಗಳ್‌॥

ಕಂ॥ ಕರದೊಳ್ತಾಳಮನಾಂತೀ। ಶ್ವರಂಗೆಜ್ಯೆನರೀಕರ್ಷಮಂ ಮುನಿಸಿಂದಂ। ತಿರುಪಿಳ್ಳೆನಾಮಿನಾರಂ। ತಿರುಪಾಡಿಂಪಾಡಿಪೊಗಳ್ದು ಬಳಿಕಿಂತೆಂದಂ॥ ೨೩

ವ॥ ಅಂತಾತ್ರಿಪುರಹರನಂತಿರುಪಾಡಿಂಪೊಗಳ್ದು ಬೇಡಿಕೊಂಡುತಿಗಿಬಂದು ಭದ್ರಾಸನಮನಲಂಕರಿಸಿ ತಿರುಜ್ಞಾನಸಂಬಂಧರಾಕ್ಷೇಪದಿಂದಗ್ನಿಯುಂಕರೆದು ನೀನಿಲ್ಲಿಪತ್ತಿರಲಪ್ಪುದೆ ಬೇಗಂಪೋಗಿ ನಮ್ಮಗ್ರಹಗೆಯ್ಪ ಸವಣರಬಸದಿಗಳೆಲ್ಲಮಂ ಸುಡುವುದೆಂದು ನಿಯಾಮಿಸಲಾಗಳ್‌॥

ಕಂ॥ ನೆರೆದುಪೊರೆಗಿರ್ದಜೈನೋ। ತ್ಕರಮಂ ಬೆನ್ನಟ್ಟಿ ಹರನಪುತ್ರನಟಿಸದಿಂ। ದಾರಿಪತ್ತಿಪುರದ ಜಿನಮಂ। ದಿರಂಗಳಂ ಪತ್ತಿಸುಟ್ಟನನಿಲನಮಿತ್ರಂ॥ ೨೪

ಧಗಿಧಗಿಭುಗಿಭುಗಿಲೆನುತಿರೆ। ನೆಗೆದಖಿಳಜಿನಾಲಯಂಗಳಂ ಸುಡುತಿರನಿಟ್ಟಗೆಕಟ್ಟಿಪತಾಕೆಗೆಪೊ। ತ್ತಗೆಗಳನೆನುತಿರದೆಸವಣರೊದಗಿದಗಳ್‌॥ ೨೫

ವ॥ ಮತ್ತಮಾಸವಣರೊಳ್ಕೆಲಂಬರ್॥

ಚಂ॥ ಒಡವೆಗಳಾಸೆಯಿಂ ಬಸದಿಯಂ ಪುಗೆನೆತ್ತಿಗಳೆಯ್ದೆ ಪೊತ್ತಿಜೊಬ್ಬಿಡುತಂದಿಮಿಂಚಿ ಮುಳ್ಳಿಪೊರಮಟ್ಟರದಕ್ಕಟತಟ್ಟು ಕುಂಚವೋ। ಳ್ಗೊಡನೆರೆಬೆಂಡೆ ಮೊಂಡನುತೆಬಾಯ್ಬಿಡುತಾವ್ರತೆ ಲಜ್ಜೆಗೆಟ್ಟಹೇ। ರೊಡಲಿನಭೀಕರಕ್ಷಣಕನರ್ಕರದೋಡುತ ಮಿದುರ್ದಕ್ಕರಿಂ॥ ೨೬

ಕಂ॥ ಉರಿಪತ್ತಿಕಾಂತಿಯಗುರ್ಗ್ಗಿಂ। ಡರುಮಿಂದುರ್ಬಂದಿತಾಳ ಪುರಜಾಕಾರ। ಸರ್ರಕುಗಳಂಪೊತ್ತುತ್ತಿ। ತ್ತಿರದೋಡುತಿರ್ದುದಳಲಿ ಕೂಗಿಡುತಾಗಳ್‌॥ ೨೭

ಪಟಮಾಣಿಭದ್ರೆಯಕ್ಷಿಣಿ। ಸುರುಚಿರಚೌವೀಸ ತೀರ್ಥಕಂಬ್ರಹ್ಮಾಭಾ। ಸುರಪದ್ಮಾವತಿಯೆಂಬಿನಿ। ತುರಿಯಿಂಘಳಘಳನೆಸಿಡಿದುಕೆಡೆದುಪಟ್ಟಾ

ವ॥ ಅಂತುಸವಣರ್ನೆರೆದಿರ್ದಸನಂಗದಮಹಾಜ್ವರ ತಾಪಮಂ ಕಂಡಂ ಜದಿರಿನಿಮಗರುಹತ್ಪರಮೇಶ್ವರನ ಕೃಪೆಯುಂಟು ಮಾಣಿಪೆವೆಂದಧಿಕ ಪ್ರತಿಜ್ಞೆಗಳಂ ನುಡಿವುತ್ತಿರ್ದರಂತುಮಲ್ಲದೆಯುಂ।

ಕಂ॥ ನೆಲಧರೆಯುನಮೊಯ್ಯುರಿಯುಂ। ಕೆಲಬರ್ನಿಸ್ತ್ಯದಿ ಕೆಲಂಬರನುಷೇಚನದಿಂ। ಕೆಲಬರ್ಕಷಾಯದಿಂದಂ। ಕೆಲಬರ್ಮಂತ್ರಂಗಳಿಂದೆ ಮಾಣಿಪೆವೆಂದರ್॥ ೭೫॥

ವ॥ ಅಂತತಿಪ್ರತಿಜ್ಞೆಗಳಂ ಕೈಕೊಂಡು ನಾನಾವಿಧ ದೌಷಧಂಗಳಂ ಮಾಡಿಯಾಗಳೆ ಪೆರಸಾರ್ದಜೈನವೈದ್ಯರಂ ನಿರಿಸಿ ಮಹಾ ಮಂತ್ರಜ್ಞರಪ್ಪ ಮಲಧಾರಿವೆಸರಸವಣರ್ತಾವವನಿಪ ನಂಗತಾಪವಂ ಮಾಣಿಪೆವೆನುತ್ತಂ ವೇತ್ರದಂಡಪರಿಭ್ರಾಜಮಾನ ಪಿಂಛಗುರಿಂಛಂಗಳಂ ಪಿಡಿದುಪತ್ತಿರಸಾರ್ದರ್ಕಮಳ್ಳಿದರ್ದಾಗಳ್॥

ಕಂ॥ ಮುದದಿಂ ಮಂತ್ರಿಪಸವಣರ ವದನಂ ಬೆಂದೆಳೆದಕುಂಚಮುರಿಯಲ್ಕಾಗಳ್। ಬೆದರಿ ಕೆಲಕಿರದೆ ಪೋಡ। ಲ್ಕೊದವಿದನುರಿಗಳ್ಕಕೂನಪಾಂಡ್ಯನೃಪಾಲಂ॥ ೭೬।

ಎಂತೆಂತುಮಂತ್ರಿಸುತ್ತಿರ। ಲಂತಂತುರಿ ಪೆರ್ಚೆ ಕಂಡುಮಂಗರಸಿಯುರೇ। ಕಾಂತಕ್ಕೆ ಬಂದು ತನ್ನಯ। ಕಾಂತನೆನಿಪ್ಪರುಹಭಕ್ತ ಪಾಂಡ್ಯಂಗೆಂದಳ್॥ ೭೭।

ಚಂ॥ ಜನಪತಿಚಿತ್ತ ಮಾವುದಿದುಶ್ಚ್ಯೈವಿಕವಾಗದೆ ಮಾಣದಕ್ಕಟಾ। ತನುವಿಧನೇಕೆನೀಂ ಬರಿದೆ ನೋಯಿಪೆ ಕೇಳ್ವೊಡೆ ಪೇಳ್ವೆನಿಂದು ಪಾ। ವನಶಿವಭಕ್ತಸಂಕುಳ ಶಿಖಾಮಣಿ ಪಳ್ಳಿಯನಾಯಿನಾರರಂ। ದನುಪಮಶೈವಕೃದಕವಳ್ಳೋತು ನಿರೀಕ್ಷಿಸೆ ಬಾಳ್ವೆ ನಿಶ್ಚಯಂ। ೭೮।

ಕಂ॥ ಅವರಿಂದಲ್ಲದೆ ನಿನ್ನವ। ಯುವದೀ ತಾಪಂ ನಿವಾರಿಸದು ನಿಶ್ಚಯ ಕೇಳವನೀಶಯೆಂದೆನಲ್ಕಾ। ಯುವತಿಗೆ ಧೀರತೆಯನುಳಿದು ಮೆಲ್ಲನೆನುಡಿದಂ। ೭೯।

ಮೃಡಭಕ್ತರಿಂದಮೆನ್ನುರಿ। ಕೆಡುವುದೆ ಕೆಡುವುದು ಧಿಟಕ್ಕೆ ನಂಬುವೆನೀನಂ। ಬಿಡೊಡಲಿದೆಂತು ಬಾಳ್ವುದು। ತಡೆಯದೆ ಕರೆಸುವೆನೆ ಪೇಳ್ವೆಸಿಯೆಂದಳ್ಪತಿಯೊಳ್। ೮೦।

ವ। ಎಂದುಮಂಗಕ್ಕರಸಿಯು ಪ್ರಾಣೇಶ್ವರನಬುದ್ಧಿಯಿಂ ನಿಜಪತಿಗೆಭಾ

ಷೆಯಂಕೊಟ್ಟು ತನ್ನಮನೆಯವಿಶ್ವಾಸಿಯಪ್ಪಕುಲಚರಿಯ ಮಾಹೇಶ್ವ ರನಂಕರೆದು ನೀಂಪೋಗಿ ಮಾವೃತ್ತಾಂತವನರುಪಿಪಾಂಡ್ಯರಾಜಂನೀ ವೇನೆಂದುವಂಪೂಳ್ವನೆಂದುಷೇಳ್ದು ಸದ್ವಿನಯದಿಂ ನವ್ಮೊಡ್ಡೆಯರಪ್ಪತಿ ರುಜ್ಞಾನಸಂಬಂಧಾಚಾರ್ಯರನೊಡಗೊಂಡುಬರ್ಪುದೆಂದು ಕಳುಪಲ್ಪ ರಿದು ಪೋಗಿಪೊಡಮಟ್ಟಾಗಳ್‌|

ಕಂ|| ಹರಮಂದಿರದೊಳಗಿರ್ಪಾ| ವರಗುರುತಿರುಪಿಳ್ಳೈಸ್ವಾಮಿನಾರ ಗರ್ತ್ಯಾ| ದರದಿಂಕುಲಚರಿಯಂತ| ನ್ನರಪತಿಗಾದಂಗದು ರಿಯನುಸಿ ರ್ದಿಂತೆಂದಂ| ೪೧|

ಚಂ|| ನರಪತಿತನ್ನವೇದನೆಯ ಸೈರಿಸಲಾರದೆ ದೇವರೆಂದುದಂ| ನಿ ರುತದಿವಾಳ್ವನೆಂತದುವೆ ಕಾರಣವಿಲ್ಲಿಗೆಬಂದುಜೈನರ್ತ್ಗಂಪರಿಭವಕೆಯ್ದು ತಂದು ಶಿವಭಕ್ತಿಯನೆತ್ತುವುದೆಂದು ಭಕ್ತನಾ| ದರದೊಳೆಬೇಡಿಕೊಂ ಡೊಡಿರದೀಶಕುಮಾರಕನೆರ್ದನರ್ಥಿಯಿಂ|| ೪೨|

ವ|| ಅಂತೆರ್ದತಿರುಜ್ಞಾನಸಂಬಂಧರಾ ಕೂನಪಾಂಡ್ಯರಾಜನತನ್ನ ತಾಪಮಂಕಳೆದು ಸವಣರಂಪರಿಭವಿಪೆನೆಂಬಾಕ್ಷೇಪದಿಂ ತನ್ನ ಪರಿಚಾರ ಕರಪ್ಪ ಭಕ್ತರ್ವೆರಸು ನಂದಿಯಪಳವಿಗೆಯನೆತ್ತಿ ಸಿಮುತ್ತಿನಮಂಟಪಪ ವೇರಿಸಂಭ್ರಮದಿಂ ಕುಲಚರಿಯಮಾಹೇಶ್ವರರ ನೊಡಗೊಂಡೊಯ್ಯ ಲ್ಪೋಗಿರಾಜಭವನಮಂಪೊಕ್ಕು|

ಕಂ|| ಜಿನಮತಭೂಧರವಜ್ರಂ| ಜಿನಮತಮತ್ತೇಭಕುಂಭವಿದಳನ ಸಿಂಹಂ| ಜಿನಮತತಿಮಿರದಿವಾಕರ| ನೆನಿಸುವಹರಸೂನು ಭೂಪನೆಡೆ ಗೆಲ್ದಿಂದಂ| ೪೩|

ವ|| ಅಂತೆಲ್ದುಂದುಮುತ್ತಿನಮಂಟಪಮನಿಳಿದು|

ಕಂ|| ವರಕರ್ಣಕರತ್ನಪ್ರಯಮು| ಪ್ಪುರುಮೇಖಳೆಕೌಪುಕುಂಡಲೀಜ ನ್ಯವರಂ| ಸುರುಚಿರಖರಕರ ಪಾದುಕ|ಪರಿದೊಪ್ಪಲ್ಪಿಳ್ಳೈನಾಯಿನಾ ರರ್ಪರೆದರ್‌| ೪೪|

ವ|| ಅಂತುಮೆರೆವುತ್ತುಂ ನಿಂದುನಿರೀಕ್ಷಿಪಾಗಳ್‌|

ಚಂ|| ನಿರುತದಿಗೂಡುಗೊಂಡೆಸೆವ ಮರ್ಕಟಸಂಚೆಯ್ದುದಂತೆ ಬೆಂದ ರ ಗೋರಡುಗಳಂತೆ ಕಾಳೆಡೆವಜಂಬುಕಸಂಕುಲದಂತೆವೇದಬಾಹ್ಯ ರನಗಜೇಶನಿಂದೆ ಕರಸುವಮನಸ್ಕರಸೂಯ ಪಾತ್ರಕರ್ಪರಿ ದತ್ತಿದಾ

ಪ್ಟಕ್ಷಪ್ಪ ಸವಣರ್ನೆರೆದಿರ್ದುದು ರಾಜಗೇಹದೊಳ್‌| ೪೫|

ಮತ್ತಮಾಗಳ್‌|

ಕಂ|| ತನುತಾಪಕ್ಕಾರದೆಪೋ| ದಿನಿಯೊಳಿಪ್ಪರಳ್ವರೆಸನಂ ನಿರೀಕ್ಷಿಸಿ
ಸವಣ| ರ್ಪನದೊಳ್ಮರುಗುತೆ ತಮ್ಮಯ| ಜಿನಗಭಿಷೇಕವನೆ ಪರಸಿ
ಕೊಳುತಿರಲಾಗಳ್‌| ೪೬|

ವ|| ಆಸಮಯದೊಳ್ಗ್ರಂದಣದಿನಿಳ್ದು ಸವಣರಮಧ್ಯದೊಳ್ಕುಲಜಾ
ಯಮಾಹೇಶ್ವರಂತಿರುಜ್ಞಾನಸಂಬಂಧಾಚಾರ್ಯರ್ಗೆ ರತ್ನಸಿಹ್ಮಾಸನ
ಮನಿಕ್ಕಿ ಕುಳ್ಳಿರಿಸಲ್ಕಾಗಳ್‌|

ಕಂ|| ಘನರುದ್ರಾಕ್ಷಾಭರಣದಿ| ತನುವಿನೊಳುದ್ಧೂಳಿ ಸಿರ್ದಭಸಿತ
ದಿನತಿಪ| ವನಪಿಳ್ಳೆನಾಯಿನಾರಂ| ವನರುಹಧರಿಯತಿಪನಾದ ತೆರದಿಂ
ಮೆರೆದಂ|| ೪೭|

ವ|| ಅಂತುಮೆರೆವುತಿರ್ಪಾಗಳ್‌|

ಕಂ|| ಮಣಿನೂಪುರಯುಗಳಂಝುಣ| ಝುಣರೆನೆನಡೆತಂದುಕಾಮಿನೀ
ನಿಕರಶಿಖಾ| ಮಣಿಮಂಗರಸಿಯರೀಶ್ವರ| ನಣುಗಂಗತಿಭಕ್ತಿಯಿಂದಮಾ
ನತೆಯಾದಳ್‌| ೪೮|

ವ|| ಅಂತಾನತೆಯಾಗಿ ತತ್ಪತಿಯಪ್ಪ ಪಾಂಡ್ಯರಾಜನ ತನುತಾಪಕೋ
ಲಾಹಳಮಂ ಕಾರುಣ್ಯದೃಷ್ಟಿಯಿಂ ನೋಡಿನಿವಾರಿಪುದೆಂದು ಬಿನ್ನಪಂಗೆ
ಯ್ಯೆತಿರುಜ್ಞಾನಸಂಬಂಧರಿಂತೆಂದರ್‌|

ಕಂ|| ನರಪತಿಯೊಮಯ್ಯುರಿಯುಂ| ಪರಿಹರಿಸುವೆಸಾಸೊರಲ್ದು ತಾನ
ರ್ಧಕಳೆ| ಪರದುರಿಯಂಪರಿಹರಿವುದು ಪಿರಿದುಸಮರ್ಥಿಕೆಯದುಳ್ಳೊ
ಡೆಂದಾಕುವರಂ| ೪೯

ಇಳೆಯರಸನಮೆಯ್ಯುರಿಯುಂ| ಕಳೆಯಲ್ಬಲ್ಲವರದರ್ಶನಂನೆರೆಸತ್ಯಂ
ಕಳೆಯಲರಿಯದೊಡೆ ಪುಸಿಯನೆ| ತಿಳಿವಿಲ್ಲದ ಸವಣರೋತದಂ ಕೈ
ಕೊಂಡರ್‌| ೫೦|

ವ|| ಮತ್ತಮಾಪಿಂಡಕನ್ಮಿತದಿಂ ಶ್ರುತ್ತನಂದಿಮೊದಲಾದನೇಕ ಜೈನ
ರಳವುದಂ ಮಧುರೆಯೊಳ್ಬಸದಿಗಳೆಲ್ಲಂಬೆಂದುಜಿನಬಿಂಬಂಗ ಳೊಡೆದುಕೆ
ಡೆದು ದಂತೆಾವೆಲ್ಲಂದೆಸೆಗೆಟ್ಟೋಡಿದುದಂ ಪಾಂಡ್ಯರಾಜನ ತನುತಾಪಂ
ತಮ್ಮಿಂದಂಪೋಗದೆತಮಗೆಮುಖಭಂಗಮಪ್ಪುದಂ ಸವಣರ್ಕೇಳುತ್ತಂ

ಶಿವುಡಕಾರ್ಣಾತ್ರಂ ಕುರುಡರೆಂಬ ನಾಥಗಾಥೆಯಂದಿಟಮುಂಮಾಡು
ತ್ತಂ ದಿಟ್ಟತನದಿಂ ಪ್ರತಿಜ್ಞೆಗಳಂ ಕೈಕೊಂಡುಥಕ್ಕೆ ನಗುತ್ತಂತಿರುಜ್ಞಾ
ನಸಂಬಂಧಾಖ್ಯೆಯುಮಸವುಳ್ಳ ಶಿವಕುಮಾರನಿಂತೆಂದಂ||

ಕಂ|| ನರಪತಿಗೀಭಸಿತಮುಮಂ| ಪಿರಿದಿಟ್ಟವಮುಕ್ಕಿವಾಯುಎನೆನಿನ್ನ
ಯುಮ್ಮೈ| ಯುರಿಪಿಂಗಿದಿವ್ಯವೇಡದೊ| ಳಿರುತಿರ್ಪ ಯೆನುತ್ತ ಲಭಪ್ಪತನ
ಯಂನುಡಿದಂ|| ೩೮|

ವ|| ಅಂತಾನುಡಿಯಂಕೇಳ್ದು ತದ್ರಾಜಂಸವಣರ್ಗಂಜಿಜಿ ನನಂಬಿಟ್ಟೊ
ಡೆಲಜ್ಜೆಯೆಂದು ತನುತಾಪಕ್ಕೆ ಸೈರಿಸಲಾರದೆಮುನಿದ್ರೊಳ್ಳೆ ಮುಕ್ಕಿಪಾಯು
ಎಂದು ನೋಡಲ್ಕಾಗಳ್ ತನ್ನೊಳಗಿರ್ದುರಿ ಕಿರಿಥಳ್ಳು ದಲ್ಕಕಂಡ್ಡುವಂಬಿ
ಮೆಲ್ಲನೆರ್ದು ಮಂಗಕ್ಕರಸಿನಾಚಿಯುರಂ ನಿಮ್ಮ ಕುಳ್ಳಿರ್ದಲ್ಲಿತ್ತುದೆಷ್ಟು
ವನ್ನುಬರಂಸರ ಳವೆಬೇಗ ಧಿನೆನ್ನಂಗಮುಂರಕ್ಷಿಪುದೆಂದು ಬಿನ್ನಪಂಗೆಯ್ಯ
ಲ್ಕರುಣದಿಂ ತಿರುಜ್ಞಾನಸಂಬಧವಿಭೂತಿಯುಂ ಕೊಂಡಾಗಳ್||

ಕಂ|| ಹರನಕುಮಾರಂ ಕೃಪೆಯಿಂನರಪತಿಯಿರ್ದ ದೇಹದಲ್ಲಿ ಭಸಿತ
ಮನಿಡೆದ| ಲ್ಕುರಿಪೋಗಿಮತ್ತಮಾಸವ ಣರ ಭಾಗದಮೆಟ್ಟೊಡರ್ದುಬ
ಳಲಿಸಿತಾಗಲ್|| ೩೯|

ವ|| ಅಂತರ್ಧದೇಹದುರಿಪೋಗಿ ಮಿಕ್ಕರ್ಧದೇಹದೊಳ್ತುಂಬಿ|ಮು
ಸ್ಸಿಂದಿವ ಮಡಿಯಾಗಿ ಪಿರಿದುರಿವುತ್ತಿರಲ್ಪಾಣ್ಯಂಪೋಪಂತಾಗಿ ಫೇಳಿ
ಟ್ಟೊದರಿಗುರುಗಳಿಚೆಚ್ಚರುಮಾಣಿಪುದಾಗಧೊಡನ್ನೆಶಿವಭಕ್ತರ್ಗೊ
ಪ್ಪಿಸೇವುದೆಂಬವಕಾಂಡ್ಯರಾಜಂಗೆ ದಿಟ್ಟರಪ್ಪ ಸವಣರ್ಪ್ರಾಣಿಪೆಲ್ಲಿದುಸ
ಮೀಪಕ್ಕೆಬಂದಾಗಳ್||

ಕಂ|| ಜಿತಸೇನಂನಯುಸೇನಂ! ಶೃತಕೀರ್ತಿವಿಶಾಲಕೀರ್ತಿಬುಧಚಂ
ದ್ರಂಸು| ವ್ರತಕೀರ್ತಿಯೆಂಬಸವಣ| ರ್ಷತಿಪನ ಮೈಯುರಿಯುನಿಳಿಸ
ಲುದ್ಯತರಾದರ್|| ೪೦|

ಧರಣಿಪನರ್ಧಾಂಗಮುನಾ| ಸುರದಿಂಮಂತ್ರಿಸುತಿರಲ್ಕಿ ಕುಂಚಂಭು
ಗಿಲಿಂ! ದುರಿದುನೆರೆಮೋರೆಗಳ್ಪೇ| ಕರಿಯಾಗಲ್ಕಾಂಚಕಲರ್ಕನಾರ್ದರ್ಸ
ವಣರ್|| ೪೧|

ವ|| ಅಂತುಬೆಂದಮೋರೆಗಳಂ ಮಾಡಿಕೊಂಡಸವಣರಂನೋಡಿತನ್ನ
ದೇಹದುರಿಕಡುಘನವಾಗುತ್ತಿರೆ ಕೋಪಿಸಿಪೃಥ್ವೀಜೀವಿಗಳಧೆಸ್ಸೆಯಿಂದೆ

ನಗೆಮೊಗದೆಲೆತಂದೆಪಿಳ್ಳೆಯನ್ನೈನಾರೆ ಕಾರುಣ್ಯದಿಂ ನೀವೀತಾಪಮಂ ಕಳೆದೆನ್ನನುದ್ಧರಿಪುದೆಂಬ ಪಾಂಡ್ಯರಾಜಂಗೆ ಕೃಪೆಯಂಮಾಡಿ ಕರವೊಳ್ದ ವಿಭೂತಿಯಂ ತಾಳ್ದಿ ಗಳ್||

ಕಂ|| ಕರುಣದಿನಭವಕುಮಾರಂ| ನರಪನಸರ್ವಾಂಗದಲ್ಲಿ ಭಸಿತಮನಿಡೆಚೆ| ಜ್ವರನುಂಪಿಂಗಿನಿಜಾಂತಃಕ| ರಣದೊಳಮೊಳಪು ನೋದಮಂತಳೆದಿರ್ದಂ|| ೫೫

ವ|| ಅಂತಾರೋಗಂಪಿಂಗಿ ಪರಮಾನುರಾಗದಿಂದಿರ್ಪ ಪಾಂಡ್ಯರಾಜನ ಸರ್ವಾಂಗಮಂನೋಡುತ್ತಂಪೊರಮಟ್ಟಬೆನ್ನಂಕಂಡಖಿಳವಿದ್ಯಾಧಿಕರೆನಿಸಿಕೊಂಬ ಬಿರಿದಿನಸರ್ವಣರಿರ್ದೀ ಕೂನಂತೆಗೆಯಲ್ಕಮರ್ಥರಲ್ಲದಿರ್ದರೀತನೆಮ್ಮಾತನಾದಕಾರಣಂ ತಿರ್ದಿಚೆನ್ನಂಮಾಡಿತೋರ್ಪೆಂನೋಳ್ಪುದೆಂದು ತಿರುಜ್ಞಾನಸಂಬಂಧ ಸ್ವಾತ್ಮಾಕಾರುಣ್ಯದಿಂ ದಿಂಡಂತಾಗ

ಕಂ|| ಧರಣಿಪೆರಗಾಗೆ ತನ್ನಯ| ಕರದಿಂದಂನೀವಿಬೆನ್ನಕೂನಂಕಳೆದ| ಚ್ಛರಿಯಿಂಶಿವತವಯಂಸೌಂ| ದರಪಾಂಡ್ಯನೆನಿಪ್ಪ ಪೆಸರನೊಲವಿಂದಿಟ್ಟಂ|| ೫೬

ವ|| ಅಂತುತನ್ನ ನಿಜಶರೀರದ ಸಂತಾಪಮುಂಕಳೆದುಜಸಮುಸುಳುಹಿಕೂನಪಾಂಡ್ಯರಾಜನೆನಿಪ ಕಷ್ಟದಪೆಸರಂಮಾಣಿಸಿ ಸೌಂದರಪಾಂಡ್ಯನೆಂಬಪೆಸರಂಕೊಟ್ಟು ಚೆನ್ನಿಗನೆನಿಸಿದರೀ ತಿರುಜ್ಞಾನ ಸಂಬಂಧರೇಲೋಕಾರಾಧ್ಯರೆನಗಿನ್ನವರೇ ಗತಿಯೆನುತಿರ್ದ ಭಯಭಕ್ತಿಯಿಂತನ್ನರಸಿಯಪ್ಪ ಮಂಗಯ್ಯರಸಿ ನಾಚಿಯರ್ಮಿರಸುಬಂದು ಕಾಲ್ದಾವರೆಗೆರಗಿ ಪರಮಾನಂದಹೃದಯರಾಗಿ ಪರ್ದಗಳ್|

ಜಿನಮತಮನುಳಿದು ಪಾಂಡ್ಯಾ| ವನಿಪಂಶಿವಭಕ್ತಿಗೆರಗಿಕೆಟ್ಟಪನಕಟೆಂದೆನುತ ಘುಡಿಘುಡಿಸಿ ಸವಣ|ರ್ಮುನಿಸಿಂದಾಪಿಳ್ಳೆನಾಯಿನಾರರ್ಗಂದರ್|| ೫೭

ವ|| ಮತ್ತಮವರ್ನೀ ಮವನೀಶ್ವರನ ರೋಗಮಂಕಳೆದುದರಿಂ ಪ್ರೌಢ್ಯರೆನಿಸುವಿರಲ್ಲದೆ ತರ್ಕತಂತ್ರವ್ಯಾಕರಣಂಗಳಂ ಬಲ್ಲತಾರ್ಕಿಕರಲ್ಲನಮ್ಮನಿಮ್ಮಗೆಲ್ಲ ಸೋಲಂಗಳನರಿವೊಡೆ ದರ್ಶನಸಂಪಾದನೆಯಂಮಾಳ್ಪುದೆಂಮ ನಿರ್ಲಜ್ಜರಪ್ಪಸವಣರ್ವಾದಕ್ಕೆ ತೊಡರಲ್ಕೆ ಕೊಂಡು ತಿರುಜ್ಞಾನಸಂಬಂಧ... ಸಂಸ್ಕೃತ ಪ್ರಾಕೃತಮಾಪಭ್ರಂಶಕ ಪೈಶಾಚಿಕ

ಶೂರಸೇನಮಾಗಧೇಯುವೆಂಬಷಡ್ಭಾಷೆಗಳೊಳ್ ಪನ್ಯಸವುಂಪಾಡಿ ಹರುಷದಿಂ ಸಮ್ಮತಮಪ್ಪ ಶೈವಮುಂಸ್ಥಾಪಿಸುತ್ತಂ ತದ್ರಾಜಸಭಾಜನಂ ಮೆಚ್ಚಲ್ ಪ್ರತ್ಯಕ್ಷಾಗಮಾನುಮಾನಅರ್ಥಾಪತ್ತಿಯುಪಮಾನಾಭಾವಂಗಳೆಂಬ ಷಟ್ಪ್ರಮಾಣಂಗಳಲ್ಲಿ ಪರಮತಮಪ್ಪ ಜಿನಮತಮನಸಾಸ್ತೀಯಮೆಂದೊಡಂ ಬಡಿಸಿಗೆಲಿಯಲೆತ್ನೀಲ್ತುಕಾದ್ವಾದಮುಂಬಿಡದೆ ಕುಟಿಲಮಂತ್ರದ ಗರ್ವದಿಂದಿವ್ಯದುಖದೊಳ್। ಸೋಲ್ವೆನೆಂದು ಮತ್ತಮಿಂತೆಂದರ್।

ಕಂ॥ ಜಿನಮತಮುಂಶಿವಮತಮುಂ। ಘನಪೆಂಬುದನರಿವಡೋಲೆಯರ ಡಂಬರದಿಂ। ದಶಲನೋಳುರಿ ಪಲ್ಕುಳಮುದ। ವಸಿಯೊಳ್ದಿಟವೆಂದುನುಡಿದರಂತಾಸವಣರ್। ೩೮।

ವ॥ ಎಂತುಸವಣರ್ನುಡಿಯಲಂತದಂ ಕೈಕೊಂಡು ತಿರುಜ್ಞಾನಸಂಬಂಧರ್ನಮಶ್ಶಿವಾಯ ಎಂಬಮಂತ್ರಮನೊಂದೋಲೆಯೊಳ್ಬರೆದು ಕುಡಲ್ಸವಣರ್ನಮೋಜಿನಾ ಎಂಬಮಂತ್ರಮನೊಂದೋಲೆಯೊಳ್ಬರೆದಗ್ನಿಸ್ತಂಭಮುಂಮಾಡಿ ಕುಟಿಲಪೃತ್ತಿಯಿಂ ಕುಡಲ್ಕಂತಿತ್ತಂಡದೋಲೆಗಳಂ ಪಾಂಡ್ಯರಾಜಂಪಿಡಿದು ಧರ್ಮೋಜಯವೆಂದೊಟ್ಟದಬಲ್ಗಿಚ್ಚಿನೊಳ್ಪಾಯ್ಕಲ್ಕಾಗಳ್।

ಕಂ॥ ಜಿನಮಂತ್ರದೋಲೆ ಭುಗಿಲೆಂ। ದೆನುತುರಿಯೆನಮಶ್ಶಿವಾಯಮಂತ್ರದಪತ್ರಂ। ಜನನಾಥನೀಡಿದದ್ಭುತವೆನಲಂತಾಬೇಕಿ ಸೋಂಕಮುಳಿಯಿತ್ತಾಗಳ್। ೩೯।

ವ॥ ಅಂತಾತಿರುಜ್ಞಾನಸಂಬಂಧರಸಮರ್ಥಿಕೆಯಂಕಂಡುರ್ಬಿಕೊಬಿಕುಲಚರಿಯುಮಾಹೇಶ್ವರಂಮೊದಲಾದ ಶಿವಭಕ್ತಜನಮಬ್ಬರಿಸುತಿರ್ಪುದಂನೋಡಿ ಕಡುಗಾಯ್ದು ಮುಚ್ಚಂಡಿಗಳಪ್ಪಭಂಡಸವಣರಗ್ನಿಸ್ತಂಭಮೆಂದುಮುಳಿದು ಮತ್ತಮಿಂತೆಂದರ್।

ಕಂ॥ ಫಣಿಮುಂಘಟದೊಳ್ಪ್ರತ್ಯಿಕ್ಷಣದಿನ್ನಿಳ್ದಿರ್ಪುದೇ ನೆನಲ್ನಗುತಂ ಜನಗಣಿಗಿಲೆಯುಸರವೆಸುತೆಹರ। ಣಾಗಂ ತೋರಲ್ಕಿಜ್ಜೈನರಳ್ಕದರಾಗಳ್। ೬೦।

ವ॥ ಅಂತಳ್ಕಬಳ್ಕಲಜ್ಜೆಗೆಟ್ಟ ಸವಣರ್ತಮತಮಗೆ ಜಲಸ್ತಂಭಮುಂ ಬಂಟಗರ್ವದಿಂದಿನ್ನೊಂದು ಮಹಾಪ್ರತಿಜ್ಞೆಯುಂಟದೆಂತೆಂದೊಡೆಮು

ನ್ನಿನಂತೆ ಶಿವಮಂತ್ರದೋಲೆಯೊಂದಂ ಜಿನಮಂತ್ರದೋಲೆಯೊಂದಂ ಬರೆದಿಂತಿರೆರಡೋಲೆಯುಂ ಕೊಂಡುಪೋಗಿ ನಮ್ಮ ಮಧುರೆಯ ಮುಂದೆ ಪರಿವ ವೈಗೆಯೆಂಬ ನದಿಯೊಳ್ಬಿಸುಡುವವಂತೆರಡೋಲೆಯೊಳಾವ ಮಂತ್ರದೋಲೆ ಪ್ರವಾಹಕ್ಕಿದಿರಾಗಿ ಪರಿದುಪೋಪುದದಱ ಮತಸಂಗಳ್ವೃಮನೀಳಿಂಗೆಪಿಲ್ದ ಮತಸಂಸ್ಥೋಲ್ತುದು ನಿಶ್ಚಯಮಿದಱಿಂ ದಿವ್ಯಮಪ್ಪ ಪ್ರತಿಜ್ಞೆಯಂ ಮಾಡಿದನವನೇ ದುರಾಚಾರಂಗಳಂ ಮಾಡಿದ ಸಪರಂತವರಂ ನಿರ್ವಾಣದೊಳ್ ಪಾಂಡ್ಯರಾಜಂ ಶೂಲದೊಳಿಕ್ಕುವನಾತಂಗೆದೋಷಂ ಪೊರ್ದದಂತದಕ್ಕೆ ಭಾಷಾಪತ್ರವಿದೆಳೋಯೆಂದುಳೊಟ್ಟಾಗಳ್||

ಕಂ|| ಧರೆಯೆಪನೀನಕ್ಕಬೆಸೋ|ತ್ತರನಿಕ್ಕುವುದುಗ್ರ ಶೂಲದೊಳ್ತಪ್ಪಿದೊಡೀ| ಶ್ವರನಾಣೆನಿನಗೆನುತ್ತಂ| ನರೆದಿರ್ದ ಬುಧ್ಯೆಗೆಯೆಂಬ ನದಿಗಾಸಪಣರ್|| ೭೧|

ವ|| ಅಂತಾಸವಣರ್ ಪಾಪ್ರತಿಜ್ಞಾಲೂಧಿಯನಾವೈಗೆಯೆಂಬತೊರೆಗೆ ಪ್ರೆಲಮುಡಲ್ಕಂಡಾಗಳ್||

ಚಂ|| ಹಳನಳುವಪಾರಕಂ ಭರದಿನೆದ್ದು — ಮಹೇಶ್ವರ ಭಕ್ತರುಬ್ಬಿ ಮುಂ| ದುಪತರಗಾಗದಿಂ ಪೊಗಳೆನಾಂಡ ರಪಾಂಡ್ಯಮಹೇಶ್ವರಾನ್ವಿತಂ| ಧರೆಬರಗಾಗಿನೋಡುತಿರೆ ಮುತ್ತಿನಮಂಟಪಮೇರಿಬಂದನಾ|ಸರದೊಳಿಬ್ಬೆಗೆಯೆಂಬತೊರೆ ಗುದ್ಧತ ಜೈನಸಮೂಹಮಧ್ಯದೋಳ್|| ೭೩|

ವ|| ಅಂತೇಳ್ತಂದುಮುತ್ತಿನಮಂಟಪದಿಂದಿಳಿದು ಪನ್ನೆರಡುಸಾಸಿರಸವಣರ ನಡುವೆತಿರುಜ್ಞಾನಸಂಬಂಧಾಚಾರ್ಯರ್ಸಿಂಹಪೀಠದೊಳ್ಮಿರೆವುತ್ತಿರ್ಪಾಗಳ್||

ಕಂ|| ಪರಮತವಪನಳಿವುದ ನೀ| ಶ್ವರಭಕ್ತಿಯುಪೆರ್ಚನೀಕ್ಷಿಸ ಲ್ಕಲಪರಿಯುಂ| ಪಿರಿದತುಳಸಂಭ್ರಮಂ ವೈಗೆ| ಧರಣಿಪನ ಸಮೀಪಕೊಲ್ದು ಬಂದಂಡುಪದಿಂ|| ೭೪|

ವ|| ಅಂತುಬಂದು ಪರಮಮಾಹೇಶ್ವರನಪ್ಪ ಕುಲಚರಿಯಂ ಸೌಂದರಪಾಂಡ್ಯರಾಜನಬಿಂಭಾಗದೊಳ್ಕುಳ್ಳಿರ್ದನೋಳ್ಪಾಗಳ್||

ಕಂ|| ಪಡೆದಭವಸಂನುಪಮಂ |ತ್ರದಪತ್ರಮನಾರ್ಪಿನಿಂದೆಸವಣರ್ಜಿನಮಂ| ... ತ್ರಮನೀಯಲ್ಕ್ಷ್ಣೈಪ| ... ಬಿನದಂದಿಗಳ್

ಪಿರಿದಂತೆಂಗಳ್॥ ೭೪

ವ॥ ಅಂತಿತ್ತಂಪವಿತ್ರ ಪತ್ರಂಗಳೆರಡಂಸಮಸ್ತಲೋಕಂ ನೋಡುತ್ತಿರಲ್ಕೆ ಕಡುವೇಗದಿಂ ಪರಿವನದಿಯೊಳವನೀಶ್ವರಂ ಪಾಯ್ಕಲ್ಕಾಗಳ್॥

ಚಂ॥ ಜಿನಪುತಪೋಲಿ ತಮ್ಮಸಮಯಂನೆರೆ ಕೇಳ್ವಿಗೆಬಿರ್ದುಪೋಪುದುಂ। ಜನಳುರಿತೋರುವಂತಿರದೆನಿಮ್ಮಗೆಯೊಳ್ಪಡೆಪೋಡಲಿತ್ತಲಾ ಘನಶಿವಮಂತ್ರ ಪತ್ರವಿದಿರಾಗಿ ತರಂಗದಮೇಲೆಮೂರುಯೋಜನವು ನಡೆದುಪೋಯ್ತು ಶಿವಭಕ್ತಜನಂ ಬೆರಗಾಗಿನೋಳ್ಪಿನಂ॥

ಕಂ॥ ಶಿವಮಂತ್ರಪೋಲೆಬೈಲಿಗೆ। ಕವಿಯಲ್ಕೆಪಥತ್ರವಿತ್ರತಿನಲಿಡುಲ್ಜಿನಮಂ, ತ್ರವದಿರದೆ ತೊರೆಗೆಪೋಗಲ್। ಸವಣರ್ದೆರೆನೋಲ್ತಕಂ ದಿಕುಂವಿಡಲಾಗಲ್॥ ೭೬

ಮಂತ್ರಂಕೊಳ್ಳದೆ ತಮ್ಮಾಯ। ತಂತ್ರಂಬೆಸಕೆಯ್ಯವೆಂದುವಂನೆರೆ ಮಾಳ್ಪಾ, ಯಂತ್ರಂಸಿದ್ಧಿಸಮುಬ್ಬೆಗ। ದಿಂತ್ರಸ್ತಮನಸ್ಕರಾದ ರಂತಾಸ ವರ್॥ ೭೭

ಅವನೀಶ್ವರಿಸಿಪಾರ್ಶ್ವಸು। ತ್ತೋತ್ತದವಿದಪುಳಕಾಳಿಯಿಂದೆನೌಂದರಪಾಂಡ್ಯಂ। ಬುದನಂತಳನಳುವೂರನ। ಪದಕೆಂಗಿಮಹೇಶಭಕ್ತಿಯಂಬಲುಪಿದಿದಂ॥ ೭೮

ವ॥ ಅಂತ ಧೃಯಭಕ್ತಿಯಿಂ ಬಲುವಿಡಿದು ನಿಜಪುರದೊಳ್ಗುಡಿಯಂಕಟ್ಟಿ ಸೌಂದರಪಾಂಡ್ಯರಾಜಂ ಕುಲಚರಿಯ ಮಾಹೇಶ್ವರಾನ್ವಿತಂಜೈನರಾ ... ಸಪ್ಪ ತಿರುಜ್ಞಾನಸಂಬಂಧಾಚಾರ್ಯರಂ ಮುತ್ತಿನಮಂಡಪವೇರಿಸಿ ನಡೆಯಿಸಿ ನೀವುಂನಾವುಂ ಪೋಗಿಶಿವಮಂತ್ರಪೋಲೆ ತೊರೆಯೋಳ್ದಿಡ ... ನಿತಂಪೋದುದಂ ನೋಳ್ಪೆವೆಂದಶ್ವಾರೂಢರಾಗಿ ನಿಜಸೈನ್ಯವಂ ಕರೆದುಶಿವದರುಶನಕ್ಕೆ ನೋಲ್ತಸವಣರ್ಗೆ ಕಾಳ್ಪುವೇಳ್ದು ಸಮಸ್ತಜನಂಬೆರಸು ಬೈಗೆಯೆಂಬಪೊಳೆಯ ತಡಿವಿಡಿದಳಸುತ್ತಂ ಮೂರುಯೋಜನಮಂಬಂದು ನಿರೀಕ್ಷಿಸುತ್ತಿರ್ಪಾಗಳ್॥

ಕಂ॥ ಹರಮಂತ್ರದೋಲೆಪಿರಿದಾ। ತಿರುಪ್ಪೈದಿಳಪುರದ ಲಿಂಗಭವನದೊಳಿರಲ। ಕ್ಷೆ ಬಿಯಿಂನೀಕ್ಷಿಸು ತವನೀಶ್ವರಂಗೆ ದೂತರೊಸೆಗೆಯಿಂದಂಪೇಳ್ದರ್॥ ೭೯

ವ॥ ಅಂತುಕೇಂಡುಬಂದಚರರಿಂ ಕೇಳ್ದು ಹರುಷದಿಂವಾಹನದಿಂದಿಳಿದು

ನಿಂದಿರಲ್ಕಾಸಮಯದೊಳ್||

ಕಂ|| ಪರಮತಮುಕಸೋಲ್ತು ದನೀಶ್ವರಭಕ್ತಿಯುಗೆಲವನೀಕ್ಷನಸ್ಥಿ ರಮುಂಗ| ಕ್ಕರಸಿಸುಖಾಸನದೊಳ್ಸ| ದರದಿಂ ಪಾಳ್ಪಿಸ ...ಾರಸೆಡಗೇ ಲ್ತಂದಲ್|| ೭೦

ವ|| ಅಂತೇಳ್ತಂದು ಶಿವಕುಮಾರನಡಿಗರಗಲ್ಸೌಂದರಪಾಂಡ್ಯರಜ ನಿಜಸತಿವೆರಸು ಭಯಭಕ್ತಿಯಿಂ ತಿರುಜ್ಞಾನಸಂಬಂಧಾಚಾರ್ಯಗೆ ಕೈಗೊಟ್ಟೊಡಗೊಂಡು ಬಂದುನದೀತೀರದತಿರುವೈದಿಕಪುರದಪಟು ಪ್ಪಶಿವಲಿಂಗನಿಳಯದೊಳಪೊಕ್ಕು ತಚ್ಛಿವಲಿಂಗಪೀಠದಮೇಲೀರ್ಪ ವಮಂತ್ರದೋಲೆಯಂ ತೆಗೆದುಕೊಂಡುಪೊಡಮಟ್ಟು ಮತ್ತೆವಾರಂಸ ಮಂಟಪಕ್ಕೆಬಂದು||

ಕಂ|| ನುತಮಣಿಪೀಠದೊಳೀಶ್ವರ| ಸುತನಂಕುಳ್ಳಿರಿಸಿಮುದದಿಮಂ ಗಳಸಿಯ ರಾಮತಿಮಿಗೆ ಕುಲಚರಿಯಂಬಿರ| ಖತಿರಭಸದಿ ಪಾಂಡ್ಯನ್ಯಸ ತಿತಾಂಕುಳ್ಳಿರ್ದಂ ೭೦

ವ|ಅಂತುಸೌಂದರಪಾಂಡ್ಯಂಕುಳ್ಳಿರ್ದುಜಿನಮತವನದಹನ ದಾವಾನ ಳನಪ್ಪತಿರುಜ್ಞಾನಸಂಬಂಧಾಚಾರ್ಯನ ನಿರೂಪದಿಂತನ್ನಯ ಮಂತ್ರಿಮಂ ಡಳಿಕಸಾಮಂತವರ್ಗದಲಾದಪರಿಜನ ಮೆಲ್ಲಮುಂ ,ಮುನ್ನಿನಜೈನದ ರುಶನವೆಲ್ಲಮಂಬಿಡಿಸಿವಿಭೂತಿಯಂಪೂಸಿಶಿವಭಕ್ತರೆನಿಸಿ ಮತ್ತಂಮಧು ರಾಪುರದೊಳ್ನಾನಾವ್ಯವಹಾರಿಗಳಪ್ಪ ಜೈನರ್ಗೆಭಸಿತಮಂಪೂಸಿಶಿವ ಭಕ್ತರಪ್ಪ ರಾಗದಿಪೊಡೆತಲೆಗಡಿದುಬಿಸುಡು ವುದೆಂದುನರೇಂದ್ರಂನಿ ಜಸೈನ್ಯಮಂಕಳುಪಲ್ಕಾಗಳ್.

ಕಂ| ಅಸಿಗಾಡಿಸುರಗಿಚಕ್ರಂ| ನಿಶಿತಾಸ್ತ್ರಂಚಾಪಮಿಟ್ಟಿಸಬಳಂಕಣೆ ಯೆಂಬಸಡಳಬವ್ಯೈದುಗಳಸುಭಟಸಮೂಹಂಮಧುರೆಗಾಗಿ ಪರಿಮಿತ್ತ ಗಳ್ ೭೨

|ವ ಅಂತುಪರಿದುಮಧುರೆಯಂಪೊಕ್ಕು|

ಕಂ| ಪಿಡಿಪಿಡಿಜಿನಮತಪುಂನೆರೆ| ಪಿಡಿಪಿಡಿಭವಭಕ್ತಿಯಂ ಲಸದ್ಭಸಿತ ಮನೊಲ್ದಿಡಿಪಿಡಿ ಬರ್ದುಕು ವಿರಲ್ಲದೊ| ಡಡಗಡಿಯೆ ಯೆನುತ್ತಮು ರ್ಬಿಸುಭಟರ್ಕವಿದರ್ ೭೪

ವ| ಅಂತುಸುಭಟರ್ಮಧುರೆಯೊಳ್ಭಕ್ತರಾದವರುಗಳಂ ಕಾವು

ತ್ತವೊಲ್ಲದವರಂಕಧಿಖಂಡಂ| ಮೂಡಿಬಿಸುಡುವುದಂಕಂಡುಕೆಲ ಜೀವ ದಾಸೆಗೆಲಜ್ಜೆಗೆಟ್ಟಾಗಳ್

ಚಂ| ಅರಸಿವಿಭೂತಿಯಂಕೆಲಬರಿಟ್ಟು ವಿಭೂತಿಯದಿಲ್ಲದಿರ್ದೊಡಕ್ಕ ರುನಿಗೆಬಿರ್ದಗೋಮಯ ಮನಿಟ್ಟರಗೋಮಯ ಮಿಲ್ಲದಿರ್ದೊಡಂ| ಕರುಗಳನೆತ್ತಿ ಕೊಂಡುವೃಷಭೇಂದ್ರನಭೃತ್ಯಸಮೂಹ ನಾವೆನುತ್ತರ ಚಿಜಿನೇಶನಂಬಿಳುಬುಭಕ್ತಿಗಳಂಮರೆಹೊಕ್ಕುಬಾಳ್ದಿದರ್ ೭೪

ವ| ಅಂತವರಿವರೆನ್ನದೆ ಸಮಸ್ತಜನಂಗಳೆಲ್ಲರುಂಜಿನಮತಮಂಬಿಟ್ಟು ಮನೋಭಾವದಿಂಶಿವಭಕ್ತರಾದರೆಂದುಮಧುರೆಯಿಂಚೆರರ್ಬಂದು ಪೇ ಳಲ್ಕೇಳ್ದು ಮನದೊಳನುರಾಗಮಂತಾಳ್ದು,ಸೌಂದರಪಾಂಡ್ಯಂತಿರುಜ್ಞಾ ನಸಂಬಂಧಾಚಾರ್ಯರ್ಕಳನಿರೂಪದಿಂಶಿವದರುಶನಕ್ಕೆಸೋಲ್ತು ಸವಣರಂ ಬಂದಿಸಲ್ಕಿಂಮುನ್ನುವ್ಯಕ್ತರಾಗಿಮತ್ತಮಿಂತೆಂದರ್.

ಕಂ|| ಖಳ...ಕ್ಕೆ ಪನ್ನೆರಡುಸಾಸಿರಶೂಲಮ ನಾವನೀಕ್ಷಣಂ| ತ ...ದೆಕೆತ್ತಿ ...ರಿವನೆಂದರಸಂಪರಿಭಾವಿಸುತ್ತಿರಲ್ ನಳಿನದಳಾಕ್ಷಿಮಂ ...ನಾ...ರ...ನಿರೂಪಿ...ಲ್ ಕುಲಚರಿಯಾಖ್ಯ ಭಕ್ತನೊ... ...ನಳ್ಕರಿಂ

... ...ನಾಮಿನಾರರ| ಚರಣಾಬ್ಜಕ್ಕೆರಗಿನೆರೆದಸಭೆ ಬೆರಗಾ ಗು... ...ಕುಲಚರಿಯಂತ| ತ್ಕರಯುಗಮುಂಮುಗಿದುನೃಪತಿಗಂದಿ ತೆಂಬಂ|

ವ| ...ತ್ತ...ಂತೆಂದನೆನಗಂಶಿವಭಕ್ತರಪ್ರಸಾದದಿಂದ ನಾಗತಜ್ಞಾನ ಮುದಯಿಸಿ...ಗ...ಯಕ್ಕರಸಿನಾಚಿಯುರ್ಗರುಪ್ತಿರುಜ್ಞಾನಸಂಬಂಧಾ ಚಾರ್ಯರಿಂನಿಮ್ಮಡಿಗಳ್ ...ವಭಕ್ತರಾಗಿಶಿವನಿಂದಕರಪ್ಪಪನ್ನೆರಡುಸಾಸಿರ ಸವಣರಂಶೂಲದಲ್ಲಿಕ್ಕುವರೆಂದರಿದು ಪನ್ನೆರಡುಸಾಸಿರಶೂಲಂಗಳಂದಿನ ದಿನದಲ್ಲಿಸಮೆಸಮೆದಿಂತೀಬೈಗೆಯೆಂಬ ತೊರೆಯ ಮಳಲ್ದೊಳ್ದುಳ್ದು ಬೈತಿ ಟ್ಟಿರ್ಪವಂತೆಗೆದುತಪೆಯ...ನಡಿಸುವುದಕ್ಕರ್ಥಟಕಪ್ಪಕಿಂಕರರ್ಗೆದೇ ವರ್ಜಿಸನೀವುದೆಂದು ಪಿನ್ನಪಂಗೆಯ್ದಕು ಲಚರಿಯನದಿವ್ಯಜ್ಞಾನಕ್ಕೆ ಮೆಚ್ಚಿಸೌಂದರಪಾಂಡ್ಯರಾಜಂಜಯ...ಯ ಎನುತ್ತಂಮಹಾಪುಳಕೊಷರಪ್ಪ ರಿಂದಭದ್ರಿಂ ತೀಕಜ್ಜಂನಿಮ್ಮಿಂದಲ್ಲದಾಗದದು ಕಾರಣಂ ನೀವೇಬೋಳು ದೆಂದುಮತ್ತಮಿಂತೆಂದರ್||

ಕಂ|| ಅಂತುಶೂಲಗಳಣವನೀ| ಪಂತಡೆಯುದೆನೀವೆತ್ತೆಗೆದು ತರತರ ದಿಂಸ| ಟ್ಟಂತೀಕ್ಷ್ಣಮಾಕ್ಷಪಣಕ| ಪಂಥಿಯನೊಯ್ದಿಕ್ಕೆನುತ್ತೆವಿಘಟಿ ಸನಿತ್ತ್ರಂ|| ೭೩|

ನಳಪತಿಬೆಸನೀಯಲ್ಕತಿ|ಭರದಿಕುಲಚ್ಚರಿಯರೀಕಸನಣುಗಂಪಿಸಪ ಚ್ಚರದಪ್ಪಿ ಬೇಗಪೋಗೆನೆ| ಪಡಿದಂಡಬವೆರಸು ಸವಣಲಿರ್ದಡಗಾಗ ಳ್|| ೭೮|

ವ|| ಅಂತುಪರಿದೇಳ್ತಂದು ಶೈವದರುಶನಕ್ಕೆಸೋಲ್ತು ದೂಷಕರಪ್ಪ ಕ್ಷಪಣಕರಳವ್ಯೂಹ ಮಂಕಂಡು ಕುಲಚರಿಯರ್ಕಡು ಗೋಪದಿಂದಿ ತೆಂದರ್||

ಕಂ|| ಅವಲಕ್ಷಣರೆಂದೆನಿಸುವ| ಸವಣರ್ನೃಪನಂಕುವಿದ್ಯೆಯಿಂಬೋ ಧಿಸಿದಾ| ನವಸುರಿಸವೆತಿಂದ ರನು| ತ್ರವನಂದತಿಕೋಪದಿಂದೆನುಡಿದಂ ಭಳ್ತ್ರಂ|| ೭೯|

ವ|| ಮತ್ತಮಾಕುಲಚರಿಯರ್ಸವಣರ್ಗಿಂತೆಂದರ್!

ಕಂ|| ಮೃಡಭಕ್ತರಾಗೆ ನಿಮ್ಮಂ| ಬಿಡುವೆನೆನೆಲ್ಲವಣಕೊಲ್ಲೆವೆನೆ ಕು ಲಚರಿಯು|ಕಡುಗಾಯ್ದು ತೋಳೆಯುಮಳಲೊಳ್|ಮಡುಗಿರ್ದಾಶೂಲ ವಂತಿಗಂತೆಗೆಯಿಸಿದಂ|| ೮೦

ವ! ಅಂತಾಶೂಲಂಗಳಂಸಕಲಲೋಕಂನೋಡಿ ಪಿರಿದದ್ಭುತಂಬಡು ತ್ತಿರಲಧಟರಪ್ಪ ಕಿಂಕರರಿಂತೆಗೆಯಿಸಿ ಕುಲಚರಿಯಮಾಹೇಶ್ವರಂ ಭಿಗೆ ಯೆಂಬನವಿಯು ತಡಿವಿಡಿದು ನಡಿಸಿದರ್ದುನುತ್ತ್ರಮಾಗಳ್|

ಕಂ|| ತರತರದಿನಟ್ಟಶೂಲೋ| ತ್ಕರಂಗಳೊಳ್ಬಟರ ಕೈಯೊಳೆತ್ತಿಸಿ ಮಹಾ| ಸುರದಿಂತರಿಸೀರಾಸರ್| ಸಿರಸವಣರನೆಯ್ದಿಸಿಕ್ಕಿದಂ ಕುಲಚ ರಿಯಂ|| ೮೧|

ವ.| ಅಂತಾಕುಲಚರಿಯುಮಾಹೇಶ್ವರಂ ಪೃಥ್ವಿಕೌತುಕಂಬಡಲ್ಕೆ ವನೀದಕ್ಷರಪ್ಪ ಐನ್ನೆಕಳ್ನಾಸಿನ ಸವಣರಂ ಶೂಲದೊಳಿಕ್ಕಿ ತನ್ನಸುಜ್ಞಾ ನಮಂಪ್ರಕಟಿಸಿ ಶೈವದರ್ಶನಪ್ರತಾಪಮಂ ಮೆರೆದುವೀರೋದ್ರೇಕದಿಂ ದಿರುತಿರ್ಪಾಗಳ್,

ಕಂ|| ಅನಿಪಂಶಿವನಿಂಬಳರಿಂ| ದೆನಿಸುವಸವಣರ್ಗೆ ತಕ್ಕುದಾದುದೆ ನುತ್ತ್ರಂ| ದಸುರಾಗೇವಿಂತೆ ಸುಡಿಸ| ಟ್ಟನಾಳದಂ ಕೋಣಿಭೃತ್ತರ್ದನೆಂಬರ

ಪಡೆಯೊಳ್|
೮೩|
ಅನಿತರ್ಕಿಸತ್ತಲ್ಗಿರಿಶಂ| ಘನಮಾರ್ಗದೊಳಮರಪತತಿ ಬೆರಸೋ ಅಗ
ತ್ತುನಿಜಾನಂದವಿನೀಕ್ಷಿಸಿ|ಮನದೊಳ್ಕುಲಚರಿಯರರಿಗಿಗೊಲ್ದೀಕ್ಷ್ತಿಂ
ಪಂ॥
೮೪|
ಆಳಿಗೇಳ್ತಂಡಾಷ್ಟಪಣಕ| ಕುಲಕ್ಕೆಮುನ್ನರಿದುಶೂಲಮಂಕಿತ್ತಿಟ್ಟು
ತ್ಯಲಮತಿಗೆಮೆಚ್ಚಿ ಮುರರಿಪು| ಕುಲಚೆರಿಯಂಗೊಲಿದು ರೂಪುದೋರಿ
ದನಾಗಳ್॥
೮೪|
ಬಾಲೇಂದುಗಂಗೆಫಣಿಗಂ| ಭಾಲಾಕ್ಷಿವಿಭೂತಿಡಮರುಗಂಕರಪಾ
ಕ್ಕ! ಲೀಲಲಸವೆರಸು ಮೆರೆದಂ| ಶೂಲಿಲಸತ್ಪಂಚಮುಖದಿ ದಶಭುಜ
ದಿಂದಂ॥
೮೫|
ಜೈನರಭಯಮಳ್ಕದೆಸು| ಜ್ಞಾನಂಮಿಗೆಗುಪ್ತದಿಂ ತ್ರಿಕಾಲದೊಳ
ರ್ಚ್ಚಿಂ| ತಾನಿರ್ದರ್ಚಿಸಿದ ನಿನ| ಲ್ಕೀನೆಂಬಿಂಗಿರಿಜೆ ಮಿವನಭಕ್ತಿಯುಹೆ
ರ್ಚ॥
೮೬|
ವ| ಎಂದೆನುತ್ತಮಾನಂದಿನಾಥಂಗಿಂತೆಂದಂ॥
ಕಂ| ಮುನ್ನವೆತಾಂಸವಣಗರ್ಂ| ಪನ್ನೆರಡುಸಹಸ್ರಶೂಲಮಂಕಿತ್ತಿ
ಟ್ಟು| ಟ್ಟಂನಿಜವಿಾಕುಲಚರಿಯಂ| ಸನ್ನುತನಪ್ಪರಿವಿನೋದನದನೇಳೊ
ಗ್ದ್ಯಂ॥
೮೭||
ವ| ಎಂದುಪೊಗಳ್ದು ಕೊಂಡಾಡುತ್ತಂ ತಾಂಬರಿಸಿದದಿವ್ಯಪುಷ್ಪಕದೊ
ಳ್ಕುಲಚ್ಚರಿಯ ಮಾಹೇಶ್ವರನಂ ಕುಳ್ಳಿರಿಸಿ ಪರಮಕರುಣದಿಂನಿಜಾ
ಲಯಸಲ್ಕಾಗಳ್॥
ಕಂ| ತಿರುಪಿಳ್ಳೆನಾಯಿನಾರ ಸ್ವರಪತಿಮಂಗರಸಿ ನಾಚಿಯರ್ಬೆರಗಾ
ಸುತ್ತಿರಕುಲಚರಿಯುಸಮೇತಂ| ಸುರಪುಷ್ಪಕವಭವಗಿರಿಗೆಬಂದುತ್ತಾ
ರ್ಚ॥
೮೮
ವ| ಅಂತುಬಂದ ಕುಲಚರಿಯುಮಾಹೇಶ್ವರನಂ ಪ್ರಮಥಗಣಪರಿವೃತ
ನಾಗಿ ಗಿರಿಜಾರಮಣನೋಡ್ದೊಲಗಂಗೊಟ್ಟು ಕುಳ್ಳಿರ್ದಾಗಳ್|
ಕಂ| ಪರಮಕೃಪೆಯಿಂದೆಕುಲಚರಿ| ಯರಭಕ್ತಿಗೆಚಾರುತರದೆಗಣಪ
ದಮಂಕೊಟ್ಟು ರುತರಸಂಭ್ರಮದಿಂದಂ ಗಿರಿಜಾವರನೆಸೆವುತಿರ್ದನಾ
ಸಭೆಯೊಳ್
೮೯|

ಪರಿಕಿಸಲಿತ್ತಲ್ತ್ರಿಭುವನಗುರುಪಿಳ್ಳೆಯನಾಯಿನಾರರಂಪಾಂಡ್ಯಂಮ್ಮಂ ಗರಸ್ಸಿಯರಾಕುಲಚರಿಯಂ ಹರಗಿರಿಗಂತಾಂ ಪೋದುದಕ್ಕೆರ್ ಬೆರಗಾಗಿ ದರ್ರ್॥ ೯೦।

ವ॥ ಅಂತುಬೆರಗಾಗಿರುತ್ತಾಗಳ್ಸೌಂದರಪಾಂಡ್ಯಂಮಂಗರಸಿನಾಚಿಯು ಕ್ಕೇರಕಮಲಮಂಮುಗಿದು ತಿರುಜ್ಞಾನಸಂಬಂಧಗೆರ್ ಭಯಭಕ್ತಿಯಿಂ ದಿಂತೆಂದರ್॥

ಕಂ॥ ಧರೆನೋಡೆನೋಡೆಕುಲಚರಿ। ಯುಗನೊಯ್ದಂ ಗಿರಿಶನಕಟನ ಮಗೀಪುಣ್ಯಂ। ದೊರಕದೆ ಪೋಯ್ತೆನುತಳಲು।ತ್ತಿರೆಪಿಳ್ಳೆಯನಾಯಿನಾರರವಗ್ರಿಂತೆಂವರ್ ೯೧

ಗಿರಿಶಂನಮ್ಮಂನಿಮ್ಮಂ ಕರುಣದಿ ರಜತಾದ್ರಿಗೊಯ್ದು ಗಣಪದವೀ ವಂನಿರುತಮೆನುತಭಯವಿತ್ತಾ। ತೆರದಿಂತಿರುಪಿಳ್ಳೆನಾಯಿನಾರರ್ನುಡಿದರ್ ೯೨

ವ।ಅಂತುಮುಂದೆಅಚಳಪದವಪ್ಪುದಂ,ಕೇಳ್ದು ಸಂತೋಷಂಬಟ್ಟು ಸೌಂದರಪಾಂಡ್ಯರಾಜನುಂಮಂಗಾಯ ಕ್ಕರಸಿನಾಚಿಯರುಂ ಕೈಗಳಂ ಮುಗಿ ದುದೇವಾನಿಮ್ಮಡಿಗಳ ಕಾರುಣ್ಯದಿಂದೆನ್ನಪಾಂಡ್ಯದೇಶದೊಳೆಂಬ್ಬ ನೂರುಪಸರಿಸಿತ್ತುಶೈವಮಯವಾಯಿತ್ತುಶಿವನಿಂದಕರಪ್ಪಸಪಣರ ತ್ತುಜನಮಯವಾಯಿತ್ತುಪುಣ್ಯಂಕಣ್ದೆರೆಯಿತ್ತು ಕೃತಾರ್ಥನೆನಿ ನ್ನೊಲವಿಂಮಧುರೆಗೆಬಿಜಯಂಗೆಯ್ದು ನಗೆ ಶೈವೋಪದೇಶಮಂ ಮಾ ಡ್ದು ದಿನ್ನೊಳುವುದೆಂದುಬಿನ್ನವಿಸಲ್ಕಾ ಕರಾದೃಷ್ಟಿಯಿಂನೋಡಿತಿರುಜ್ಞಾ ನಸಂಬಧಾಚಾರ್ಯರುಂಪಂಚಮಹಾವಾದ್ಯದರಭಸದೊಳೆಡಾಗ

ಕಂ। ಉತ್ತಮಭಕ್ತಜನಮುತ। ಮತ್ತೇಭಾಂಕುಶನೆಜಯಎನುತ್ತಂ ಪೊಗಳಲ್। ಚಿತ್ತಜಹರನಕುಮಾರಂಮುತ್ತಿನಮಂಟಪವನೇರಿ ತಳರ್ದನದಾಗಳ್ ೯೩

ವ ಅಂತುತಿರುಜ್ಞಾನಸಂಬಂಧಾಚಾರ್ಯರಪಿಂದೆಶೆಯೊಳ್।

ಕಂ ದ್ವಿರದಾಧಿಪನಂಮಂಗ। ಕ್ಕರಸಿಯರುಂಬೆರಸಪದೆ ಸೌಂದರಪಾಂಡ್ಯಂ। ನೆರೆದನಿಜಸೈನ್ಯಸಂಯುತ। ಸಿರವಾತ್ಮಪುರಕ್ಕೆ ತಳರ್ದನಂದೊಲವಿಂದಂ ೯೪

ವ॥ ಅಂತಾಸೌಂದರಪಾಂಡ್ಯರಾಜನಿಭೇಂದ್ರನಿಂದಪನಿತಳಕ್ಕವತರಿಸಿ

ಯಾದರದಿಂಮುತ್ತಿನಮಂಟಪದೊಳಿರ್ದತಿರುಜ್ಞಾನಸಂಬಂಧಾಚಾರ್ಯ
ರ್ಗೆಸಕ್ಕೈಗೊಟ್ಟುತಂದುಲಿಂಗಪೂಜಾ ನಿಶಾಂತದೊಳ್ಪೊಕ್ಕು ನಿಕ್ಕುಳ್ಳಿರಿ
ಸಿಬಳಿಕ್ಕಂತಃಪುರಕಾಂತಾಸಂತತಿ ತಂದರನ್ನದಾರತಿಯನೆತ್ತಿ ಸಹಸ್ರ
ಸಂಖ್ಯೆಯಂನಿವಾಳಿಸಿಬಿಸುಟ್ಟು ಪರಿಮಳೋದಕದಿಂಪಾದ ಪ್ರಕ್ಷಾಳನಂ
ಗೆಯ್ದು ಪಾದ ತೀರ್ಥಮಂ ಕೊಂಡುಭಕ್ತಿಯಿಂದೆನಗೆ ಶೈವೋಪದೇಶ
ಮುಮೊಗಲೆವ್ವೆಳ್ಕೆಂದುಮನದೊಳ್ನೆನೆದುಕುಳ್ಳಿರ್ದಾಗಳ್

ಕಂ ಸೌಂದರಪಾಂಡ್ಯಂಭಕ್ತಿಯೊ| ಳೊಂದಿವಿಚಾರಿಸುವ ಪುಂಗಕಸಿ
ಯರ್ವೆಕಸಾ | ನಂದವಿನಭವಕುಮಾರಂ| ಗಂಡಾನತನಾಗಿಕ್ಕೈಗಳಂ
ಮುಗಿದೆಂದಂ ೯೫

ತಮವಂನುಂಗುವ ರವಿಬಿಂ|ಬಮನದ ಕಿರಿದೆಂದು ಬಗೆವರೇತಿಳಿಯದೆನಿ
ಮ್ಮಮನವನಿಯೊ ಳೇಳ್ಪುಷದ ಕುಮಾರ ನೆಂದೆಂಬರೆ ಜಗದ್ಗುರುಪರಿ
ಯಾ ೯೬

ಶರಲೆಂಬರೆಸುರಮಣಿಯಂ| ತರುವೆಂಬರೆಕಲ್ಪಭೂಜಮಂ ಶ್ರೀನಗಮಂ
ಗಿರಿಯೆಂಬರೆಗುರುನಿಮ್ಮಂನರರೆಂಬರೆ ಯೆಂದು ಪಾಂಡ್ಯರಾಜಂ ಪೊಗ
ಳ್ದಂ ೯೭

ವ ಎಂದುಸೌಂದರಪಾಂಡ್ಯರಾಜಂತಿರುಜ್ಞಾನಸಂಬಂಧಾಚಾರ್ಯರ್ಗೆಸ
ಕಿಂಕರ್ವಾಣತೆಯಿಂವಿಜ್ಞಾ ಪನೆಯಂಚೆತ್ತವಿಪುದೆನುತಂಮತ್ತ ಮಿಂತೆಂ
ದಂ||

ಚಂ| ಇನಿತುದಿನಂತಧರ್ಮಜಿನದರ್ಶನ ಪಂಕದೊಳಿರ್ದ ದೇಹಮುಂ
ಘನಶಿವಭಕ್ತಿಯೆಂಬಮಳವಾರಿಯೊಳಾತ್ಮಕರಾಬ್ಜದಿಂದೆಳ್ತೊಂಕನೆತೊ
ಳೆದಿಂದುಸತ್ಸುಕ್ಮ ತನಂನೆರೆವೊಳ್ಪುದು ತಂದೆಶಂಭುನಂದನಕೃಪೆಯಿಂ
ದೆನುತ್ತೆರಗಿದಂನುತಸೌಂದರಪಾಂಡ್ಯಭೂಭುಜಂ|| ೯೮

ಕಂ| ಕನಸಿನ ಪೊನ್ನಂ ವಾಸವ| ಧನುವಂಪರ್ಬಿದ ಮರೀಚಿಕಾಜಲ
ಮಂತೊ| ಟ್ಟನೆನಿಜಮೆಂಬವನಂತಿರೆ| ಜಿನಮತಮುಂನಂಬಿಕೆಟ್ಟೆನೆನ್ನಳು
ರಾಪಂ|| ೯೯

ಇಂತೀಪರಿಯೊಳ್ಪಂದರು| ಹಂತಸಮತವಿಡಿದುಕೆಟ್ಟಪಾಪಿಯುನೆನ್ನಂ
ಸಂತುಹರಸುತನೆಕೂರ್ತತ್ಯಂತಂರಕ್ಷಿಪುದೆನುತ್ತೆ ಕೈಮುಗಿದೆಂದಂ ೧೦೦
ಒಡಿನಗೆ... ವಾದಿನ...ಕಂಶಸ್ತ್ರನಂಗಳೊಳ್ಸವಿವಾಲಂ| ನೋ

ಡುವಪೆರ್ವುಳ್ಗಳುಂತಿರೆ| ಪೀಡೆಜಿನಾಗಮ ದೊಳೆಸುತ್ತಿರ್ದೆಂಗತ್ತಿಯುಂ

ಕರಮುಂಪುಗಿದಿರ್ದಾಸೌಂದರಪಾಂಡ್ಯಮುಖಸ್ಸಳೋಜಮಂದಿನಕ
ರನಂ| ತಿರೆಪಿಳ್ಳೆನಾಯಿನಾರ| ರ್ಪರಿಕಿಸಿ ಸತ್ಕರುಣದಿಂ ಪ ಲಂಪಿಂತೆಂದ
ರ್|| ೧೧೩

ಭಸಿತಮನಾವಾಗಳ್ಗೆಂ| ನೊಸಲೊಳ್ತಳೆದೀಶಮಂತ್ರಮಂಮನದೊ
ಳ್ಜಪ| ನಿಸಿದಂದೆ ಧನ್ಯನೆನಿಸಿದೆ| ವಸುಧಾಧಿಪ ಕೇಳ್ಸ್ವಸೃಪಮಾರ್ಗದಪ
ರ್ಗಂ| ೧೧೪

ಪಿರಿದಿಳುಪೆಗಿರಿಯನಡರ್ವಂ| ತಿರೆನೋಳ್ಪೊಡೆಕವರ್ವದಿಂದಮೊಯ್ಯನೆಪ
ಗ್ಗಂ| ಗರುಡಂಶೈಲಕ್ಕೇರುವ| ಪರಿಭಕ್ತಿಯೊಳೆಯ್ದು ವಭವಲೋಕಂ ನೃ
ಪತೀ| ೧೧೫

ಭರ್ಗನನನಿಶಂನಿಂದಿಸಿ| ದುರ್ಗತಿಗಂಪೋಪಬುದ್ಧಿ ತಮ್ಮೊಳಗಿರುತಂ|
ಸ್ವರ್ಗಾಪವರ್ಗಮಂ ಬಯ| ಸರ್ಗ್ಗವಿಲರಲ್ತೆಸವಣರವ ನೀತಲದೊಳ್

ವ| ಅದುಕಾರಣಂವೇದಬಾಹ್ಯಮಪ್ಪಜೈನಾಗಮಮುಮಂಬಿಸುಟ್ಟುಜಗ
ತ್ಪಾವನಮೆನಿಪಶೈವಾಗಮಕ್ಕೆನಿನ್ನಯಮನವೆರಗಿತ್ತುನೀಂಧನ್ಯಂ ವಿಚಾ
ರಿಪೊಡೀಮನುಷ್ಯಜನ್ಮಮಿದೆಂತೆಂದೊಡೆ|

ಕಂ| ಘನಯೋನಿಜಂಗಳೆಂಭತ್ತುನಾಲ್ಕುಲಕ್ಷಂಗಳದರೊಳತಿದುರ್ಲಭ
ವೀಮನುಜಭವವಲ್ಲಿಸತ್ಕುಲ| ಜನೆನಿಸಿ ಶಿವ ಭಕ್ತನಪ್ಪುದಾಳನೆಭೂ
ಪ್ಪಂ| ೧೧೬

ವ| ಮತ್ತಮಾಮನುಷ್ಯಜನ್ಮವಾದಲ್ಲಿತಾರುಣ್ಯಯೌವ್ವನವಾರ್ಧಿಕ್ಯ
ಮೆಂದುಮೂರವಸ್ಥೆಯುಂಟವರ ಭೇದಂಗಳಂ ಕೇಳ್ಭೂಪಾಲಯೆಂದುಪಿ
ಳ್ಳೆಯನೈನಾರರಿಂತೆಂದರ್||

ಕಂ| ತರುಣತೆಯೊಳ್ಬಸುರಿಂಗಳು| ವುರುತರ ಯೌವ್ವನದೊಳ್ ಬರೆ
ಯರಸಂಗಕ್ಕಾ| ತುರಿಸುತ್ತಿರ್ಪ ಮರ್ನುಜ| ರ್ಗಿರಿಶನನರ್ಚಿಸುವಬಗೆ
ಯದಿಲ್ಲಾ ದಿನದೊಳ್|| ೧೧೭

ಭರದಿಂದಂಮುಂದಲೆಯುಂ |ಜರೆಯುಂಬಳ್ಪಿಡಿದುಬಾಯನೊದೆಯಲ್ಪಿ
ರ್ದ೦| ತಿರೆಪಲ್ಗಳುದುರಿ ಮುಪ್ಪಾವರಿಸದಮುನ್ನ ಭವಪದವ ನರಿಪನೆಧ
ನ್ಯಂ|| ೧೧೮

ತನಗೆತೊಡವಪ್ಪ ನಪ್ಪಯೌವನ ರತ್ನಂಬಿರ್ಪುದೆಂದು ನೋಳ್ಪಂತಿರ

ನೆಟ್ಟನೆಬೆನ್ನು ಬಾಗಿ ಪೆಸ್ಸಿಸಿರಿ| ಯನುಗೆಡೆದಂದ ಚಳಶಿವನ ನೆನೆವನೆಕ್ಕ
ಸ್ತಂ॥
೧೦೯

ಮತ್ತಂ

ತರಳವೃತ್ತಂ॥ ಅರಲ್ದಕಾಶಲತಾಂತಜಾಳನಿಕಾಶಪಾಂಡುರಕೇಶ. ಮಾ
ಸುರದಿನಾನನದಲ್ಲಿ ತಳ್ತಿರಲಸ್ಥಿನಟ್ಟುಸರೋರುಹಾ| ಕರಮನೀಕ್ಷಿಸಿಸಜ್ಜ
ನರ್ತರ್ಗರವಂತೆಕಾಮಿನಿಯರ್ಬಗಹಿ| ಸ್ಮರಿಸಿಪೇಸದವುನ್ನಮೀಕಸನ
ರ್ಗಸಂಸುಕೃತಾತ್ಮಕಂ॥
೧೧೦

ಕಂ॥ ಎನ್ನಮನೆಯೆನ್ನವಾನಿನಿ| ಯೆನ್ನತನೂಜಾತರೆನ್ನ ರಾಜ್ಯಶ್ರೀ
ಯುಂ ತೆನ್ನಧನವೆನುತಿ ವಳಿಯದ| ಮುನ್ನಂಪರಶಿವನನರಿವ ನಾತನೆ
ಧನ್ಯಂ॥
೧೧೧

ನಡೆದೊವಲಪಾಪಕಾಳಿಜ| ದಡಿಕಿಲ್ಲನರೋಗ ದಾಗರಂ ತಾನೆನಿಪೀ
ಒಡಲಿದುಕಾಲನತಿಂದುಳು| ಜಡಮನುಜರ್ನಿತ್ಯವೆಂಬು ಮಯ್ಮಾಕ
ರ್ಪರ್॥
೧೧೨

ವ॥ ಮತ್ತಮೀಮನುಷ್ಯರಾಯುಷ್ಯವ ಶಂಪತ್ಪಾಗ್ರಸ್ಥಿತೋದಕಬಿಂ
ದುಗಳಂತಧ್ರುವಮದುಕಾರಣ ಮಿದನರಿದುಸದ್ಗುರುಕಾರುಣ್ಯಮಂ ಪಡೆ
ದುಶಿವಜ್ಞಾನಸಂಪನ್ನನಪ್ಪನಾತಂದುರ್ಲಭಂ ಕೇಳ್ಭೂಪಾಲಕನೀಂ ಮು
ನ್ನಂಸುಕೃತಾತ್ಮಕನಲ್ಲದಿದೊರ್ಗಡೀನಿಷ್ಕಳಂಕಮಪ್ಪಶೈವಾಗಮ ಕ್ಕೆರ
ಸುವುದೆಭವದೀಯ ಚಿತ್ತವೆನುತ್ತಂತಿರುಜ್ಞಾನಸಂಬಂಧಾಚಾರ್ಯರ್ದರ್ಶ
ಮಾದೃಷ್ಟಿಯಿಂ ನೋಡಿಪರಮಶಿವನಮಾಹಾತ್ಮ್ಯಮಂಬಿಚ್ಚಣಿಸಲ್ಕಿಂತೆಂ
ದರ್॥

ಕಂ॥ ಹರಣಂಪೋಪಾಗಳ್ಕಳ್ಕುರವದುಮೆಟ್ಟಲ್ಕೆಭಾಳದೊಳ್ಭಸ್ಮಂಪ
ರ್ಪರೇಣುಕಂಗೆಸದ್ಗತಿ| ದೊರಕಿತ್ತೆನೆಭಸಿತದಶೆವನದನೇವೊಗಳ್ವೆಂ

ಮತ್ತಂ

ಪರಶಿವಮೂರ್ತಿಯಬಲಗ| ಣ್ಣರೆಯಂಪುಟ್ಟಸುವುದೆಡದಕಣ್ಣೊರೆ
ಕುದುಭೀ |ಕರನಿಟಿಲದಕಣ್ಣಾವುದು|ವಿರಿಂಚಹರಿರುದ್ರರೆನಿಸಿದವನೇ
ವೊಗಳ್ವೆಂ|
೧೧೪

ಕನಿಮಿಷನುನಿಮೇಷಂಗಳೊಳನೇಕಜಗವೊಗುವವದಳಿವುದೆಂಬ ಮ
ಹಿಮೆ| ವಿನಿಕಲ್ಪಿತಕಲ್ಪಗಳೊ| ... ಪರಕಟು ಮೂಢರವ

ನೀತಲಡೊಳ್‌॥ ೧೧೫

ಪಿಂಗದೆಪೂಜಿಸುವಾವನ। ಲಿಂಗಂಲೋಕಕ್ಕೆ ಘನಚತುರ್ವಿಧ ಪುರು
ಷಾರ್ಥಂಗಳನೀವುದೆನಲ್ಕಾ। ಗಂಗಾಧರನಧಿಕ ಗುಣಮನದನೇಂಪೊಗ
ಳ್ವೆಂ॥ ೧೧೬

ವ ಧರೆಯೇಕಾರ್ಣವಮಾಗಿಪಿಂದೆಹರಿದಾತರ್ಗರ್ಭದಿಂದಾಂ ಘನಂ
ನಿರುತಂತಾಂಘನವೆಂ ದುಪೇಳುತಿರಲಾತಾನಿರ್ಬರುಂನಿಟ್ಟಿಸ। ಸ್ಕರಿಲಿಂ
ಗಾಕೃತಿದೋರಿತನ್ಮನದಹಂಕಾರಂಗಳಂನೂಂಕಿದಾ। ಪರತತ್ವಾತ್ಮಕ
ಶಂಭುವಂಭಜಿಯಿಪರ್ಧರ್ ನ್ಯರ್ಪರಧರ್ನ್ಯರೇ॥ ೧೧೭

ವ॥ ಇಂತಪ್ಪ ಸದಾಶಿವನಲ್ಲಿ ನೃಪನೀಂಭಕ್ತನಪ್ಪುದ ಪೂರ್ವಮೆಂತೆಂ
ದೊಡೆ ರಾಜಸತಾಮಸಸಾತ್ವಿಕಮೆಂಬಿವರಲ್ಲಿ ತದ್ಗತರಾಗಿರ್ಪವರಲ್ಲದೆ
ನಿಮ್ಮಂತೆಪರಮಭಕ್ತಿಮುತ್ತಾಗಿರ್ಪರಾರುಂಟೆಲೆಸೌಂದರಪಾಂಡ್ಯರಾ
ಜಾಯೆಂದುಶಿಷ್ಯನರಿವಿಂಗೆಮೆಚ್ಚಿಶೈವೋಪದೇಶಮಂಮಾಡಲ್ವೇಳ್ಕೆಂದು
ಶಿವಶಾಸ್ತ್ರೋಕ್ತಿಯಿಂಶ್ರೀಗುರುದೀಕ್ಷಾಕ್ರಮಮಂಕೇಳೆಂದಿಂತೆಂದರ್‌॥

ಕಂ॥ ಕಾಯದೊಳಿರ್ಪ॥ಯಾಣವ। ಮಾಯಿಕಕಾರ್ಮಿಕ ಮೆನಿಪ್ಪ
ಮೂರುಮಲಂನಿ। ರ್ಮಾಯಗುರುಪದವನರಿಯಲ್। ನಾಯಾಸದಿಪಿಂಗಧ
ನೃಶಪ್ಪರ್ಧರೆಯೊಳ್‌। ೧೧೮

ಒಡವಿರ್ದೇಕಾದಶಲ। ಕ್ಷದತೊಂಬತ್ತೆಂಟುಸಾಸಿರದಮೇಲರುನೂ
ರ್ಪಿಪಿಂ ನೋಳ್ಪೊಡೆ ದೀಕ್ಷೆಗ। ಳದರೊಳ್ವರ್ತಿ ಪುವುನಾಲ್ಕುಭೇದಂ
ಧರೆಯೊಳ್‌॥ ೧೧೯

ವ॥ ಅಂತಾನಾಲ್ಕುತೆರದಭೇದವೆಂತೆಂದೊಡೆ॥

ಕಂ॥ ಕರುಣಾಲೋಕಂಜ್ಞಾನಂ। ವರಯೋಗಂಕ್ರಿಯೆಗಳೆಂದು ನಾ
ಲ್ಕುತೆರಂಸ। ದ್ಗುರುದೀಕ್ಷೆ ಮೂರುಭೇದವ। ನುರುತರಭಕ್ತಿಯೊಳಿಕೇ
ಳ್ನರಾಧಿಪವರ್ಯಾ॥ ೧೨೦

ವ। ಮತ್ತಂವೇಧದೀಕ್ಷೆಯೆಂಬುದುತ್ತಮೋತ್ತಮಂಗೆ ಜ್ಞಾನದೀಕ್ಷೆ
ಯೆಂಬುದುತ್ತಮಂಗೆಯೋಗದೀಕ್ಷೆಯೆಂಬುದು ಮಧ್ಯಮಂಗೆ। ಅಂತವ
ರಪರಾಕ್ರಮವೆಂತೆಂದೊಡೆ। ಮತ್ತಂಶ್ರೀಗುರುಕಟಾಕ್ಷನಿರೀಕ್ಷಣದಿಂ
ಪಾಶೋನ್ಮೂಲನಾಗಿಶಿವತ್ವಪಾದಾದೀಕ್ಷೆಯೆಂಬುದದೆವೇಧದೀಕ್ಷೆ ಮ
ತ್ತಂ ಶ್ರೀಗುರುಕೃಪೆಯುಂಮನಃಕರಣೇಂದ್ರಿಯಂಗಳಂತನ್ನಲ್ಲಿಂಡಸ

ಪರತಾನಂದ ಸಂದೋಹಜಗಧೀಶಂಗೆ ಯಿದ್ದುಸುವ ತನ್ನ ನಲ್ಲಿಂದುಬಗೆವ ಬಗೆಯಿಂ ತಿಳುಪಿಪಾಶೋನ್ಮೂಲಮನಾಗಿಸಿಶಿವತ್ವಾಪಾದನೀಕ್ಷೆಯೆಂಬುದದೇಜ್ಞಾನದೀಕ್ಷೆ. ಮತ್ತಂಶ್ರೀಗುರು ಕಾರುಣ್ಯದಿಂ ಯಮಾದ್ಯಷ್ಟಾಂಗ ಯೋಗಯುತನಾಗಿ ತನ್ನಿಷ್ಟಮಪ್ಪ ತಾಣದಲ್ಲಿ ತಿಲದೊಳಗಣತೈಲದಂತೆಕಾಷ್ಠದೊಳಗಣಾಗ್ನಿಯಂತೆ ಪುಷ್ಪದೊಳಗಣಪರಿಮಳದಂತೆತೋರ್ಪುದೆಂದರುಪಿ ಪಾಶೋನ್ಮೂಲನಮಾಗಿ ಶಿವತ್ವಾಪಾದದೀಕ್ಷೆಯೆಂಬುದದೇ ಯೋಗದೀಕ್ಷೆ ಮತ್ತಂಶ್ರೀಗುರು ಮಹತ್ಮೆಯಿಂ ಶೈವಶಾಸ್ತ್ರಮಾರ್ಗದಿಂ ಕುಂಡಮಂಟಪ ಶಿವಶಾಸ್ತ್ರ ಮಂತ್ರ ಕುಂಭಂಗಳ್ಮೊದಲಾಗಿ ಸಕಲಪುರಸ್ಸರಮಾಗಿ ಶಿಷ್ಯನದೇಹೇಂದ್ರಿಯಗತಮಪ್ಪ ಮಲತ್ರಯಂಗಳಂ ಕೆಡಿಸಿಶಂಭುವಂ ನೆಲೆಗೊಳಿಸಿ ವಿಭೂತಿರುದ್ರಾಕ್ಷೆಗಳ್ಮಖ್ಯಲಾಂಛನಮಂ ಮೆಯ್ಯೊಳಳವಡಿಸಿ ಶಿವಲಿಂಗಪೂಜೆಯುಂಮಾಡಿಬಳಿಕ್ಕಂಪ್ರತ್ಯೇಕಂನಾಲ್ಕುವಿಧಮಪ್ಪಮೂರ್ಆರ್ಪಣಮಂ ಮಾಡಿಉತ್ತಮದಯಾಸಹಿಂತದಶವಿಧಪ್ರಸಾದಸೇವನೆಯುಂಮಾಳ್ಪುದೆಂ ಬುದಂಪೇಳ್ದುಪಾಶೋನ್ಮೂಲನಮುಂಮಾಡಿ ಶಿವತತ್ವಮನಾಪಾದಿಸುವುದೆಂದು ನಿಯಾಮಿಸುವುದೇಕ್ರಿಯಾದೀಕ್ಷೆ ಇವುನಾಲ್ಕುದೀಕ್ಷೆಯೊಳಂಪಲವುಭೇದಂಗಳುಮಿರ್ಕುಂ

ಕಂ॥ ಇವುಷೋಡಶದೀಕ್ಷಾಕ್ರಮ! ಪವನಿಪಕೇಳಂಶಿವರ್ಕೆ ನೀನೇಪ್ರಾಪ್ತಂ। ಭುವನಂಗಳೆಲ್ಲಮರಿಯಲ್। ಶಿವಲಿಂಗಂನಿನ್ನ ನೊರಲ್ದು ಮುಡಿಪಂನಿರುತಂ॥ ೧೨೧।

ವ॥ ಎಂದುತಿರುಪಿಳ್ಳನಾಯಿನಾರರ್ಕೇಳ್ಭೂಪ ನಿನಗೆಮುನ್ನಂಘನತರದೈಶ್ವರ್ಯ ಪರಸಮಯವಾಸಿತ್ವ ದುರ್ವಿವೇಕತ್ವಮೆಂಬಿವರಿಂ ಗುರುಲಿಂಗಜ ಭಕ್ತಿಹೀನತೆಗಳುಂಟಾಗಿರ್ದವ ವೀಗಳ್ಪೋಗಿ ಶುದ್ಧಾಂತಃಕರಣನಾದೆಯಾಗಿನಿಜಪೇದಜ್ಞಾನ ಯೋಗದೀಕ್ಷೆಯೆಂಬುದಂ ಕೇಳಲ್ಕಧಿಕಾರಿಯಾದೆ ಯದುಕಾರಣದಿಂ ಶಿವದೀಕ್ಷೆಯಂಮಾಳ್ಪೆವೆಂದು ತಿರುಜ್ಞಾನಸಂಬಂಧರ್ಶುಭಕಾಲ ದೇಶಂಗಳಲ್ಲಿಕುಂಡಮಂಟಪದೊಳ್ಕಳಶಸ್ಥಾಪನೆಗಳಂಮಾಡಿ ಚತುರ್ವಿಧದೀಕ್ಷೆಗಳಂ ಕರುಣಿಸಿ ಪರಮಾನಂದಶಿವಾತ್ಮಕನಂಮಾಡಿ «ಪೂಜಯಧ್ವಂಪ್ರಯತ್ನೇನ ಪುತ್ರದಾರಾಸ್ಸಮಾಶ್ರಿತಃ» ಎಂದುಶಿವಶಾಸನಮೆಂದುದಾಗಿ ನಿನ್ನದೇಶಪ್ರಜಾಪ್ರಕೃತಿಗಳ್ ನಿಜಕಳತ್ರಪುತ್ರಾದಿಗಳ್ಸಹಿತಂ ಶಿವದೀಕ್ಷಾಯುಕ್ತ ಮಹಾಲಿಂಗ

ಸವಶಾರಾಧನೆಯಂ ಮಾಳ್ಪುದೆಂದು ಕಾರುಣ್ಯಂಗೆಯ್ದಾಗಳ್॥

ಕಂ॥ ಹರವರಪೂಜಾಕ್ರಮಮಂ। ಕರುಣಂಮಿಗೆ ಪಿಳ್ಳೆನಾಯಿನಾರಾಚಾರ್ಯರ್। ನಿರುಪಮಸೌಂದರಪಾಂಡ್ಯೋ। ರ್ವರೇಶ್ವರಂಗಾಗಮೋಕ್ತಿಯಿಂದಂಪೇಳ್ದರ್॥ ೧೩೩।

ವ॥ ಅಂತುಪೇಳಲ್ದಾಗಳ್॥

ಮ॥ ನೆರೆದಿರ್ದೀಶ್ವರಭಕ್ತರಾಜ್ಞೆವಿಡಿದಂ ತಾಜ್ಞಾನಸಂಬಂಧರಾ। ದರದಿಂಸೌಂದರಪಾಂಡ್ಯಭೂಮಿಪತಿಗಂಸದ್ಭಸ್ಮಮಂಪೂಸಿ ಪಂಚಾಕ್ಷರಿಯಂ ಪೊಡಲ್ದಕಿವಿಯೊಳ್ ಕಾರುಣ್ಯದಿಂ ಪೇಳ್ದು ಶಂ। ಕರನಂ ಪೂಜಿಪುದೆಂದುತೋರಿ ನಿಜಶೈವಜ್ಞಾನಮಂಬೀರಿದರ್॥ ೧೩೪।

ಮತ್ತಮಿಂತೆಂದರ್॥

ಕಂ॥ ಗುರುಲಿಂಗಜಂಗಮಂಗಳ।ಪರಿಚರಿಯಕ್ಕೆಂಗಚಿತ್ತಧನಮಂಬುದನಾ। ಪರದಿನಸವೆಯಿಪುದೆಲೆಭೂ। ವರಕೇಳ್ನಿನಗಕ್ಕುಲೋಕದಾಯುಂಶ್ರೀಯುಂ॥ ೧೩೫।

ವ॥ ಎಂದುತಿರುಜ್ಞಾನ ಸಂಬಂಧಾಚಾರ್ಯರ್ ಸೌಂದರಪಾಂಡ್ಯಂಗೆ ದಿವ್ಯಜ್ಞಾನ ಮುದಯಿಪಂತೆ ಶೈವೋಪದೇಶಮಂಕರುಣಿಸಿ ಶಿವಭಕ್ತಾಗ್ರಗಣ್ಯನಪ್ಪ ವಿಕ್ರಮಚೋಳನ ಕುಮಾರಿಯಪ್ಪ ಮಂಗಕರಸಿನಾಚಿಯರ್ಗೆ ಮಹಾಕೃಪೆಯಿಂದಿಂತೆಂದರ್॥

ಕಂ॥ ನಿನ್ನ ಮನದಿಚ್ಛೆಯಾಮದು। ನಿನ್ನ ಯುಪತಿಲಿಂಗಭಕ್ತನೆನಿಸಿದನಹೊಕೇಳ್ನಿನ್ನ ಪುಣ್ಯಮನಲ್ಕಾ। ತ್ಯುನ್ನತಹರುಷದೊಳಗುಳಿವಿನಡಿಗೆರಗಿರ್ದಳ್। ೧೩೬।

ವ॥ ಅಂತಡಿಗೆರಗಿ ಮಂಗಾಯಕ್ಕರಸಿ ನಾಚಿಯರ್ಪಿಳ್ಳೆ ನಾಯಿನಾರರ್ಗೆ ಕೈಗಳಂಮುಗಿದಿಂತೆಂದಳ್॥

ಕಂ॥ ಪರಗುರುವೆ ನಿಮ್ಮ ಕೃಪೆಯಿಂ। ಶರೀರದುರಿಪಿಂಗಿ ಕೂನದಳಿದೀಗಳ್ಪಾಂ. ಡರಪಾಂಡ್ಯನೆನಿಸಿದಂಮ। ದ್ವರನೀಶ್ವರಭಕ್ತನಾದನೆನ್ನ ಪುಣ್ಯಂ॥ ೧೩೭।

ಕಲಚರಯಿನಿರ್ಮ್ಮಂದಂ। ಕಳಧೌತಾಚಲಮನೆಯ್ದಿ ದರ್ಪನೆಸಮಯಂ। ಸಲೆನಾಶಮಾಯ್ತು ಶೈವದ। ಛಲಮುದುಗೆಲ್ದತ್ತು ಗುರುವೆನಿಮ್ಮಯಕೃಪೆಯಿಂ॥ ೧೩೮।

ವ॥ ಎಂಬುದುಂ ಪರಮಾನುರಾಗದಿಂ ಪೊಗಳ್ವ ಮಂಗಯರ್ಕ್ಕರಸಿನಾಚಿಯ
ರ ಮಸ್ತಕದ ಮೇಲೆ ಹಸ್ತಮಂ ನಿಂಬಿಟ್ಟು ತಿರುಜ್ಞಾನಸಂಬಂಧಾಚಾರ್ಯರ್
ಕಾರುಣ್ಯದಿಂದಿಂತೆಂದರ್।

ಕಂ॥ ಮಂಗರಸಿನಾಚಿ ಕೇಳ್ ಶಿವ। ಲಿಂಗದ ಸತಿ ಗೌರಿ ತಾನೆ ನಿನ್ನಯ
ಬಸುರೊಳ್।ಪಿಂಗದವತರಿಸಲ್ಕಿನ್ನಲು। ತ್ತುಂಗಸುಖೋನ್ನತಿಯ ಗುರುವಿ
ನಡಿಗೆರಗಿರ್ದರ್ಗಳ್॥ ೧೨೮।

ವ॥ ಅಂತಡಿಗೆರಗಿರ್ದ ಮಂಗಯರ್ಕ್ಕರಸಿನಾಚಿಯರ ನೆತ್ತಿ ಶಿವಕುಮಾರಂ
ಪರಮಾಶೀರ್ವಾದದಿಂ ಪರಸಿಬಳಿಕ್ಕಂ ಸೌಂದರಪಾಂಡ್ಯರಾಜಂಗೆ ಶೈ
ವಾಗಮೋಕ್ತಿಯಿಂ ಶಿವಲಿಂಗಾರ್ಚನೆಯಂ ಮಾಡಿಸಲ್ಕಾಡಿಪರನ್ನು ಭಕ್ತಿ
ಯಿಗಲ್ಕಾಗಳ್

ಮ॥ ಭರದಿಂ ಸೌಂದರಪಾಂಡ್ಯಭೂರಮಣನಾಗಳ್ ಜ್ಞಾನಸಂಬಂಧಸ
ದ್ಗುರುಪಾದದ್ವಯಮಂ ವಿನೂತ್ನ ಮಣಿಮುಕ್ತಾನೀಕದಿಂ ಪೂಜೆಯಿಂ।
ಕರಯುಗ್ಮಂ ತಣಿಯಲ್ಕೆ ಮಾಡಿ ಪರಮಾನಂದಮಂ ಮಿಗಲ್ಕದ್ದಿ ಜೊಷ್ಟಭಕ್ತ
ಪ್ರಕರಕ್ಕನೇಕಧನಮಂ ಕೊಟ್ಟಂ ಮಹಾನಂದದಿಂ॥ ೧೨೯

ವ॥ ಮತ್ತಮನಂತರಂ

ಕಂ॥ ಗುರುಪೂಜೆಗೆಯ್ದು ಗಿರಿಜಾವರನೊಕ್ಕುದನಾತ್ಮ ರಮಣಿಪರ
ಸುಂಡತ್ತಾ। ದರದಿಂ ಸೌಂದರಪಾಂಡ್ಯಂ ಹರಭಕ್ತಲಲಾಮನೆನಿಸುತೆ
ಸೆದಂ ಜಸದಿಂ॥ ೧೩೦

ವ॥ ಅಂತೀಪರಿಯೊಳ್ ಮಂಗಾಯರ್ಕ್ಕರಸಿನಾಚಿಯರ್ಬೆರ್ಸರ ಸ್ಥಾನಂಪಡಿಂ
ಸೌಂದರಪಾಂಡ್ಯರಾಜಂ ಸದ್ಗುರುಲಿಂಗಜಂಗಮದ ಪರಿಚರ್ಯೆಯದಿಂದಿರು
ತ್ತಿರ್ದನಂತು ಮಲ್ಲದೆಯುಂ

ಕಂ॥ ಗುರುಪಿಳ್ಳೆನಾಯಿನಾರರ್।ತ್ರಿರ್ ಕ್ಕುನೂರಂ ಪರಪಿ ಪಾಂಡ್ಯಮಂಡಲ
ದಿಂತ। ತ್ಪುರಕೆ ಪೊರಮಡುವ ಬಗೆಯಿಂ। ನರಪತಿಗಂ ಪೇಳ್ದು ಹರುಷದಿಂ
ಪೊರಮಟ್ಟರ್॥ ೧೩೧

ವ॥ ಅಂತು ಪೊರಮಡಲ್ಕಾಗಳ್॥

ಕಂ॥ ಸೌಂದರಪಾಂಡ್ಯಂ ನಿಜಬಲ।ವೃಂದಂಬೆರಸಭವತನಯನಂ ಕಳು
ಪುತ್ತಂ। ಬಂದು ನತ್ತರಾಗಿ ಬೀಳ್ಕೊಂಡಂದು ಮಗುಳ್ದಾತ್ಮ ಪುರದೊಳಿ
ರ್ದಂ ಸಂತಸದಿಂ। ೧೩೨

ವ॥ ಎಂಬುಭರವಪ್ಪಾನುರಾಗದಿಂ ಪೊಗಳ್ವಮಂಗಳಾಯುಕ್ಕ ರಸಿನಾಚೆಯು ಶಮಸ್ತಕದಮೇಲೆಹಸ್ತಮು ನಿಂಬಿಟ್ಟತಿರುಜ್ಞಾನಸಂಬಂಧಾಚಾರ್ಯ ಕಾರುಣ್ಯದಿಂದಿಂತೆಂದರ್॥

ಕಂ॥ ಮಂಗಳಸಿನಾಚಿಕೇಳ್ ಶಿವ। ಲಿಂಗದಸತಿಗೌರಿ ತಾನೆನಿನ್ನಮು ಬಸುರೊಳ್। ಪಿಂಗಧವತ್ತರಿಪಳೆನ್ನಲು। ತ್ತುಂಗಸುಖೋನ್ನತಿಯು ಗುರುವಿ ನಡಿಗೆರಗಿರ್ದಳ್॥ ೧೨೮।

ವ॥ ಅಂತಡಿಗೆರಗಿರ್ದ ಮಂಗಕ್ಕರಸಿನಾಚೆಯರ ನೆತ್ತಿಶಿವಕ್ಕುಮಾಶಂ ಪರಮಾಶೀರ್ವಾದದಿಂ ಪರಸಿಬಳಿಕ್ಕಂ ಸೌಂದರಪಾಂಡ್ಯರಾಜಂಗೆಶೈ ವಾಗಮೋಕ್ತಿಯಿಂಶಿವಲಿಂ ಗಾರ್ಚನೆಯಂಮಾಡಿಸಲ್ಕಾ ಡಿಪರನುಭಕ್ತಿ ಮಿಗಲ್ಕಾಗಳ್॥

ವ॥ ಭರದಿಂಸೌಂದರಪಾಂಡ್ಯಭೂಕವಣನಾಗಳ್ ಜ್ಞಾನಸಂಬಂಧಸ ದ್ಗುರುಪಾದದ್ವಯಮಂವಿನೂತ್ನ ಮಣಿಮುಕ್ತಾನೀಕದಿಂಪೂಜೆಯಂ। ಕರಯುಗ್ಮಂತಣಿಯಲ್ಕೆ ಮಾಡಿಪರಮಾನಂದಂಮಿಗಲ್ಕದ್ರಿಜಾಕ್ಷಕಭಕ್ತ ಪ್ರಕರಕ್ಕನೇಕಧನಮಂಕೊಟ್ಟಂಮಹಾನಂದದಿಂ॥ ೧೨೯

ವ॥ ಮತ್ತಮನಂತರಂ

ಕಂ॥ ಗುರುಪೂಜೆಗೆಯ್ದು ಗಿರಿಜಾವರನೊಕ್ಕುದನಾತ್ಮ ರಮ್ಯಣಿಪೆರ ಸುಂಡತ್ತಾ। ದರದಿಂಸೌಂದರಪಾಂ ಡ್ಯಂ,ಹರಭಕ್ತಲಲಾಮನೆನಿ ಸುತೆ ಸದಂಜಸದಿಂ॥ ೧೩೦

ವ॥ ಅಂತೀಪರಿಯೊಳ್ಮಂಗಾಯಕ್ಕರಸಿನಾಚೆಯರ್ಬೆರ್ಶರ ಸ್ಥಾನಂಪಡಿಂ ಸೌಂದರಪಾಂಡ್ಯರಾಜಂಸದ್ಗುರುಲಿಂಗಜಂಗಮದ ಪರಿಚರ್ಯೆಯದಿಂದಿರು ತ್ತಿರ್ದನಂತು ಮಲ್ಲಧೆಯುಂ

ಕಂ॥ ಗುರುಪಿಳ್ಳೆನಾಯಿನಾರ।ತ್ರಿ ಪುನೂರಂಪರಪಿಪಾಂಡ್ಯಮಂಡಲ ದಿಂತ। ತ್ಪುರಕೆಪೊರಮಡುವ ಬಗೆಯಂ। ನರಪತಿಗಂಪೇಳ್ದು ಹರುಷದಿಂ ಪೊರಮಟ್ಟರ್॥ ೧೩೧

ವ॥ ಅಂತುಪೊರಮಡಲ್ಕಾಗಳ್॥

ಕಂ॥ ಸೌಂದರಪಾಂಡ್ಯಂನಿಜಬಲ।ವೃಂದಂಬೆರಸಭವತನಯನಂಕಳು ಹುತ್ತಂ। ಬಂದುನತರಾಗಿಬೀಳ್ಕೊಂಡಂದು ಮಗುಳ್ದಾತ್ಮ ಪುರದೊಳಿ ರ್ದಂನಯದಿಂ॥ ೧೩೨

ಇತ್ತ ಭಕ್ತರ್ವೆರಸು ತ್ವಯ್ಯತ್ತ ಮುರಾಪಿಳ್ಳೆ ನಾಯಿನಾರರ್ನಲವಿಂ| ಚಿತ್ತ ಜಹರಭಕ್ತಿಯನುರೆಬಿತ್ತರಿಸುತ್ತಂದು ಚೋಳಧರೆಯಂಪೊಕ್ಕರ್ ೧೪೨

ವ|| ಮತ್ತಮಾಚೋಳಮಂಡಳದೊಳೊಂದು ತಿರುಕಳಕುಂಡಮೆಂಬ ಪುರದೊಳ್

ಕಂ|| ಸುಮನೋಬಲದಿಂದರ್ಥದಿನಮಳಕಳಾಳಿಗಳಿಂದ್ರನಂ ಧನಪತಿಯಂ ಹಿಮಕರನಂಗೆಲ್ದೆಸೆದಂ ಪ್ರಮುದಂಮಿಗಲಮುರಗೋಪ ನೆಂಬ ಶಿವೈಕ್ಯಂ || ೧೪೪

ವ|| ಅಂತಮುರಗೋಪನೆಂಬಮಾಹೇಶ್ವರಂ ತಿರುಜ್ಞಾನಸಂಬಂಧರಂ ಶಿವಕುಮಾರನೆಂಬುದಂ ಜ್ಞಾನನಿಧಿಯೆಂಬುದಂ ಕಾಳಿಣಾದೇಹಿಯೆಂಬುದಂ ಶಿವಭಕ್ತರ್ಬಂದು ಪೇಳಲ್ ಕೇಳ್ದು ಸಂತಸಂಬಟ್ಟು ತ್ರಿಭುವನಕ್ಕೆ ಚೆನ್ನೆಯೆನಿಪ ತನ್ನ ಮಗಳ್ಕನ್ನೆಯುಂ ಮದುವೆಯಂ ಮಾಳ್ಪೆನೆಂಬ ಬಗೆಯಿಂದವರ ಬರವಂ ಪಾರುತಿರಲಾಸಮಯದೊಳ್ ||

ಕಂ|| ಜಿನಮತಮಂಗೆಲ್ದು ಮಹೇಶನ ಭಕ್ತಿಯನೆತ್ತಿ ಪಾಂಡ್ಯಧರೆಯಿಂ ಶಿವನಂ| ದನನೆಲ್ತಂದುದನರಿದತಿ ವಿನಯಮಿಗಲ್ಕ ಮುರಗೋಪನಂದಿದಿರ್ಗೊಂಡಂ|| ೧೪೫

ಚಂ|| ಪೊಸಗುಡಿತೋರಣಂ ಮಿಸುಪಪೊಂಗಳಸಂ ಮಣಿದರ್ಪಣಂ ಪ್ರಸೂನಸಮಿತಿ ಮಂಗಳಾರತಿ ಮಹೋತ್ಸವವಾನಕನಿಸ್ವನಂ ವಿರಾಜಿಸಲತಿಹರ್ಷದಿಂದ ಮುರಗೋಪನಸನ್ಮಾನ್ಯದ ಶೈವವರ್ಯನಂ | ದೊಸೆದಿದಿರ್ಗೊಂಡು ತನ್ನ ಗೃಹಕೀಶ್ವರಸೂನುವನೊಯ್ದನರ್ಥಿಯಿಂ ||೧೪೬

ವ|| ಅಂತೊಯ್ದು ತದ್ಭವನದೊಳ್ ಮಣಿಮಯಪೀಠಮನಿಕ್ಕಿ ಕುಳ್ಳಿರಿಸಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂ ಕೊಂಡು ಭಯಭಕ್ತಿಯಿಂ ಸಾಷ್ಟಾಂಗವೆರಗಿ ಪೊಡಮಟ್ಟು ಕರಕಮಲಂಗಳಂ ಮುಗಿದು ತನ್ನ ಮನದಭಿಮತಮಂ ಬಿನ್ನೈಸಲೆಂದಿಂತೆಂದಂ||

ಕಂ|| ಶಕ್ತಿತ್ರಯಸಂಪನ್ನನೆ ಮುಕ್ತಿತ್ರಯಕಾಮಿನೀಮನೋಹರ ಶರಣೆನೆ ಸದ್ಭಕ್ತರನುದ್ಧರಿಸುವಗುಣ| ಯುಕ್ತನೆ ಜಯಪುರಹರಸೂನುವೆ ಚಿತ್ರವಿಸಂಭವ|| ೧೪೭

ಪುರಹರಸುತನೀನೆರೆದಗಿರಿದುಹಿತೃವನೀವುದೊಳ್ ಮೊಡಿಂದೆನಗೊಲವಿಂ |ಪೆರೆದುದನೀವುದೆನುತ್ತಂ| ಚರಣಕ್ಕೆರಗಿರ್ದನಮುರಗೋಪಶಿವೈಕ್ಯಂ||

ಚಂ| ಪುರವಿಜಯಂಗೆ ತನ್ನ ಸುತೆಯುಪ್ಪಮೆಯುಂ ನಲವಿಂದ ಪುತ್ರ
ಭೂಧರಪತಿ ಮಾವನೆಂದೆನಿಸಿದಂ ವದಿನೆನ್ನಯ ಕನ್ನೆಯುಂ ಸುಧಾಕರಧರ
ಸೂನು ನಿಮ್ಮಡಿಗೆ ಕೊಟ್ಟು ವಿವಾಹಮನೊಪ್ಪಿ ಮಾಳ್ಪೆನಾ| ದರದಿ ಪಿನಾಕಿ
ಗಾಂದಿಟಕೆ ಬೀಯಗನಪ್ಪುದನೀವುದು ವಿಃ ಯೆಳ್|| ೧೪೯
ಕಂ| ಎನೆ ಕೇಳ್ದು ಚಂದ್ರಶೇಖರ ತನಯಂ ತನಗಂ ತದಳವಡೆದೆ ಬು
ದ್ಧಿಯೊಳೊಂ ದನುನಯದಿನಮರಗೋವನ| ಮನದುತ್ಸವದೇಳ್ಗೆ ಪಿಂಗ
ದಂದದಿನ ಡಿವಂ|| ೧೫೦
ವ| ಅಂತು ನುಡಿದು ಕೇಳಲೆ ಮಾಹೇಶ್ವರ ಚೇಯಾಳಪುರದೊಳೆಮ್ಮಯ
ತಂದೆ ತಾಯ್ಗಳಿರ್ಪರವರ ಮುಂದೆನೀ ನೆಮ್ಮ ಮದುವೆಯುತ್ಸವಮಂ ನೆ
ಗಳ್ವುದಲ್ಲಿಗೆ ಪೋಪೆವೆಂದು ಬುದ್ಧಿಯ್ಯಂ ನಿಯಾಮಿಸಿ ನಿಜಬ್ರಹ್ಮಚಾರಿಯ
ಪ್ರತಿರುಜ್ಞಾನಸಂಬಂಧಾಚಾರ್ಯರಾದಿವಸಂ ಪರಮಾನುರಾಗದಿಂದಿದುಪ
ಸಾರುದಿವಸಂ ಮುತ್ತಿನ ಮಂಟಪವನೇರಿ ವೃಷಧ್ವಜಂ ಮಿಳಿರಲ್ಕತಿ ಸಂಭ್ರ
ಮದಿಂ ಪೊರಮಡಲ್ ಕಂಡು ತನ್ನ ಮಗಳಂ ಶೃಂಗಾರಂಗೆಯ್ದಾಗಳ್
ಚಂ| ಸರಭಸದಿಂದ ಮಾತ್ಮಸತಿಯುಂ ನಿಜಪುತ್ರಿಯುಂ ನೆರೆದಾಸ್ತುಕ್ರ
ಜ್ಜನಂ| ಬೆರಸು ಸುಖಾಸನಾಳಿ ರಥಸಂಚಯ ಮುಕ್ಕಿಣಿಕಾಯ ಮೊಪ್ಪೆ ಶಂಬ
ರರಿಪುವೈರಿಪುತ್ರನೊಡನೆಣ್ದೆಸೆಯಂ ಪಟಹಸ್ವನಂ ನೆಗಳ್ದಿರೆ ಪೊರಮಟ್ಟ
ನೊಲ್ದಮರಗೋವಸ ಮಾಖ್ಯಶಿವೈಕ್ಯನಲ್ತಯಿಂ|| ೧೫೧
ವ| ಅಂತು ಪೊರಮಡಲಮರಗೋವಮಾಹೇಶ್ವರಂ ಬೆರಸು ಚೇಯಾಳ
ಪುರದಧಿಪತಿಯುಪ್ಪ ಶಿವಲಿಂಗನಿಳಯಕೇಳ್ತಂದು ಮುತ್ತಿನ ಮಂಟಪದಿಂದಿ
ಳಿದು ಭಯಭಕ್ತಿಯಿಂದೊಳಪೊಕ್ಕುದ ನಾತಂ ಕಂಡಾಕ್ಷಣಂ ಸನ್ಮ
ಹೋತ್ಸವರಿದಂತಲ್ಲಿ ಪಂದರಮಂ ವಿರಚಿಸಿ ವೇದಿಕೆಯನಳವಡಿಸಿ ಬಿಂಗಾ
ರಿಯಂ ಬಿಗಿಸಿ ಗುಡಿತೋರಣಂಗಳಂ ಕಟ್ಟಿಸಿ ಕನ್ನಿಕೆಯಂ ಸಿಂಗರಿಸಿ ಸದ್ಬ
ಧರಪ್ಪನಿಬ್ಬಣಿಗರ್ವೆರಸು ಕೈಗಳಂ ಮುಗಿದಿಂತೆಂದಂ||
ಕಂ| ಸ್ಮರಹರಸನ್ನಿಧಿಯೊಳ್ ತ್ರಿ| ದ್ವರಕನ್ನಿಕೆಯಂ ವಿವಾಹಮಾಡಲೆ
ಪೆಂದಂ|| ಧರಶಿವಸೂನುವೆಯೆನಗಂ| ವರಪಿತ್ತತ್ತದನಿಂದ ಪಾಲಿಪುದು
ದಯೆಯಿಂದಂ|| ೧೫೨
ವ| ಎಂದಮರಗೋವಮಾಹೇಶ್ವರಂ ಬಿನ್ನೈಸಲ್ಕೇಳ್ದು ಚೇಯಾಳಪುರ
ದೀಶ್ವರನಂ ಬೆಸಗೊಂಡು ಬಂದು ನೀನೆಂದುದಂ ಮಾಳ್ಪೆನೆನಲ್ ಶಿವಲಿಂ

ಗಾರ್ಚನೆಯಂಮಾಡಿ ದಂಡಪ್ರಣತನಾಗಿ ನಲಿದೆದ್ದು ತಾಳಮಂಪಿಡಿದು ತನ್ನಯನಿಯಮದ ತಿರುಪಾಡಂ ಪಾಡಿಪೊಗಳಲ್ಕೆಂದಂಪಾಗಳ್||

ಕಂ|| ಪರತುಹಿನಾಚಳಮಂ ಹಿಮ| ಕರಬಿಂಬಮ ನಮೃತವಾರಿಧಿ
ಯ ನೊರೆವೆಳಗಂ| ಪಿಡಿದುಂಗಲೊದ್ದೊಪ್ಪುವಬ್| ಧುರಸದ್ಯೋಜಾತವ
ದನಜಯಶಿವಲಿಂಗಾ||

ನುತಕುಂಕುಮ ಪಿಂಜರರಂ| ಜಿತಪರಿಪೂರ್ಣೇಂದು ಬಿಂಬಮಂ ಗೆಲ್ದ
ಪುರ್ಣ|ನ್ನತವಾಮದೇವಮುಖಜಯ|ಶತಮುಖನತದಿವಿಜವಿನುತಜಯ್ದ
ಶಿವಲಿಂಗಾ|| ೧೪೪

ಅತಿತಪ್ತಕ ನಕವಂಮಂವ| ರಾತ ಮಿತ್ರಜ್ವಾಲೆಯರುಣ ರುಚಿಯಂಗೆ
ಲ್ದಾ| ರ್ಜಿತ ಯಶದಿಂದೆಸೆವಜಗ| ನ್ನುತತತ್ಪುರುಷಾಖ್ಯವದನಜಯ
ಶಿವಲಿಂಗಾ||

ಪರಮಾನಂದಗಳ ನನ | ವರತಂ ಯೋಗೀಶ್ವರಾಳಿ ಗೀವುತ್ತಂಭಾ|
ಸ್ಕರ ಕೋಟಿತೇಜದಿಂದಂ| ಪಿರಿದೆಸೆವೀಶಾನ ವದನಜಯ ಶಿವಲಿಂ
ಗಾ||

ಸಿತಗೌರಾರುಣ ಮೇಚಕ| ನುತತೇಜವೆನಿಪ್ಪ ಪಂಚವರ್ಣಂಗಳನು|
ಳ್ಳತಿಶಯ ದಯ್ದುಬೊಗದಿ ನೊ| ಪ್ಪುತಮಿರ್ಪ ಪ್ರತಿಮರೂಪಜಯಶಿ
ವಲಿಂಗಾ|| ೧೪೭

ಪರಶುತ್ರಿಶೂಲ ಡಮರುಗ| ತರವಾರಿ ಪಿನಾಕ ಬಾಣ ಖಟ್ವಾಂಗಕ
ಪಾ| ಲರಥಾಂಗ ವಜ್ರಧರನ| ಪ್ಪುರುತರದಶಬಾಹುಲಸಿತ ಜಯಶಿವ
ಲಿಂಗಾ|| ೧೪೮

ವರಜಡೆತೊರೆಪೆರೆ ಫಣಿಗ| ಣ್ಸುರುಚಿರ ಫಣಿಕುಂಡಲಂ ವಿಷಂಭಸಿತಂ
ಭೂ| ಧರಸುತೆ ಗಜಕೃತ್ತಿ ನಿರಂ| ತರವೊಪ್ಪುವ ವರದಮೂರ್ತಿಜ
ಯಶಿವಲಿಂಗಾ||

ಎಂದುಲಿಂಗಾಷ್ಟಕಮಂಪೇಳ್ದು ಪೊಗಳ್ವತಿರುಜ್ಞಾನಸಂಬಂಧರಭಕ್ತಿಗಮೆ ಚ್ಚಿಪರಮಕಾರುಣ್ಯದಿಂಗೌರೀರಮಣನಿಂತೆಂದಂ||

ಕಂ|| ಮನಕೇನಿಷ್ಟಮದಂ ಭೋಂ| ಕನೆಬೇಡಲೆ ನಂದನಾಂಕರಂ
ಮೆಚ್ಚಿದೆನೆಂ| ದನುಪಮ ಶಿವನೆನಲಾಪಿ| ಳ್ಳೆನಾಯಿನಾರರ್ಕರಂಗಳಂ
ಮುಗಿದೆಂದರ್|| ೧೫೦

ವ॥ ಅಂತು ಕೈಮುಗಿದೆಲೆದೇವ ನೀಂಪುಟ್ಟಿಸಿನಿಮ್ಮ ಬೆಸದಿಂ ಮಧುರೆಗೆ ಪೋಗಿ ಜೈನಸಮಯಮಂ ನಿರ್ಘಾಟಿಸಿ ಕಳವಣರಂ ಸಂಹರಿಸಿ ತಿರಿನೂರಂ ಪರಪಿ ಸೌಂದರಪಾಂಡ್ಯಮುಖ್ಯ ಸಮಸ್ತ ಪರಿಜನಮಂ ಶಿವಭಕ್ತರಂ ಮಾಡಿ ತಿರಿಗಿ ಚೋಳಮಂಡಳಕ್ಕೆ ಬರ್ಪಲ್ಲಿ ಸದ್ಭಕ್ತನಪ್ಪ ಮುರಗೋವನೆಂ ಬನಂಕಂಡು ತನ್ನ ಮಂದಿರಕ್ಕೊಡಗೊಂಡು ಪೋಗಿ ಸ್ನಾನಾ ಪ್ರಕಾರದಿಂ ಸತ್ಕರಿಸಿ ನಿಜಾತ್ಮಜೆಯಪ್ಪ ಕನ್ನಿಕೆಯಂ ತಂದೀಕೆಯುಂ ಪರಿಸುವುದೆಂ ದೆನ್ನಂ ಬೇಸರ್ಸಲ್ಕೆ ನಗಳವಡದೆ ಮನನ್ನೋಯದಂತೆ ನಿಮ್ಮಡಿಗಳಮುಂ ದಿಟ್ಟಲ್ಲದೊಲ್ಲೆನೆಂದು ಬುದ್ಧಿಯಿಂದೊಡಗೊಂಡು ಬಂದೆಂ ಮುನ್ನಂ ಪೋಲ ಬಲ್ಲದವಗೆಯಿಂದಂ ನಿವಾರಿಪುದಿನ್ನೀ ಮರ್ತ್ಯಲೋಕದಿರವು ಸಾಲ್ಕೆನ್ನಂ ಶಿವಲಿಂಗವೆ ಬಾಯ್ದೆರೆದು ಪೊಳಲ ನೆನ್ನನಾ ಭಕ್ತಂಬೆರಸೊಳಕೊಂಡುದ್ಧರಿ ಪುದೆಂದು ಬೇಡಿಕೊಂಡ ತಿರುಜ್ಞಾನಸಂಬಂಧರ್ಗೆ ಳುವರುಷಂ ತುಂಬಿದು ದನರಿದಿರಬಾರದೆನುತ್ತಾಗಳ್ಪದಾ ಶಿವಂಬಾ ಕುಮಾರ ಎಂದು ಬಾಯ್ದೆರೆ ಯಲ್ಕಾಗಳತ್ತಲಮುರಗೋವಮಾಹೇಶ್ವರನ ದೇಂತಳುವಾದುದೆನುತ್ತಂ ಪಸೆಯೊಳ್ಸಿಂಗರಿಸಿರ್ದ ನಿಜಕುಮಾರಿಯನೊಡಗೊಂಡು ನಿಬ್ಬಣಿಗರ್ವೆ ರಸು ಲಿಂಗದ ಸವಿಾಪಕ್ಕೆ ಪರಿತಂದಾಗಳ್॥

ಕಂ॥ ವರಲಿಂಗಂ ಬಾಯ್ದೆರೆದಿರೆ। ತಿರಲಾತ್ಮಕುಮಾರಿ ಸಹಿತಮಾ
ನಿಬ್ಬಣಿಗ। ರ್ವೆರಸಮುರಗೋವ ಮಾಹೇಶ್ವರನೊಳಪೊಕ್ಕಡಗಿದಂ ಸು
ರವ್ರಜವರಲ್॥

ತಿರುಪಿಳ್ಳೆ ನಾಯಿನಾರಂ। ವರಲಿಂಗಂ ಕರುಣದಿಂದೆ ಬಾಯ್ದೆರೆಯಲ್ಕಂ
ದಿರದೆ ಶರಣಾರ್ಥಿಯೆನುತಾ। ದರದಿಂದೊಳಪೊಕ್ಕ ನಮರರುಘೆಯೆ
ಸಲಾಗಳ್॥

ವ॥ ಅಂತಮುರಗೋವಮಾಹೇಶ್ವರಂ ಮೊದಲಾದ ನಿಬ್ಬಣಿಗರ್ವೆರ ಸುತಿರುಜ್ಞಾನಸಂಬಂಧರನೊಳಗಿಟ್ಟುಕೊಂಡು ಸಂಭ್ರಮದಿಂ ತೆರಳ್ದು ಕೈಲಾಸಾದ್ರಿಗೆ ಬಂದು ಸಕಲಪ್ರಮಥಗಣಂಗಳ್ವೆರಸೊಡ್ಡೋಲಗಂಗೊ ಟ್ಟನಂದದಿಂ ನಂದಿನಾಥಂಗಿಂತೆಂದಂ॥

ಕಂ॥ ಜಿನಮತಮಂ ಭಂಗಿಸಿಪಾಂ। ಡ್ಯನರೇಂದ್ರನ ಭಕ್ತನೆನಿಸಿವಿಟ
ಪಂದಂವ.। ದ್ಧನಮುಖಮಂ ಪರಪಿದಪಿ। ಳ್ಳೈನಾಯಿನಾರರ್ಗೆ ತಿಳವೊಡಾ
ಡೂರ್ ರಧರೆಯೊಳ್॥

ವ|| ಎಂದಿಂದುಧರ್ರಂನಂದೀಶ್ವರಂ ಮೊದಲಾದಪ್ರಮಥಗಣಂಗಳಾ ನಂದದಿಂಪೇಳ್ದು ಕೊಂಡಾಡುತ್ತಿರ್ಪ್ಪಗಳ್||

ಕಂ|| ತಿರುಪಿಳ್ಳೆನಾಯಿನಾರ| ಗುರುತರಸಾಯುಜ್ಯಪದ ವನಿತ್ತ ಗಜೇಶಂ|| ಪರಮಾನಂದದೊಳಿರ್ದಂ| ಪಿರಿದೊಪ್ಪುವ ತಾರಭೂಧರಾ ಸಾಯಿಕೆಯೊಳ್||

ಇತ್ತಲ್ಗುರುಕೃಪೆಯಿಂ ಭೂ| ಪೋತ್ತಮನೆಂದೆನಿಸಿ ಮೆರೆವಸೌಂದರ ಪಾಂಡ್ಯಂ| ಚಿತ್ತಜಹರಪದ ಭಕ್ತರ| ವೊತ್ತದಪಲ ಸೇವೆಗೆಯ್ಯುತಿರ್ದಂಸುಖದಿಂ||

ಚಂ|| ನಿರುಪಮಲಿಂಗಪೂಜೆಗಳನಾತ್ಮಕರಾಬ್ಜದೆ ಮೂರುಕಾಲ ದೊ| ಳ್ಪಿರಿದೊಲವಿಂದೆ ಮಾಡುತನಿಶಂಶಿವಮೂರ್ತಿಗಳಪ್ಪ ಜಂಗಮ ಪೋ|| ತ್ಕರಕೆರಧಿಪ್ಪಮಂಕುಡುತಮುರ್ವಿಯೊಳೂರ್ವನೆಭಕ್ತನಂ ದೆನ|! ತ್ತುರುತರಕೀರ್ತಿವೆತ್ತು ಮೆರೆದಂ ಕಲಿಸೌಂದರಪಾಂಡ್ಯಭೂ ಭುಜಂ|| ೧೫೬

ಕಂ|| ಜಿನಗೃಹಮಂ ದೇಶದೊಳಿ| ಲ್ಲೆನಿಸಿಕರಂ ಬಚ್ಚಬರಿಯಶಿವ ಲಿಂಗಸ್ಥಾಪನೆಯಂ ಮಾಡಿಸುತಂ ಪಾ | ವನಸೌಂದರಪಾಂಡ್ಯರಾಜನೆಸೆವುತ್ತಿರ್ದ||

ಅಂತು ಕುಲೋತ್ತರಯ್ಯಾಶದಿನಿರ್ಪಲ್ಲಿ

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ ಷಷ್ಠಿಪುರಾತನರಚಾರಿತ್ರದೊಳ್ತಿರುಪಿಳ್ಳೆಮಾಹೇಶ್ವರಕಥಾವೃತ್ತಾಂತಂ ತ್ರಯಸ್ತ್ರಿಂಶದ್ದಾಶ್ವಾಸಂ||

— ಶ್ರೀ —

## ಮೂವತ್ತು ನಾಲ್ಕನೆಯ ಆಖ್ಯಾನಂ
## ವಲಘೊಂಡಮೂರ್ತಿಗಳ ಕಥನಂ

ವಲಘೊಂಡಮೂರ್ತಿಗಳನಿ| ರ್ಮಳಭಕ್ತಿಗೆಮೆಚ್ಚಿ ಪರಮಗಣಪದ ಮಂಕೊ| ಟ್ಟಲಘುಕೃಪಾಕರನೆನಿಸುವ| ಸುಲಲಿತಸೋಮೇಶನೊಲ್ದು ಪಾಲಿಕೆ ನಮ್ಮಂ|| ೧|

ಕಂ|| ಜನನುತಶಿವಭಕ್ತಿಗನೆಲೆ|ಯೆನಿಸುವಮಧುರಾಖ್ಯಪುರದೊಳೂ ರ್ಜಿತಯಶದಿಂ| ದನ-ಪಮವಲಘೊಂಡಂಪಿರಿ| ದನುರಾಗದಿನಿರ್ದನಧಿಕ ತರಸಂಭ್ರಮದಿಂ|| ೨

ಉ|| ಆಮಧುರಾಖ್ಯ ಸತ್ಪುರದೊಳೂರ್ಜಿತ ಸೌಖ್ಯದಿ ಚೊಕ್ಕನಾ ಯನಾ| ರಾಮಳಪಾದಪದ್ಮ ಮಕರಂದಷಡಂಘ್ರಿಯತ್ಯತಿ ಸೋಮೇಶಭಕ್ತನೃಪಂ| ದಾಮರಘೂಳಿಹಂ ಬಹುಳವಿತ್ತಪನಪ್ಪೊಲಘೊಂಡಮೂರ್ತಿಯು| ದ್ದಾ ಮತವೆತ್ತ ಕೀರ್ತಿವಿಡಿದೊಪ್ಪುತಮಿರ್ದನು ಧಾತ್ತವೃತ್ತಿಯೊಳ್|| ೩|

ಕಂ|| ಮಧುರೆಗಧಿನಾಥನೆನಿಸುವ| ವಿಧುಶೇಖರಚೊಕ್ಕನಾಯಿನಾದ್ದ ರನೊಲವಿಂ| ಮುದವೊದರ್ದ ವರ್ಚಿಸುವಗುಣ ನಿಧಿಯಪ್ಪೊಲಘೊಂಡಮೂ ರ್ತಿಯಿರ್ದಂಜಸಡೊಳ್|| ೪

ಚಂ|| ಘನದೊದವಿಂದ ಪೈೖಳಬಿಳನಂತೆನೆವೃತ್ತಿರುತ್ತಂ ಸುಗಂಧಘೊ ಪ್ಪಿನವನವಂ ಮುಸುಂಕಿಸುವೆನೆಂಬ ತೆರೀತಿಯನಾಂತುರಾಗದಿಂ| ದಿನ ದಿನದಲ್ಲಿ ತನ್ಮಧುರೆಯಾಣ್ಮನೆನಿಪ್ಪ ಛಪಂಗೆ ನವ್ಯಚಂ| ದನಕಸಮುಂಸಮ ರ್ಪಿಸುವನೇಮ ದೊಳೊಲ್ದು ಲಘೊಂಡನೊಪ್ಪುವಂ|| ೫|

ವ|| ಇಂತೀಪರಿಯ ಚಂದನದನೇಮವಂ ಕೈಕೊಂಡುಮಧುರೆಯ ಚೊಕ್ಕನೈನಾರಗೆ ನಿಚ್ಚ ನಿಚ್ಚ ತ್ರಿಕಾಲದೊಳಷ್ಟವಿಧಾರ್ಚನೆಯಂ ಮಾಡುತ್ತಂ ಲಿಂಗ ಮೂರ್ತಿಗಳಪ್ಪ ಶಿವಭಕ್ತರ್ಗೆ ಬೇಡಿದಧನವಸ್ತ್ರಾಭ ರಣಂಗಳಂಕೊಟ್ಟು ತುಷ್ಟಿವಡಿಸುತ್ತೊಲಘೊಂಡಮೂರ್ತಿಗಳ್ಸುಖದಿಂ ದಮಿರುತಿರ್ದರಂತುಮಲ್ಲದೆಯುಂ||

ಕಂ|| ದಿನದಿನದೊಳುದ್ಭವರಚಂ |ದನಪಂಕವನಿಂದು ಘಾಳಿಗೊ ಳ್ಪಿಸುತಿ| ರ್ಪನೆಗಂಕೆಲವುದಿನಕ್ಕಂ| ಧನಮೆಲ್ಲಂತೀರೆ ಬಡತನಾಥಂ ಚಿತ್ತಂ|| ೬|

ಮನೆಯ ಧನಧಾನ್ಯ ಗೋವ್ರಜ ವನಿತುಂವ ಧುರೇಶನಪ್ಪ ಶಿವಲಿಂ

ಗದಚಂ| ದನನಿಯಮಕೆಲ್ಲತೀರ| ಲ್ಕನುವಿಂದಂ ಸೆಡೆಯದಿರ್ದನಂದೊ
ಳಘಾಂಡಂ|| ೭|
ಪಿರಿದಪ್ಪವಸ್ತುತೀರ ಲ್ಗಿರಿಶನ ಚಂದನದ ನಿಯಮಮಂದುನಡೆಯದಿಪ್ಪ
ತ್ತೆರಡುಪವಾಸಂಗಳ್ಪತ್ತಿ ರಲಿರ್ದಂ ಭಕ್ತವರ್ಯನ ಪ್ಪೊಲಘಾಂಡಂ|| ೮|
ನಿರುತಂದೇಶತ್ಯಾಗಂ! ಪಿರಿದುಂರುಜೆಯುರ್ಥನಾಶ ಮೆಂಬಿವರಿಂಭ|
ಕ್ತರಸಿರದೆ ಕಾಡಿನೊಳ್ಸಂ|ಪುರಹರ ನೆಂದಂಜದಿರ್ದನಂತಾಭಕ್ತಂ| ೯
ವ|| ಅಂತೀಪರಿಯೊಳೊಲಘಾಂಡಂ ಬಡತನಂಪತ್ತಿರ್ಪತ್ತೆರಡುಪವಾ
ಸಮಾದೊಡಂ ಚಿತ್ತದೊಳಳ್ಕದೆ ನಿಜಮಂದಿರದೊಳ್ ಲಿಂಗಧ್ಯಾನದೊ
ಳ್ಬಿರ್ದಿರಲ್ ಕಾರುಣ್ಯದಿಂಸದಾ ಶಿವಂ ಕನಸಿನಮುಖದಿಂ ದಿಂತೆಂದಂ||
ಕಂ|| ಮಳೆಯರುಹಂ ಬೇಳ್ವನಿತುಂ| ತಿಳಿಯಲ್ಕೊಲಘಾಂಡಮೂರ್ತಿ
ನಿನ್ನಮವೊಳಕ್ಕೈ| ಯೊಳಗದೆತೇದರ್ಪಸುನೀ|ತ್ತ ನಳಲದೆಯೆನುತಭವ
ನೊಲ್ದು ನುಡಿಯಲ್ಕಾಗಳ್|| ೧೦|
ವ|| ಅಂತುಕನಸಿನಮುಖದಿಂಶಿವಂಪೇಳ್ದುದಂನಿಕ್ಷ್ಮಯಿಸಿಕೊಂಡೊಲ
ಘಾಂಡಮೂರ್ತಿಯಿಂತೆಂದಂ||
ಕಂ|| ಭರದಿಂಪೊಳಕ್ಕೆಯಂಪುರ,ಹರನಾಜ್ಞೆ ಯೊಳಿಂದುತೇದುನೋ
ಳ್ಪಂಗಂಧಂ|ನಿರುತ ಮಿಡಾಗಲ್ಕಿರ್ಚಪೆ! ನೆರೆಂಣಜಲಂ ಸುರ್ವೊಡಸುವ|
ನೀಕಂಗೀವೆಂ||| ೧೧
ವ|| ಎಂದತಿಪ್ರತಿಜ್ಞೆಯಂ ಕೈಕೊಂಡು ದಯುಸಮಯದೊಳಾನಂದ
ದಿಂಸ್ನಾನಮಂಮಾಡಿ ಧೌತಾಂಬರಮನುಟ್ಟು ಯಥೋಚಿತ ಸ್ಥಾನಂ
ಗಳೊಳ್ವಿಭೂತಿರುದ್ರಾಕ್ಷಂಗಳಂತಾಳ್ದು ಭಕ್ತಿಮಿಗಲೊಲಘಾಂಡಮೂ
ರ್ತಿಗಳ್ಪೇರೋದ್ರೇಕದಿಂ ಚೊಕ್ಕನಾಯಿ ಸಾರರ ನಿಳಯಮಂ ಪೊ
ಕ್ಕಾಗಳ್||
ಕಂ|| ಪಿರಿದಪ್ಪಸಾಣೆಯಂತೊಳೆ,ಡಿರದೊಲಘಾಂಡಂ ಪೊದಲ್ದುಪೊ
ಳಕ್ಕೈಯಂನಿ| ರ್ಭರದಿಂತೇಕ್ಷಿಸಲದು|ಪರಚಂದನ ಪಂಕಮಾಗಲುರ್ವಿ
ದನಾಗಳ್||
ಪೊಳಕ್ಕೆಯಂತೆಜ್ಯಾಲ್ಲ,ರಿ| ಮುಳಿಸುವಚಂದ ನಮನೀಗವ ಲವುಂಬ
ಟ್ಟ| ಲ್ಗಳನುರೆತುಂಬಿ ಮುದಂವಿಗೆ| ಬಳಿಕೊಲಘಾಂಡಂ ಮಹೇಶನೆಡ
ಗೇಳ್ತಿಂದಂ|| ೧೩

ವ|| ಅಂತೇಳ್ತುಂ ಇ ಗಳ್||.

ಕಂ|| ಘನಪದ್ಮದಳಾಂಬುವಿಂಮ| ಜ್ಜನಕೆರೆದಭವಂಗೆತನ್ನ ಪೊಳಕ್ಕೈ
ಯಿಂದಂ| ಜನಿಯಿಸಿದಚಾರುತರಚಂ| ದನಕರ್ದಮಮುಮಂ ಸಮರ್ಪಿ
ಸಿದ ನೋಳಪಾಂಡಂ|| ೧೪|

ಮನಮುಂಕೈಯುಂ ತಣಿಯಲ್| ಘನತರಮಳಯಜಮನುತ್ತಮಮಂ
ಗದೊಳೊಟ್ಟೇ|ಶನೆನಿನ್ನಯನಿಯಮದಚಂ|ದನ ವೆಲ್ಲಂಬಂದುದೆಂದ ನಂ
ದೋಳಪಾಂಡಂ|| ೧೫|

ವ|| ಅಂತುಜಲಗಂಧಾಕ್ಷತೆ ಪುಷ್ಪಧೂಪದೀಪನೈವೇದ್ಯ ತಾಂಬೂಲ
ಮೆಂಬಷ್ಟವಿಧಾರ್ಚನೆಯಂ ಮಾಡಿ ಭಕ್ತಿರಸದ ಪರವಶತೆಯೊಳೋ ಲ
ಪಾಂಡಮೂರ್ತಿಗಳುರ್ಬಿನಲಿದಾಡುತ್ತೆಲೆಚೊಕ್ಕ ನಾಯಿನಾರ ಲಿಂಗ
ಕೇಳಿನ್ನ ಪೊಳಕ್ಕೈಯೊಳೀಪರಿಯ ಶ್ರೀಗಂಧಮುಂಟೊಪುದೆಂಬಲ್ಲಿ ನಾ
ಪೊಡೆನಾಂ ನಿರುತದಿಂನಿನ್ನನಿಯಮದ ಚಂದನವನೆಡೆವರಿಯ ಲೀವೆನೆ
ದೇವಾಯಿನ್ನರಿತೆಸಿಲ್ಲಿಂದಿಂತಿದಂ ಕೆಡಗುಡದೆನಡೆ ಯಿಸುವೆ ನೆನುತ್ತಾ
ಗಳ್||

ಕಂ|| ಘನಭಕ್ತಿಯೊಳಭವನ ಚಂ| ದನಮಿರ್ಪೆ ಡೆಯೆಂದುತನ್ನ ಪೊ
ಳಕ್ಕೈಯುಂನೂ| ತನಪಸ್ತ್ರಡಿ ಬಾಸಣಿಸುವ| ಜನನುತ ಭಕ್ತಂಗೆ ಮೆಚ್ಚಿ
ದಂಗಿರಿಜೇಶಂ|| ೧೬|

ಅಂತುಮೆಚ್ಚುತ್ತಾಗಳ್|

ಕಂ|| ಧನಮುಂ ತನುವಂಮನಮುಂ| ವಿನಯುಂಮಿಗೆತನಗೆಕೊಟ್ಟನಿಂ
ದೋಲವಿಂದೆಂ| ದನಿಮಿಷಸಂ ಕುಳ ಮುಖಿಯೆಂ|ದೆನಲಭವಂಮುಚ್ಚೆರೂ
ಪುದೋರಿದನಾಗಳ್| ೧೭|

ಧುನಿಶಶಿನಿಟಲಾಕ್ಷಂ ಫಣಿ! ಘನಗರಳಂಭಸಿತ ವಿಭವರಾಜಿನನಗ
ನಂ| ದನೆಯೊಪ್ಪೊಲ್ದ ಶಭುಜದಿಂ| ಜನನುತ ಪಂಚಾಸ್ಯದಿಂ ದವಿಶ್ವೇಶ್ವರ
ನೆಸೆದಂ|| ೧೮|

ವ|| ಅಂತೆಸೆವದಿವ್ಯರೂಪಮಂಕಂಡು ಪರಮಾನಂದವನೆಯ್ದಿ ಚರಣ
ಕಮಲ ದೊಳ್ಪೊರಳ್ದ ಮಹಾಭಕ್ತನ ಪೊಲಪಾಂಡನಂ ಪಿಡಿದೆತ್ತಿಕು
ಳ್ಳಿರಿಸಿ ಮೆಯ್ದಡವಿ ಬೋಳೈಸುತ್ತಂ ನಂದಿ ನಾಥಂಗಿಂತೆಂದಂ||

ಕಂ|| ಮಳಯಜಮಂ ಪೊಳಕ್ಕೈಯೊಳ| ಗಿಳಿಯೊಳ್ಮಸ್ನಾನವನಿಂತು

ತೋರಿದನೆನುತಂ| ದೋಲಘಾಂಡನವರಭಕ್ತಿಯ| ಘಲವಂಶಶಿಖಾ
ಬಿಡದೆ ಪೊಗಳ್ದನದಾಗಳ್||

ವ|| ಅಂತು ನಂದಿಸನಾಥಂ ಗಪ್ರಮಥಾದಿನಾಥಂ ಪೇಳ್ದು ಸತ್ಕಾರುಣ್ಯದಿಂ ದೋಲಘಾಂಡಮೂರ್ತಿಗಳ್ವೆರಸು ಸದಾಶಿವನೊಡನೊಲ್ದು ಗಂಗೊಟ್ಟು ಕೊಳ್ಳುದರ್ಗಳ್||

ಕಂ|| ಮಳಯುಜಜನನೆಂದಿಂಪಿರೆ ದೋಲಿಸಿದೊಸಲ ಘಾಂಡಮೂರ್ತಿಗಕ್ಷಯಪದಮಂ| ಸಲೆಕೊಟ್ಟೊಪ್ಪುವರುದ್ರಂ| ನಲವಿಂದಂ ಮೆರವುತಿರ್ದನಾ ಸಾಥಿಯಿಕಯೊಳ್||

ಗಿರಿಶನೊಲಘಾಂಡಕರಂಸ| ತ್ಕರುಣದಿ ರಜತಾಚಳಕ್ಕೆ ಕೊಂಡೊಯ್ಯಲ್ಸಾಂ|. ದಳವಾಂತ್ಯ ಭೂಮಿಪಂ ತ್ರ. ತ್ಪುರದೊಳ್ವಸ್ಮಯದಿ ನಿರುತಿರ್ಪ್ಪಕ್ಕಂತಾಗಳ್|| ೨೫|

ಅಂತಿರುತಿರ್ಪ್ಪನ್ನೆಗಂ

ಗದ್ಯ|| ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪಲಿಗೆರೆಯ ಪುರಾಧಿಪ ಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿ ಪುರಾತನರ ಚಾರಿತ್ರದೊಳಗೊಲಘಾಂಡಮಾಹೇಶ್ವರಕಥಾಪ್ರವೃತ್ತಾಂತಂ ಚತುಸ್ತ್ರಿಂಶದಾಶ್ವಾಸಂ||

...ಶ್ರೀ...

## ಮೂವತ್ತೈದನೆಯ ಆಶ್ವಾಸಂ
### ಶರ್ವಾಣಿಪುರಕಥಾವೃತ್ತಾಂತಂ

ಪರಸೌಂದರಪಾಂಡ್ಯಂಗಂ। ನಿರುಪಮಮಂಗರಸಿ ನಾಚಿಯರ್ಗಂ ಪ್ರೀತಿಯಿಂ, ಪರಮಗುಣಪದಮನಿತ್ತ ಜಗತ್ತ್ರಿಹರಿನುತಸೋಮೇಶನೊಲ್ದು ಪಾಲಿಕೆನಮ್ಮಂ॥ ೧।

ಸುತಸೌಂದರ ಪಾಂಡ್ಯಮಹೀ ಪತಿಗಂ ಮಂಗರಸಿನಾಚಿಯರ್ಗಂ ಪದದಿಂ। ಸುತೆಪುಟ್ಟಿದಳತಿಲಕ್ಷಣ। ಯುತೆ ಮಹಿಮೋನ್ನತೆ ಮಹೋತ್ಸವಂ ಬಿಗಲಾಗಲ್॥ ೨

ಅಂತುಪುಟ್ಟಿದ ಕುಮಾರಿಗಾಗಳ್॥

ಕಂ॥ ನಿರುಪಮಸೌಂದರಪಾಂಡ್ಯಂ। ಪುರಂಧ್ರಿವೆರಸಲ್ತು ಮಿಗಿಲುಮೂವರನಿತ್ತು। ವರಪುತ್ರಿಯೆಂದು ಸುತೆಗಾ। ದರದಿಂ ಶರ್ವಾಣಿವೆಸರನಿಟ್ಟನಾಗಳ್॥ ೩।

ವ॥ ಅಂತುಸರ್ವೇಶ್ವರನರಸಿಯಪೆಸರನಿಟ್ಟು ಸೌಂದರಪಾಂಡ್ಯರಾಜನುಂ ಮಂಗಕ್ಕರಸಿಯರುಂ ಪರಮಾನಂದದಿಂ ದಿರುತಿರ್ದರಂತುಮಲ್ಲಿಪೆಯುಂ॥

ಕಂ॥ ಪುಲಿಯುಗುರರಳಿಲೆ ಮಾಗಾಯ್। ಜಲಜಲಿಸುವ ಸುರುಚಿರಾಂದು ಕಂಗಳ್ಮೆರೆಯಲ್। ಸುಲಲಿತಬಾಲಿಕೆ ತನ್ನೃಪನಿಳಯದೊಳಾನಂದವೃತ್ತಿಯಿಂದಿರುತಿರ್ದಳ್॥ ೪।

ವ॥ ಅಂತುಕುಮಾರಿಯ ಬಾಲಲೀಲೆಯಂ ನೋಡಿ ತದ್ದಂಪತಿಗಳ್ನಲಿವುತ್ತಮಿರೆಯಿರೆ॥

ತಂ॥ ಪರಮಸಮಾಧಿ ಪೆತ್ತೆಸೆವುತಿರ್ಪುದನುರ್ವಿಗೆಸೂಚಿಪಂತೆ ಕಾಳಿರ ಲೊಲವಿಂದೆ ಕಲ್ತುಶಿವಭಕ್ತಿಯಿದೆಂದುರೆ ತೋರುವಂದದಿಂ। ನೆರೆ ನಡೆಗಲ್ತು ಕಂತು ಹರಮಂತ್ರಮ ನುಚ್ಚರಿಸಂತೆ ಪಾಂಡ್ಯಭೂವರಸುತೆಕೇಳ್ದುರುತ್ಸವಮ ನೆಯ್ದುತಿರಲ್ನುಡಿ ಗಲ್ತಳರ್ಥಿಯಿಂ॥ ೫।

ವ॥ ಅಂತುದಿನದಿನದೊಳ್ಸತ್ಕುಮಾರಿಯು ನಡೆಗಲ್ತು ತೊದಲ್ಪಿಂಗಿಕ್ಕನುಪತ್ತುವಿಟ್ಟು ಬೆಳದಿರ್ಥಳಂತುಮಲ್ಲಡೆಯುಂ॥

ಕಂ॥ ಸೊಗಯಿಪಶಶಿಕಳೆ ಸುರಲತೆ। ಯುಗೆಕುಂದದಮೊಗ್ಗೆ ಕಾಂಗಿಪೊಳಗಿಸಿಯುಂನೆ। ಟ್ಟಗೆಸರ್ವಾಣಿಯಬೆಳಪಂ। ದ್ವಿಗುಣಂತ್ರಿಗುಣಂಚ

ತುರ್ಗುಣಂಪಂಚಗುಣಂ ||೬

ಅಲ್ಲಿಂಬಳಿಯಂ||

ತನುವಂಸೌಭಾಗ್ಯಶ್ರೀ| ಮನಮಂರತಿ ತರಳನೇತ್ರಮಂವರಕುಸು
ಮಾಸ್ತ್ರನೊರಲ್ದೋಲಗಿಸಲ್ಪುಗೆ| ಜನನುತಸರ್ವಾಣಿಗಾಯ್ತು ಯೌವ್ವ
ನದುದಯಂ|| ೭

ಚಂ|| ಗತಿಗಳನುದ್ಘಪಾದನಖಮಂತೊಡೆಯುಂವರಮಧ್ಯಮಂಮಹೋ
ನ್ನತಕುಚಮಂ ವಿಲೋಚನಮನಾನನಬಿಂಬಮನೊಲ್ದು ಹಂಸಸ
ನ್ನುತತರತಾರೆಬಾಳೆ ಹರಿಚಕ್ರಮುದಂ ಚತಪದ್ಮಮಿಂದುಗಳ್| ಮತಿ
ಮಿಗಲೀಶನಾರಿಯೆನು ತೋಲಗಿಪಂತಿರೆಬಾಲೆಯೊಪ್ಪಿದಳ್|| ೮|

ಮಿಸುನಿಯಕಾಂತಿಯಂ ಲಸಿತಚಂಪಕರೋಚಿಯನಬ್ಜಿಯೋನಿನಿ
ರ್ಮಿಸಿದನೆನಿಪ್ಪಬಾಲಿಯತನುದ್ಯುತಿಯೊಳ್ನಿಜವೇಣಿನೀಲ್ದುಮುಂದೆಸೆ
ಯೊಳೆ ಸತ್ಪಯೋಧರದ ಮಧ್ಯದೊಳೀಕ್ಷಿಪ ರಕ್ಷೆಗಳ್ಗೆಹೃದ್ಬಿಸರುಹನಾ
ಳದಂತೆಸೆದುದೇವೊಗಳ್ವೆಂ ಸುಕುಮಾರವೃತ್ತಿಯಂ|| ೯|

ವ|| ಅಂತುಕುಮಾರವೃತ್ತಿಯಿಂ ಶರ್ವಾಣಿ ವೆಸರಕುಮಾರಿ ನಿಜಪಿತ
ನಪ್ಪ ಸೌಂದರಪಾಂಡ್ಯರಾಜನೊಡ್ಡೋಲಗಂ ಗೊಟ್ಟಿರಲ್ಕಾನಂದದಿಂ
ದೇಳ್ತಂದಾಗಳ್

ಮ|| ತರಳಾಪಾಂಗಮರೀಚಿಜೊನ್ನದೆಸೆವಂಬೀರುತ್ತಿರಲ್ಪಾದನೂಪುರ
ಝುಂಕಾರವನಂಗಚಾಪರವಮುಂಬೀರಲ್ಕೆ ಸರ್ವಾಣಿಬಂದಿರದಾಗಳ್ಪಿತೃ
ಭಕ್ತಿಯಿಂಕ್ಕು ಮನದೊಳ್ಸಂತೋಷಮುಂತಾಳ್ದು ಸೌಂದರಪಾಂಡ್ಯೋ
ರ್ವಿಪನಂಘ್ರಿಗಳ್ಗೆರಗಿ ನಿಂದಿರ್ದಳ್ಮಹಾ ಲೀಲೆಯಿಂ|| ೧೦

ವ|| ಅಂತುಪದಕೆರಗಿ ನಿಂದಿರ್ದ ನಿಜ ಕುಮಾರಿಯಂಕಂಡುಪರಮಾ
ನಂದಮನೆಯ್ದಿ ನಲ್ಮೆಯಿಂಪುತ್ತಿರೆ ಕರೆದುಕುಳ್ಳಿರಿಸಿರ್ದ ಸೌಂದರಪಾಂ
ಡ್ಯರಾಜನೋಲಗಮಂ ವಿಸರ್ಜಿಸಿ ಕುಮಾರಿಯಕರಂ ಬಿಡಿದರಮನೆ
ಯಂಪೊಕ್ಕು ಪಟ್ಟಮಹಿಷಿಯಪ್ಪ ಮಂಗರಸಿನಾಚಿಯರ ಸಮೀಪದೊ
ಳ್ಪ್ರೀತಿಮಿಗಲ್ಕುಳ್ಳಿರ್ದ ಮಂತ್ರಿವಿವಾಹಕಾರ್ಯಮನಾಡಿದುದ ನರುಪ
ಲ್ಕಿಂತೆಂದಂ||

ಕಂ|| ಅರಸಿಯುಮನಮಂನೋಡಲ್ಕರಪತಿ ನಿಜಪುತ್ರಿಯಪ್ಪಸರ್ವಾ
ಣಿಯನಾ| ವರಗುವರಂಗೀವೆ ವೆನಲ್ಕರದಿಂಕಿವಿಗಳನೆಮುಚ್ಚಿ ಪತಿ

ಗಿಂತೆಂದಳ್‌॥ ೧೧।

ನರಪತಿಸರ್ವಾಣಿಯುನಾ। ವರಸುಮಂಗಂಗೀವೆನೆಂಬಮಾತದುದೋಷಂ। ವರನಪ್ಪೊಡೆ ಶಿವನಲ್ಲದೆ। ಪರರಾರುಂಟೆಂಬ ವಧುಗೆಮೆಚ್ಚಿದನಾಗಳ್‌॥ ೧೩।

ವ॥ ಅಂತುಮೆಚ್ಚಿದರಸಂಗೆ ಮಂಗಳ್ಕರಸಿನಾಚಿಯರಿಂತೆಂದರ್‌।

ಕಂ॥ ಸರ್ವಗುಣಯುಕ್ತೆ ಯಪ್ಪೀ। ಸರ್ವಾಣಿ ಯನೊಲ್ದುನಮ್ಮಸ್ಥೃತ್ರಿಯಪ್ಪ। ಶರ್ವಂಗೆಕೊಟ್ಟುಮದುವೆಯ। ನುರ್ವರೆಬೆರಗಾಗೆಮಾಳ್ಪುದವನೀನಾಥಾ॥ ೧೪।

ವ॥ ಎಂದುಬಿನ್ನಪಂಗೆಯ್ದು ಮಂಗಕ್ಕರಸಿ ನಾಚಿಯರ್ಗೆಪರಮಮಾಹೇಶ್ವರನಪ್ಪ ಸೌಂದರಪಾಂಡ್ಯರಾಜನಿಂತೆಂಬಂ॥

ಕಂ॥ ವನರುಹಮುಖಿ ನೀನೆನ್ನಯ। ಮನದೊಳಗಿರ್ದುದನೆ ನುಡಿದೆ ಸರಿಯಿಲ್ಲೆನುತಂ। ವಿನಯದಿಕೈಕೊಂಡಾತ್ಮಜೆ। ಯನುಗಿರಿಶಂಗೀವಬಗೆಯನಾಂತಂಭೂಪಂ॥ ೧೫।

ವ॥ ಅಂತಾದಂಪತಿಗಳ್ನಿಜ ಕುಮಾರಿಯಂ ಮದುವೆಯಂಮಾಳ್ಪೆವೆಂದುನಿಶ್ಚಯಿಸ ಲ್ಜಗದ್ವ್ಯಾಪಕನಪ್ಪ ಚೊಕ್ಕನಾಯನಾರಾಖ್ಯ ಶಿವಲಿಂಗಂಮೆಚ್ಚಿ ಮೆರೆಯಲ್ಮನಂದಂದು ಕುಹಕದಿಂ ಜಂಗಮ ವೇಷಮಂತಾಳ್ದಾಗಳ್‌॥

ಕಂ। ನಸುಗರ್ಪಿನಮೀಸೆಗಳಿಂ। ಮಿಸುಗುವಸುಲಿಪಲ್ಗಳಿಂದೆ ಸದ್ಭಸಿತದಿನಂ। ದೆಸೆವೃತ್ತಿಚರಾಕೃತಿಯಿಂ। ದಸಮಾಕ್ಷಂ ಪಾಂಡ್ಯಭೂಪನೆಡೆಗೇಲ್ತಂದಂ। ೧೬।

ವ। ಅಂತುಜಂಗಮವೇಷದಿಂ ಚೊಕ್ಕನಾಯಿನಾರಾಖ್ಯ ಶಿವಲಿಂಗಂ ಸೌಂದರಪಾಂಡ್ಯರಾಜನ ಸಮೀಪಕ್ಕೆ ಬರಲ್ಕಂಡು ನಿಜಸತಿವೆರಸು ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡು ಭಯಭಕ್ತಿಯಿಂದಿದಿರೆದ್ದಾಗಳ್‌।

ಕಂ॥ ಪಳುಕಿನಘಟದೊಳ್ದೀಪಿಕೆ। ಪೊಳೆವಂತಿರೆತದ್ಭವಾನಿಯುರಸನುದರದೊ।ಳ್ಪೊಳೆ ಪಾಶತ್ಕಳೆಯುಂಕಂ, ಡಿಳೆಯುರಸಂಪತ್ತಿವೆರಸುಮಾನತನಾದ॥ ೧೭।

ವ॥ ಅಂತಾ...ವೇಷಧೀಶನನವಪರತ್ನಪೀಠದೊಳ್ಕುಳ್ಳಿ

ಋಷಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡು ದೇವಬ್ರಾಂ ದ ಕಾರ್ಯಮನೆಮಗೆ ನಿರೂಪಮಂಕೊಡುವುದೆಂದು ಸೌಂದರಪಾಂಡ್ಯರಾಜನುಂ ಮಂಗಕ್ಕರಸಿ ನಾಚಿಯರುಂ ಬೆರಸು ಬಿನ್ನಯಿಸ ಲಿಮಗೆಕ ನ್ಯಾದಾನಮನೀವುದೆಂದು ಬೇಡಲ್ಕವರೀವರ್ಗರು ಪೊಡಂಬಟ್ಟಾಕ್ಷಣಂ ಮಂತ್ರಿಗಳಂ ಕರೆದುಗೃಹಮಹತ್ತರನಿಂ ವಿವಾಹಮಂಟಪಮಂ ವಿಸ್ತರದಿಂ ವಿರಚಿಸವುದೆಂದು ನಿಯಾಮಿಸಲ್ಕಾಗಳ್|

ಕಂ|| ಗುಡಿಸಸೆವೇದಿಕೆಪಂದಲ್| ಕಡೆಯವೆ ಭೃಂಗಾರಿಲಾಜಿಜಾಗಂಕು ಶಕ|| ನ್ನಡಿತೋರಣಫಲಮುಮುಲ್| ಗೊರ್ಡೆಮೇಲ್ಕಟ್ಟು ಗಳಿನೊಪ್ಪಿತು ದ್ವಾಹಗೃಹಂ|| ೧೩||

ಮ|| ವರಕೌಂತೇಯ ನಿಕಾಯದಂತೆ ಸತತಂಪಾಂಚಾಲಿಕೋದಂಚಿತಂ| ನಿರುತಂಸಾತ್ವಿಕ ಭಾವಸಂತತಿಗಳಂ ತಸ್ತಂಭಶೋಭಾನ್ವಿತಂ ಕರಿಯಂತಾನನದಗ್ರ ಪಲ್ಲವಲಸತ್ಕುಂಭಾನ್ವಿತಂ ಮೇಘದಂ| ತಿರೆಸತ್ಪುಷ್ಕರಯುಕ್ತ ಮೊಗೆವೆಸೆದತ್ತು ದ್ವಾಹಗೇಹಾಂತರಂ! ೧೪||

ವ|| ಅಂತನೇಕಪರಿಯಿಂ ವಿವಾಹಮಂಟಪಮಂಮಾಡಿಸಿದೆವೆಂದುಮಂತ್ರಿಗಳ್ಪೇಳಲ್ಕೇಳ್ದು ಸೌಂದರಪಾಂಡ್ಯ ರಾಜನುಂ ಮಂಗಾಯಕ್ಕರಸಿನಾಚಿಯರುಂಪರಮ ಹರುಷದಿಂ ದೇಶದೊಳಗುಳ್ಳ ಶಿವಭಕ್ತರಂ ನಿಬ್ಬಣಕ್ಕೆ ಬರಿಸಿಮತ್ತಮಾಗಳ್|

ಕಂ|| ನುತಜಂಗಮವೇಷದಪಶು| ಪತಿಗುತ್ಸವದಿಂದೆ ಮಜ್ಜನಕ್ಕೆರೆದತ್ತ್ಯು| ರ್ಜಿತಶೃಂಗಾರಂಗೆಯ್ದುದು|ಮತಿಮಿಗೆನೀವೆಂದು ನೃಪತಿಸಚಿವರ್ಗೆಂದಂ|| ೧೫||

ವ|| ಎಂದುಸೌಂದರಪಾಂಡ್ಯರಾಜಂ ನಿಯಮಿಸಲ್ಕಾ ಮಂತ್ರಿಗಳ್ಪೋಗಿ ದುಂದುಭಿಮುರಜ ಪಟಹಪಟುರವಂಗಳೆಸೆಯಲ್ ನಾನಾತೀರ್ಥೋದಕಂಗಳಿಂ ಮಜ್ಜನಮಂಮಾಡಿಸಿ ಯಕ್ಷಕರ್ದಮವ ನಂಗದೊಳ್ಪೂಸಿ ಸುಗಂಧಪುಷ್ಪಂಗಳಂ ತುರುಬಿಮತ್ತಮಾಗಳ್||

ಚಂ|| ವರಫಣಿಕಂಕಣಂಗೆಮಣಿ ಕಂಕಣಮಂಶಶಿಶೇಖರಂಗೆಭಾ|ಸುರತರದಿವ್ಯ ಮೌಕ್ತಿಕದ ಶೇಖರಮಂ ದ್ವಿರದಾಜಿನಂಗೆಬಂಧುರತರ ನೂತನಾಂಬರಮ ನೀಕ್ಷಿಪಶದ್ಭುತ ಮಂದೆನಲ್ತೆಸಿಂ| ಗರಿಸಿಮುದಂಮಿ ಹಜ್ಜನಪನಲ್ಲಿಗೆ ಬಂದುದಮಾತ್ಯಸಂಕುಳಂ|

ವ॥ ಅಂತುಸಿಂಗರಿಸಿ ತತ್ಕುಟಿಲ ವೇಷಧೀಶನಂ ಯಥೋಚಿತಾಚಾರ ದೊಳ್ವಿವಾಹ ಮಂಟಪದೊಳ್‌ಇರಿಸಿ ಮಂತ್ರಿಗಳ್ಬಂದು ಸುಮುಹೂರ್ತಂ ಸಾರ್ತಂದುದೆಂದು ಬಿನ್ನವಿಸಲ್ಕತಿ ತವಕದಿಂ ಸೌಂದರಪಾಂಡ್ಯರಾಜ ನುಂ ಮಂಗಾಯಕ್ಕರಸಿನಾಚಿಯರುಂ ತಮ್ಮ ಕುಮಾರಿಯಪ್ಪ ಸರ್ವಾ ಣಿಯುಂ ಸಕಲಶೃಂಗಾರಂಗೆಯ್ವುದೆಂದಂತಃಪುರ ದಕಾಮಿನೀಜನಕ್ಕೆನಿ ಯಾಮಿಸಲ್ಪರಮ ಹರುಷದಿಂ ವಸ್ತ್ರಾಭರಣಮಾಲ್ಯಾನುಲೇಪನಂ ಗಳಂ ತಂದಾಗಳ್‌।

ಮ॥ ಸಿರಿಗೊಳೂರ್ಜಿತಭಾಗ್ಯಮಂಧರಿಯಿಸಿಪರ್ಗಾಚೆನ್ನೆಯಂಕಪ್ಪೆ ಯಂಸರಸೀಜಾಸನ ನುನ್ನತಾಮಳಕಳಾಸಂಯುಕ್ತೆಯಂ ಭಕ್ತೆಯಂ। ವರಪಂದಿವ್ಯಜ ಕಿಷ್ಟಮಿಾವಖಿಳ ಲೋಕಸ್ತುತ್ಯೆಯುಂನಿತ್ಯೆಯುಂ।ಭರದಿಂ ದಾಳಿಯರೊಲ್ದು ಸಿಂಗರಿಸಿದಸರ್ವಾಣಿಯುಂಜಾಣೆಯುಂ। ೨೧॥

ವ॥ ಅಂತಾಳಿಯರ್ಸಿಂಗರಸಿಮೆರೆವಸರ್ವಾಣಿಯುಮೆಸರಕುಮಾರಿಯುಂ ಸೌಂದರಪಾಂಡ್ಯರಾಜನುಂ ಮಂಗಾಯಕ್ಕರಸಿ ನಾಚಿಯರುಂ ಮಂಗ ಳವಾದ್ಯ ಘೋಷಂಗಳೊಳ್‌ ಹೋಮಾದಿಪರಿಕರಮ ನುಳ್ಳವಿವಾಹಮಂ ಟಪದವೇದಿಕಗೆ ತಂದುಸುಮುಹೂರ್ತಂ ಮಿಗಲ್ಕಾಗಳ್‌।

ಕಂ॥ ಪರಸೌಂದರನುಂ ಮಂಗಾ। ಕ್ಕರಸಿಯರುಂ ಕುಹಕವೇಷ ಧೀಶಂಗಿತ್ತಾ। ದರದಿಂಸರ್ವಾಣಿಯನಿ ತ್ತಿರದಾಗಳ್ಭಕ್ತಿಯಿಂದೆಕ್ಕೆನೀ ರೆರೆದರ್‌

ವ॥ಅಂತುಕ್ಕೆನೀರೆರೆದುಕುಹಕವೇಷಧೀಶಂಗಿತ್ತು ಸೌಂದರಪಾಂಡ್ಯರಾ ಜನುಂ ಮಂಗಾಯಕ್ಕರಿಸಿ ನಾಚಿಯರುಂ ಪೊನ್ನಪಟ್ಟವಣೆಯೊಳ್ತದಂ ಪತಿಗಳಂಕುಳ್ಳಿರಿಸಿ ಪರಮಭಕ್ತಿಮಿಗಲ್ಕಾಗಳ್‌॥

ಕಂ॥ ಹರಿಬೊಮ್ಮರ್ಬೆರಗಾಗಲ್‌। ತ್ತಿರೆ ಸೌಂದರಪಾಂಡ್ಯರಾಜನೊ ಲವಿಂ ಮಂಗ। ಕ್ಕರಸಿಯರಾಗಳ್ಕುಟಿಲದ ಹರಂಗೆನಿಜಸುತೆಗೆಸೇಸೆಯಿ ಕ್ಕಿದರಾಗಳ್‌॥

ವ॥ ಅಂತಾಸೌಂದರ ಪಾಂಡ್ಯರಾಜನುಂ ಮಂಗಕ್ಕರಸಿ ನಾಚಿಯ ರುಂ ನಿಜಪುತ್ರಿಯಿಂ ತಮಗೆಸುಕೃತಂ ದೊರಕ್ಕಿತ್ತೆಂದು ಪರಮೋತ್ಸ ವದಿಂ ನಲಿದಾಡುತ್ತಿರ್ಪಾಗಳ್‌॥

ಕಂ॥ ನರರಾಕ್ಷ ... ಬರ್ ... ತುಳ ... ಸುತೆಯ ನಿತ್ತ

ರ್ತನಗೆಂ, ದುರುತರಕೃಪೆಮಿಗಲಪವರ್ಗಾರ್| ಗಿರಿಜಾಪತಿಮೆಚ್ಚಿ ರೂಪು ದೋರಿದನಾಗಳ್||

ಚಂ| ಅರಲತುರುಂಬಿ ಮಸ್ತಕದಗಂಗೆಲಲಾಟದ ಬಾಸಿಗಂಸುಧಾಕರಕಳೆರತ್ನಮಂಡನಮಶೇಷವಿಭೂಷಣಮೊಪ್ಪುವಂಬರಂ ಕರಿವರಚರ್ಮವಾಮದನೃಪಾತ್ಮಜೆ ಪಾರ್ವತಿಯೊಗೆಪತ್ತುದೋಳ್ಗಿರುಷಮ ಪಂಚವಕ್ತ್ರಮೆಸೆಯಲ್ನಿಜಮೂರ್ತಿಯೊಳೀಶನೊಪ್ಪಿದಂ||

ವ| ಅಂತಾದಿವ್ಯಮೂರ್ತಿಯಂ ಕಂಡುಸೌಂದರಪಾಂಡ್ಯರಾಜನುಂ ಮಂಗಾಯುಕ್ಕರಿಸಿ ನಾಚಿಯರುಂ ಪರಮಾನಂದಾಶ್ರುಜಳಭರಿತನಯನರಾಗಿಪೊಗಳಲ್ಕಾಗಳ್|

ಪುರಹರಚಂದ್ರಶೇಖರ ಸುಪರ್ವನದೀಧರ ಚಾರುಭಾರತೀ| ಪರಮಪಾರ್ವತೀವರ ಜಗದ್ವರಶಂಕರ ದುಗ್ಧವಾರ್ಧಿಜಾ ವರವರಸದ್ಗುಣೋತ್ಕರಮಹೇಶ್ವರ ಗೌರಿವಿಲಸತ್ಪ್ರಲೋಲಭುಜಾ| ವರವರವಾಹಿವಾಹಿಸುಖನಾಗಳ ಶಂಬರವೈರಿಸಂಹರಾ|| ೭೮

ವ| ಎಂದುಪೊಗಳ್ದು ಚರಣಕಮಲದೊಳ್ಸೈಗೆಡೆದಿರ್ದ ಸೌಂದರಪಾಂಡ್ಯರಾಜನಂ ಮಂಗಯುಕ್ಕರಿಸಿ ನಾಚಿಯರಂ ಗಿರಿಜೇಶಂತನ್ನಭುಜಕರದಿಂದೆತ್ತಿ ಮೆಚ್ಚಿದವಿ ಪರಮ ಕರುಣದಿಂ ನಂದಿನಾಥಂಗಿಂತೆಂದಂ||

ಕಂ| ವರಮೇನೆನಗೀಶ್ವರರಂ| ತಿರೆ ನಿಜಸುತೆಯಿತ್ತುಮಂಗಯಿಸಿಘೂನುತ ಸೌಂ| ದರಪಾಂಡ್ಯರತ್ತೆಪೂಪಂ| ದಿರಾದರನಗೆಂದು ಪೊಗಳ್ದನಂದಗಜೇಶಂ|| ೭೯

ವ| ಎಂದುನಂದಿನಾಥಂ ಮೊದಲಾದಪ್ರಮಥಗಣಂಗಳ್ಗೆ ಪೇಳ್ದು ಕೊಂಡಾಡುತ್ತುಂ ಖಂಡೇಂದುಶೇಖರಂಭಸ್ತಶಿಖಾಮಣಿಗಳಪ್ಪ ಸೌಂದರಪಾಂಡ್ಯರಾಜನಂಮಂಗಾಯುಕ್ಕರಸಿನಾಚಿಯರಂ ದಿವ್ಯವಿಮಾನದೊಳ್ಕುಳ್ಳಿರಿಸಿನಿಯುವಿಸಲ್ಕಾಗಳ್||

ಕಂ| ಸುರಸಭೆಪೊಗಳುತ್ತಿರೆಸೌಂ| ದರಪಾಂಡ್ಯಂಮಂಗಯಸಿಯರುಂ ಬಳೆಯೂಶಾಂ| ತರಮಂಬೆಳಗುತ್ತುಂಭಾ| ಸುರಪುಷ್ಪಕಮುಭಪಗಿರಿಗೆಬಂದರ್ತಾಗಳ್||

ವ| ಅಂತುಕೈಲಾಸಮಂ ಪೊಕ್ಕುಸೌಂದರಪಾಂಡ್ಯರಾಜನುಂ ಮಂಗಾಯುಕ್ಕರಿಸಿ ನಾಚಿಯುಮರಸು ಗಿರಿಜೇಶಂ ಪ್ರಮಥಗಣಂಗಳ್ಸಹಿತ

ನಂದದಿಂದೊಡೆಸ್ಥಿಲಗೆಂಗೊಟ್ಟುಕುಳ್ಳಿರ್ದಾಗಳ್॥

ಕಂ॥ ಜಿನಮತಮನುಳಿದು ಯಿನ್ನಯ। ಘನಭಕ್ತಿಯನಾಂತುಮಾಗ ಳನಿಪ್ಪೆನೆನುತ್ತಂ ವಿನಯದಿಸೌಂದರಪಾಂಡ್ಯಂಗನುಪಮ ಗಣಪದವ ನಿತ್ತನಂದಗಜೇಶಂ॥

ಘನಭಕ್ತಿಯಿಂದೆ ನಿಜನಂಣ್ಣಿ ದನೆಯಂತನಗಿತ್ತಳೆಂದು ಮರಗರಸಿಯ ರ್ಗಂ॥ ಜನನುತ ಗಣಪದಮಂಕೊ॥ ಟ್ಟನುಪಮ ಶಿವನೆಸೆವುತಿರ್ದನಸ್ಥಾ ಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪಶ್ರೀ ಷಷ್ಟಿಪುರಾತನರಚಾರಿತ್ರದೊಳ್ಸರ್ವಾಣಿಯ ಕಥಾವೃತ್ತಾಂತಂಪಂಚ ತ್ರಿಂಶದಾಶ್ವಾಸಂ॥

— ಶ್ರೀ —

ಮೂವತ್ತಾರನೆಯಆಶ್ವಾಸಂ

ತಿರುಮೂಲದೇವರ ಕಥಾವೃತ್ತಾಂತಂ

ಪರಮಶಿವಯೋಗಿಯೆನಿಪಾ॥ ತಿರುಮೂಲಾಖ್ಯರ್ಗೆಮೆಚ್ಚಿ ಗಣಪದಮಂ ಸಾ॥ ದರದಿಂದಿತ್ತಿಮಹಾಗುಣ್ಯ ಶರನಿಧಿಸೋಮೇಶ ನೋಲ್ದುಪಾಲಿಕೆ ನಮ್ಮಂ॥

ಮತ್ತಮೀತನಪೂರ್ವಜನ್ಮಮಂಪೇಳ್ವೆನದೆಂತೆಂದೊಡೆ

ಕಂ॥ ಪರಿಕಿಪೊಡೆಗೋಪನೋರ್ವಂ। ಪುರದಾಕಳಪಿಂಡನೋತುಕಾ ಯುತ್ತಮಿರು। ತ್ತಿರಲೊಂದು ದಿವಸಮವನಂ ಗರಳಮುಖಂ ಗಹನದಲ್ಲಿ ಪಿಡಿಯಲ್ಕಡಿದಂ॥

ವ॥ ಅಂತುಮಡಿಯಲ್ಕಾಸಮಯದೊಳೊರ್ವ ಸಿದ್ಧ ಗಹನವರಿಯಟ ನಮಂ ಮಾಡುತ್ತಲ್ಲಿಗೆ ಬಂದುಮೃತನಾದ ತದ್ಗೋಪನಂಕಂಡು ಬಿನದ

ದಿಂಪರಕಾಯಪ್ರವೇಶಮಂ ಮಾಡಲ್ಕನಂದಂಮ ತನ್ನ ಕಳೇವರವನಾ ರುಂಕಾಣದಂತೆಬಂದುತಾಣದೊಳ್ಬೈತಿಟ್ಟುಮತ್ತಮಾಗಳ್‌॥

ಕಂ॥ ತ್ವರಿತದಿನಂದಾಗೋಪನ। ಶರೀರದೊಳ್ಪೊಕ್ಕು ಸಿದ್ಧನೆನೆದತಿ ಬಿನದಂ। ಬೆರಸಾಗಳ್ಗೋಕುಲಮಂ। ಪುರಕ್ಕೆ ನಡೆಯಿಸುವಘರದಿನಂ ದೇಳ್ತಂದಂ

ವ॥ ಅಂತೇಳ್ತಂದು ಪುರವಂಪುಗಲ್ಗೋಕುಲಮೆಲ್ಲಂ ತಮ್ಮತಮ್ಮ ಪಟ್ಟಿಯ ನೆಯ್ದಲ್ತಾನೊಂದು ಮರದಡಿಯೊಳ್ನಿಂದಿರಲ್ಕಾಸಮಯದೊಳ್ ಡೇಂತಡೆದನೆಂದು ತದ್ಗೋಪನ ಪತ್ನಿಮನೆಗೆಬಂದು ಕರೆಯಲ್ಸುಮ್ಮನಿರಲ್ಪುರಜನಮೆಲ್ಲಂ ನೆರೆದಿದೇನೆಂದು ಬೆಸಗೊಳಲ್ಕಾನಂದಳೆದಿರಕ್ಕಿಡಿವಂಗೆ ಮರುಳ್ಪತ್ತಿತ್ತೆನುತ್ತಂನಗುತಂಪೋಗಲ್ಕಾಗಳ್‌

ಕಂ॥ ನೆರವಿನಗುತ್ತಂ ಪೋಗು। ತ್ತಿರಲಲ್ಲಿಂ ತಳದುಗೋಪವೇಷದಸಿದ್ಧಂ। ಪಿರಿದಾಗಹನಕ್ಕಂಬಂ। ದಿರದಾಗಳ್ತನ್ನ ವಪುವನರಸುತ್ತಿರ್ದಂ

ವ॥ ಅಂತರಸಿಬೈತಿರಿಸಿದ ತಾಣದೊಳ್ನಿಜ ಕಳೇವರಮಂ ಕಾಣದೆಪಿರಿದುಂ ಪ್ರಲಿಕೊಂಡ-ಪೋಗದೆ ಪೊಣದೆನುತ್ತಂನಗುತ್ತಂಗೋಪವೇಷದಸಿದ್ಧಂತನ್ನಯಬುದ್ಧಿಗೆ ತಾಂಖತಿಗೊಳುತ್ತಿನ್ನು ಶಿವಲಿಂಗದಭಕ್ತಿಯನೆ ಬಲ್ಪಿಡಿವೆನೆನುತ್ತಲ್ಲಿಂ ತೇರ್ದನಂತುಮಲ್ಲದೆಯುಂ॥

ಕಂ॥ ಪರಯೋಗಿವೇಷದಿಂದಂ। ಪುರಹರನಂ ಕಾಲಪಂಚಕಗಳಿಂದಾ ನಾ। ಸಿರವರುಷಮರ್ಚನೆಯನಾ। ದಗದಿಂದಂಪೂಡುತಿರ್ದ ನಾತಿರುಮೂಲಂ॥

ವ॥ ಅಂತೀಪರಿಯೊಳ್ಕಲವುಕಾಲಮರ್ಚಿಸುತ್ತಿರುತ್ತೊಂದು ದಿವಸಂ ತನ್ನ ಮನಮನದೊಳ್ಮನ್ನಾರಂ ಮಾಡದ ನೂತನಾಭಿಷೇಕಮನೊಂದಂನೆನೆದು ಶಿವಲಿಂಗದಡೆಗೇಳ್ತಂದಾಗಮೋಕ್ತಿಯಿಂ ವಿಭೂತಿರುದ್ರಾಕ್ಷೆಗಳಂತಾಳ್ದು ಸಮೀಪದೊಳ್ಪದ್ಮಾಸನ ಮನಳಂ ಕರಸಿಮುಗ್ಧತನದಭಕ್ತಿಯಿಂದಿಂತೆಂದಂ॥

ಕಂ॥ ರಸೆಯೊಳ್ಮನ್ನಾವೆಡೆಯೊ। ಳ್ಪಸರಿಸದಭಿಷೇಕವೊಂದ ನಾನೆನೆದೆನದಂ। ಕುಸುಮಶರ ಜನಕನುತ ಪದ। ಬಿಸರುಹಕರುಣಿಪುದೆನುತ್ತ ಭಕಂನುಡಿದಂ॥

ಸುರಭಿಯುಪಾಲಿಂಬವೆಶಂ। ಕರನಿನಗಭಿಷೇಕಮಂ ಮಾನಂವಿಗೆಸಾಳ್ಪಂ

ಕ್ಕರುಣಿಪುದವನೀಕ್ಷಣವೆನು| ತ್ತುರುಮುಖ್ಯಶಿಖೈಕ್ಯ ನೊಳಿದುಬೇಷುತ್ತ
ಮಿರ್ದಂ
ಕಂ|| ತ್ತರುಣತನೂಜನಾತ್ಮಪಿತನಂ ಮಿಗೆಮುದ್ದಿಸಿಕಾಡುವಂತೆಕಂ
ಕರಸುರಧೇನುವಂಥರೆಗೆತಂದ ಕೊಡಂದೆನುತ ಕ್ಸುಬಿಂದುವಂ|ಸುರಿವು
ತಮೇಲೆಭಿರ್ದು ಪೊರಳುತ್ತಳುತಂ ಕಡುನಲ್ಮೆದೋರಿಪ| ಲ್ಗಿರಿದುಕಷಂ
ಗಿಲಲ್ಲಿಗರವುತ್ತಿರೆ ವಂತ್ತಿರುವಾೂಲನಳ್ಕರಿಂ||
ವ|| ಅಂತುತಿರುಮೂಲಭಕ್ತಂ ಲಲ್ಲಿಗರೆದು ಲಜ್ಜಿಗೆಟ್ಟುಮುದ್ದಿಸುತಂ
ಭಕ್ತಿರಸಾವೇಶದ ಪರವಶತೆಯಿಂಶಿವಲಿಂಗದಭಿಷೇಕ
ಕ್ಕಂದುಸುರಭಿಯು ಪಾಲಂಬೇಡಿ ಕಾಡುತ್ತಿರ್ಪುದಂ ಜಗದಂಬಿಕೆಕಂ
ಡಾಗಳ್||
ಕಂ|| ಪಿರಿದುಂಮುಗ್ಧನೆನಿಪ್ಪಾ| ತಿರುಮೂಲಾಹ್ವಯನಮೇಲೆಶಿವನೀ
ಕ್ಷಮ್ಮನ್ನಂ । ಕರುಣಂಬುನದೊಳ್ಜನಿಯಿಸಿ| ಗಿರಿರಾಜತನೂಜೆ ಭರದಿ
ನ್ನಂದಿಂತೆಂದಳ್|| ೯|

ನೀನರಿಯೆ ತನಗೆಪಾಲಂ| ಚಲದಿಂದುಪಮನ್ಯು ಬೇಡಿದೊಡೆಪಾಲ್ಗ
ಡಲಂ ಸಲೆಕೊಟ್ಟೆಯಿಂದಿವಂಸಿನ| ಗೊಲವಿಂಬೇಡಲ್ಕೆ ಸುಮ್ಮನಿರ್ಪ
ಕೃಪಾಬ್ಧೀ| ೧೦|
ವ|| ಎಂದುಜಗದಂಬಿಕೆ ಕೃಪೆಯಿಂ ನುಡಿವುತ್ತಿರಲ್ಕೇಳ್ದು ಭಕ್ತವತ್ಸ
ಳನಪ್ಪ ಶಿವಂನಗುತ್ತಿಂತೆಂದಂ|
ಕಂ|| ಜಗದಂಬಿಕೆ ನೀನಾದೊಡೆ| ಮಗನಲ್ಲಾಧಿಟಕೆ ನಿನಗಿಷ್ಟಂತಿಳಿ
ಯಲ್ಕೊ| ಟ್ಟಿನೆ ಸುರಭಿಯಾಗಿಪಾಲಂ| ನಗಸುತೆ ಮಚ್ಛಿರದಮೇಲೆ ಕ
ರೆವುದುನಲವಿಂ| ೧೧|

ಎಂದಾತಿರುಮೂಲರಮೋ| ಲಂದಭವಂಕರುಣದಿಂನಿಯಾಮಿಸೆಮೋ
ನಾ| ನಂದನೆ ಹರುಷದಿನಾಗ| ಳ್ವೃಂದಾರಕ ಧೇನುವಾಗಿಮುಂದ್ಗೆಸೆದಿ
ರ್ದಳ್|| ೧೨
ವ|| ಅಂತಂಬಿಕೆ ಸುರಭಿಯಾಗಿರಲ್ಕಂತಾತಿರುಮೂಲಾಖ್ಯ ಭಕ್ತಂ
ಪರಮೋತ್ಸಾಹಮನೆಯ್ದಿ ಚರಣದೊಳ್ಪೊರಳ್ದು ಭಯಭಕ್ತಿಯಿಂಪೊ
ಗಳುತ್ತಾಗಳ್||
ಕಂ|| ವರಲಿಂಗದಮಸ್ತಕದೊ ಳ್ಸುರಭಿಯುರ್ಪಾಲ್ಗರೆಚ್ಚ ಲಲವತೆರದಿ

ದ್ದಂನಿಂ ದಿರಿಸಿತಿರುಮೂಲನತ್ಯಾದರದಿಂ ಪಾಲ್ಗರೆವುತಿರ್ಪ ಸದನೀವ್ರೊ
ಗಳ್ವಂ ೧೩

ಚಂ ನಿರುಪಮಲಿಂಗಮಸ್ತಕದ ಮೇಲೆಪೊಲವಿಂದ ಖಂಡಧಾರೆಭೋ
ರ್ಗರೆವುತಿರಲ್ಕೆ ತತ್ಸುರಭಿಯುದ್ಧ ಘಟೋಧ್ನಿಯಿ ಸೂಣ್ಮೆ ಬರ್ಪವಿಸ್ತರ
ತರದುಗ್ಧದಿಂದ ಮಭಿಷೇಕಮನಾರ್ತದಿ ಮಾಡುತುರ್ಬಿ ಕಾ| ಳ್ಪರದ
ತರಂಗದೊಳ್ಪೊರಳ್ವದ ತಿರುಮೂಲರ ತೀವ್ರಭಕ್ತಿಯಿಂ|| ೧೪

ಕಂ|| ಸುರಭಿಪುಪಾಲದುಶಿವಮಂ! ದಿರದೊಳ್ಮಡುಗಟ್ಟಿ ಕಾಳ್ಪರಂ
ಮಸಗಲ್ತಾಂ| ಪಿರಿದೀಂಟುತ್ತಿರ್ೀಸೂಡು| ತ್ತಿರುಪರವಶದಿಂದ ಮಿರ್ದ
ನಾತಿರುಮೂಲಂ| ೧೫|

ಹರನಭಿಷೇಕದಪಾಲೊೀ|ಳ್ಪರವಶದಿಂಪೊರಳ್ವತನುಶಿತ್ವಮನೆಯ್ದು
ಲ್| ನಿರುತಂದುಗ್ಧಾಬ್ಧಿಯೊಳವ | ತರಿಸಿದಶಶಿಯಂತಿರೆ ಸದನಾತಿರು
ಮೂಲಂ|| ೧೬

ವ|| ಅಂತುಸದ್ಭಕ್ತಿ ರಸಾವೇಶದೊಳ್ಮೆಯ್ಮರೆದಿರ್ಪ ತಿರುಮೂಲಭ
ಕ್ತನಂ ಕಾರುಣ್ಯದಿಂನೋಡಿ ಸುರಭಿಯಾಗಿ ಕನೆದಗಿರಿಜೆಯುಂ ತನ್ನೊ
ಳಡಂಗಿ ಸಿಕೊಂಡು ಖಂಡೇಂದುಧರನಾನಂದದಿಂದಾಗಳ್||

ಕಂ|| ಆತಿರುಮೂಲನಮುಗ್ಧತೆ| ಗೋತುಕೃಪಾರಸದ ವೃಷ್ಟಿಯಂ
ಕರೆವುತ್ತಂ| ಭೂತೇಶನಗಜೆವೆರಸತಿ| ಕೌತುಕದಿಂತನ್ನರೂಪುದೋ
ರಿದನಾಗಳ್|| ೧೭|

ಚಂ|| ವರಜಡೆಸತ್ಕಚಂಹಿಮುಕರಂಮೃಗನಾಭಿಫಣೀಂದ್ರ ಕುಂಡಲಂ
ಸ್ಫುರಿತಸುವರ್ಣ ಪತ್ರಧವಳ ಪ್ರಭೆಕೋಮಳಹೇಮಕಾಂತಿಪೇ ರುರ
ವತಿವೃತ್ತಪೀನ ಕುಚಮೂರ್ಜಿತಮೆತ್ತಿದಶೂಲವೊಪ್ಪೆ ಶಂಕರನಗಜಾ
ರ್ಧ ದೇಹವೆನಿಸುತ್ತೆಸೆದಂ ಪರಮಾನುರಾಗದಿಂ|| ೧೮|

ಕಂ|| ಶರಣರ್ಗತಾನೆಧರೆಯೊ| ಳ್ನಿರುತಂತಾಯ್ತೆಂದೆ ಯೆಂಬುದಂ
ತೋರಲ್ಕಂ| ಕರನರ್ಧದೇಹದೊಳ್ಗಿರಿ| ವರಸುತೆಯಂ ತಾಳ್ದದಿವ್ಯ
ಮೂರ್ತಿಯೊಳೆಸೆದಂ|| ೧೯|

ವ|| ಅಂತರ್ಧನಾರೀಶ್ವರ ಮೂರ್ತಿಯಂಕಂಡು ರೋಮಾಂಚಕಂ
ಚಾಕಿತ ಗಾತ್ರನಾಗಿ ಚರಣಯುಗ್ಮದೊಳ್ಪೈಗೆಡದಿರ್ಪ ತಿರುಮೂಲ
ರಂ ಪಿಡಿದೆತ್ತಿ ಮೈಯ್ದಡವಿ ಸುಡಸೋವಿರಾದಿ ಕೇಶ್ವರಂ ಗಿಂತೆಂದಂ

ಕಂ|| ಇಳೆಯೊಳ್ಗಣ ಭಕ್ತನಿಳ್ದಿರೊಳಗದ್ದು ವ್ರತನ್ನನಲ್ಲದಿವನಂತಿರೆ ಪೇ| ಲೊಳಗದ್ದಿ ದವರದಾರೆನುತಲಘುಕೃಪಾವಾರ್ಧಿ ಶಂಭುನಂದಿಗೆ ನುಡಿದಂ|| ೨೦|

ವ|| ಅಂತುಗಿರಿಜೇಶಂ ಪೊಗಳುತ್ತಂ ತಾಂಬರಿಸಿದ ದಿವ್ಯವಿಮಾನದೊ ಳ್ತಿರುಮೂಲಭಕ್ತನಂ ಕುಳ್ಳಿರಿಸಿ ನಿಯಾಮಿಸಲ್ಕಾಗಳ್||

ಕಂ|| ಅವನಿಗೆಪೂಮಳೆಗರೆಯು| ಲ್ದಿವಿಜಾನಕರಾವಮುಣ್ಮಿ ಮಣಿಪುಷ್ಪ ಕಮಾ| ಶಿವಭಕ್ತಂಜೆರಸಧಿಕೋ| ತ್ಸವದೊಳ್ಕೈಲಾಸ ಗಿರಿಗೆಬಂದು ತ್ತಾಗಳ್|| ೨೧|

ವ|| ಅಂತುಕೈಲಾಸಗಿರಿಗೇಳ್ತಂದ ತಿರುಮೂಲಭಕ್ತರ್ವೆರಸು ಸಭಾ ಮಂಟಪದೊಳ್ಪ್ರವಃಢ ಗಣಂಗಳ್ಸಹಿತ ವೊಡ್ಡೋಲಗಂಗೊಟ್ಟುಕುಳ್ಳಿ ರ್ದಾಗಳ್|

ಕಂ|| ಪಿರಿದುಂಮುಗ್ಧನೆನಿಪ್ಪಾ| ತಿರುಮೂಲಗೊಲ್ಮೆಯಿಂದೆಗಣಪ ದಮಂಕೊ| ಟ್ಟುರುತರ ಕರುಣಾಕರಶಂ| ಕರನೊಲವಿಂದೆಸೆವುತಿರ್ದ ನಾಸ್ಥಾಯಿಕೆಯೊಳ್| ೨೨|

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ ಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ತಿ ರುಮೂಲಮಾಹೇಶ್ವರಕಥಾವೃ ತ್ತಾಂತಃಷಟ್ತ್ರಿಂಶದಾಶ್ವಾಸಂ||

...ಶ್ರೀ...

## ಮೂವತ್ತೇಳನೆಯ ಆಶ್ವಾಸಂ
## ನಮಿನಂದಿಮಾಹೇಶ್ವರ ಕಥಾವೃತ್ತಾಂತಂ

ನಮಿನಂದಿಯಡಿಗಳಸಕಲ | ಪ್ರಮಥರಘೀಯೆಂದೆನಲ್ಕೆ ಗಣಪದಮಂ
ಕೊ| ಟ್ಟಪುರಾಧೀಶ್ವರ ವಿನುತ| ಕ್ರಮಯುಗ ಸೋಮೇಶನೆಮ್ಮ
ಪಾಲಿಕೆನಮ್ಮಂ||

ಪೆಸರ್ವಡೆದ ಚೋಳಧರೆಯೊಳ್ | ರಸಾಲವನದಿಂತ್ರಟಾಕದಿಂಕ
ಳಮಷ್ಟೇ| ತ್ರಸಮಿತಿಯಿಂತಿರು ವಾರೂ|ರೆಸೆವುತ್ತಿರ್ಪುದುಸೆಗಳ್ದ
ಪವ್ರಜದಿಂ||

ಎಸೆವಾ ತಿರುವಾರೂರೊಳ್ | ಸಸಿಯುಂಸೂಡಿದನ ಭಕ್ತಿಯಂಬೀ
ರುತ್ತುಂ| ದೊಸೆದು ನಮಿನಂದಿಯಡಿಸಂ| ತಸದಿಂದಿರುತಿರ್ಪನತುಳ
ತರಜಸದಿಂದಂ||

ವಿನಯದಿ ತಿರುವಾರೂರ್ಕ್ಕಡೆ| ಯನಸಧಿಕೋತ್ಸವದಿಪೂಜೆಗೆಯ್ದ
ಲ್ಲದೆಭೋ| ಜನಮಂಮಾಡದ ನಿಯಮದಿ| ನನಿಶಂನಮಿನಂದಿಯಡಿಗಳ
ರ್ಪನರ್ಜನದಿಂ||

ಮನಮುಂ ಕೈಯುಂ ತಣಿಯ | ಲ್ದಿನದಿನದೊಳ್ಪುರುಪೊತ್ತಪ್ಪ
ಡೆಲಿಂಗಕ್ಕನುನಯದಿನೆಂಟುಪರಿಯ|ರ್ಚನೆಯುಂನಮಿನಂದಿಯಡಿಗಳ
ಲ್ಪಿಂಮಾಳ್ಪರ್||

ಭರದಿಂ ಗಳಿಸಿದ ಧನಮಂ| ಶರಣರ್ಗೀವುತ್ತ ಮಿಾಶಭಕ್ತಿಯದೆಸೆ
ಯೊಳ್| ಮರುಳೆಂದೆನಿಸುತ್ತಂತ| ತ್ಪರದೊಳ್ನಮಿನಂದಿಯಡಿಗಳೊ
ಲವಿಂದಿರ್ಪರ್||

ವ| ಅಂತೀಪರಿಯೊಳ್ಪಲವು ವತ್ಸರವಾತಿರುವಾರೂರ್ಕ್ಕಡೆಯನಪ್ಪ
ಪಲಿಂಗಮಂ ಮಹಾನಿಷ್ಠೆಯಿಂದರ್ಚಿಸಿ ನಲಿದಾಡಿಪಾಡಿಕಡುನೇಹದಿಂ
ದನಮಿನಂದಿಯಡಿಗಳಿರುತಿರ್ಪನ್ನೆಗಂ||

ಕಂ| ಮಳೆಗಾಲಂಬರೆ ಗರ್ಜಿಪ ಮೊಳಗುಂಥಳ ಥಳಿಸಿಪೊಳೆಪಮಿಂ
ಚುಂಕಕುಭಾ |.ವಳಿಯಂ ಮುಸುಕಿದಮೇಘಂಗಳಮಾರ್ಬಂಪಬ್ಬಿದ
ತ್ತುಧರಣೀತಳಮಂ||

ವ|| ಅಂತುಪಬ್ಬಿದ ಮಳೆಗಾಲದೊಳೊಂದುದಿನನಮಿನನಸ್ತಮಯವಾ
ದಸಮಯದೊಳ್ ನಮಿನಂದಿಯಡಿಗಳ್ ತಿರುವಾರೂರಧಿಪತಿಯಪ್ಪ

ವಲಿಂಗಕ್ಕರ್ಚನೆಯಂಮಾಳ್ಪೆನೆಂದುದ್ಯುಕ್ತನಾಗಿ॥

ಕಂ॥ ಘನಮಾರ್ಗವ ನಳ್ಳಿರಿವು। ತ್ತಿನ ಬಿಂಬದತೆರದಿ ನೆಸೆವಪೊಂಗಳ
ಸದಪಾ॥ ವನ ಲಿಂಗದಾಲಯಕ್ಕತಿ। ವಿನಯದಿ ನಮಿನಂದಿಯಡಿಗಳರ
ದೇಳ್ತದಂ॥

ವ॥ ಅಂತೇಳ್ತಂದುನೊಳ್ಪಲ್ಲಿ

ಕಂ॥ ಜ್ಯೋತಿರ್ಲೋಕಂ ನಲವಿಂ। ಭೂತಳಕೇಳ್ತಂದ ತೆರದಿಬೆ
ಳಗುವದೀಪ। ವ್ರಾತದಿ ನೊಪ್ಪುವ ಲಿಂಗನಿ। ಕೇತನಮಂಪೊಕ್ಕುಭ
ಕ್ತನೀಕ್ಷಿಸುವಾಗಳ್॥

ಪೊಡಮೊಡುವ ಕುಣಿವಪಾಡುವ। ಬಿಡದೊಲವಿಂ ಪೊಗಳ್ವಭಕ್ತಜ
ನಮಂನೊಡು। ತ್ತಡಿಗಡಿಗಾಹಾ ಎನುತಂ। ಕಡುಸೊಗಸಿಂ ಲಿಂಗಪೆಡೆ
ಗಬಂದಂಭಕ್ತಂ॥

ವ॥ ಅಂತೆ ಬಂದತುಳೋತ್ಸಾಹದಿಂಜಯಜಯನಮಃಶ್ಶಿವಾಯವೆನು
ತ್ತಂಸವಿಾಪದೊಳ್ಪದ್ಮಾಸನಮ ನಳಂಕರಿಸಿ ಯೋಗವೋಕ್ತಿಯಿಂದವಿ
ಭೂತಿರುದ್ರಾಕ್ಷೆಗಳಂತಾಳ್ದು ಸಾನಂದದಿಂದಷ್ಟ ವಿಧಾರ್ಚನೆಯಂಮಾ
ಡಿ ಕ್ತಿರಸ ಣ ವ ದೊಳ್ಮುಳುಗಾಡಿ ಗದ್ಗದಕಂಠತೆಯಿಂಪರ
ಮಾನಂದಾಶ್ರು ಜಳಭರಿತನಯನನಾಗಿ ನಮಿನಂದಿ ಯಡಿಗಳ್ಶಿವಲಿಂಗ
ಮಂಬೀಳ್ಕೊಂಡು ನಿಜಗೃಹಕ್ಕೈ ತರ್ಪಾಗಳ್॥

ಕಂ॥ ಪೊಡವಿದೆಸೆ ಯಾಗಸಂಗ। ಳ್ಪಡೆಕಾಣಲ್ಬಾರ ದಂತಿರಾದುದ
ನೋಡ ಲ್ಕಡುವಿರುಳಿಡಿದ ತಮಾಂಧದ। ಕಡುಮಳೆತಾನಭ್ರದಿಂದಮು
ದನೀವಗಳ್ವಿಂ॥

ಉ॥ ಘೋರತಮಂಥಡೊಸ್ಸಿಡಿಲ ಗರ್ಜನೆ ಯೊಳ್ಘನವೃಷ್ಟಿಯೊಳು
ಯ್ಯಃಪೂರದೊಳುರ್ವಿ ಚಂಚಳಿಪ ಮಿಂಚಿನೊಳಂ ಜಿಪಭೂತಯೂ
ಥದೊಳ್। ಧೀರತೆಯಿಂದಮುತ್ಕಟದ ಭಕ್ತಿಯೊಳೆಲ್ತ ಶುತಿರ್ದನಂದ
ಪ। ಣಾರಮಣಾಂಘ್ರಿಯಂನೆನವುತಾ ನಮಿನಂದಿಪಡಿ ಪ್ರಮೋದ
ದಿಂ॥

ಕಂ॥ ಇರುಳಾಮಳೆಯೊಳ್ಪರುತಂ ಕೆ ರಡೊಂದಿರಲೆಡಹಿ ನೊಂದು
ಬೀಳುತ್ತತ್ಯಾ। ಸುರದಿಂದಾ ಪೂರೊಡೆಯನೆ। ಶರಣೆನೆ ನಮಿನಂದಿಪು
ಡಿಯನೆತ್ತಿದನೀಶಂ॥

ಘನಭಕ್ತಿರಸದಿ ಪೆರ್ಮೆಱರು| ಳೆನಿಸುವ ನಮಿನಂದಿಯಡಿಗ್ಗೆ ಸ್ವೈ
ಗೊಟ್ಟಪಘುಭಂ| ಜನನೆತ್ತಿ ಪುಗನೆ ನೊಂದೆಯು| ಯೆನುತಂಪೆಯ್ದ್ದ
ವಿರೂಪುದೋರಿದನಾಗಳ್॥

ತುರಂಗವೃತ್ತಂ| ಪಿಂಗಳಚಾರುಜಟಾ ಮಕುಟಂದಿ ವಿಜಾಪಗೆ ಚಂ
ದ್ರಮನಗ್ನಿದೃಶಂ| ತುಂಗಭುಜಂಗ ಮಕುಂಡಲ ಮುಗ್ಧವಿಷಂ ನ್ರಕ
ಟೋಟಿ ವಿಭೂತಿಕಪಾ| ಲಂಗಜಕೃತ್ತಿಸಹಾ ಮಳಪಾದಯುಗಂ ಪೆ
ರ್ಚಿಯಲ್ಕಗಜಾಕ್ಷಹಿತಂ| ಮಂಗಳಬಾಹುದಶಂಗಳಿ ನೈದುಮೊಂಗಂಗಳ
ನೊಪ್ಪಿದನಂದಭವಂ॥

ವ| ಅಂತೊಪ್ಪುವ ಶಿವನದಿವ್ಯಮೂರ್ತಿಯಂಕಂಡು ಬೆಚ್ಚಿದಂತಾಗಿಚ
ರಣದೊಳ್ಸೈಗೆಡೆದು ಪೊರಳ್ದು ಪೊಟ್ಟೆಯಂ ಪೊಸೆದುಕೊಂಡು
ಭಕ್ತಿರಸೋದ್ರೇಕದಿಂ ಕಡುನೇಹದಿನಭವನನೇಕನಚಿಂತ್ಯನೆಂದರಿಯ
ದೆತನ್ನಂತೆಬಗೆದಕಟಕಟದೇನಿದೇನತ್ಯಂತಪರಮಸುಖಸ್ವರೂಪನಪ್ಪ
ನಿಮ್ಮಡಿಗಳೀಮಳೆಯೊಳೀರಾತ್ರಿಯೊಳ್ನೀಂತನ್ನನೆತ್ತಲ್ಬರ್ಪರೆ ದೇವಾ
ಯೆನುತ್ತಂ ನಿಜನಯನದಿಂ ಬಾಷ್ಪಧಾರೆಗಳಂ ಸುರಿವುತ್ತಂನಮಿನಂದಿ
ಯಡಿಗಳ್ಕೈಗಳಂಮುಗಿದಿಂತೆಂದರ್॥

ಕಂ| ಪೃಡನೀಂಬರುತೆ ನಿತೆಡೆಗಳೊ| ಳೆಡಪಿದೆಪೇಳ್ತಂದೆನೊಂದೆ
ಯೆನುತುಮ್ಮಳಿಸು| ತ್ತಡಿಗೆರಗಿದರ್ಾ ಮುಗ್ಧನ| ನುಡಿಗೆಕರಂಮೆಚ್ಚಿ
ವರವನೆರೆಯೆನಲಾಗಳ್॥

ವರವಂ ಬೇಡೆನೆ ಮಳೆಯು| ಪ್ಪಿರುಳೆಂದುಂ ಮನೆಯಬಾಗಿಲಿಂ ಪೊ
ರಮಡದಿ| ಪುರಹರಯನ್ನಾಣೆ ಯೆನು| ತ್ತಿರೆಭಕ್ತನಮುಗ್ಧನುಡಿಗ
ಮೆಚ್ಚಿಂತೆಂದಂ॥

ಇಂದುಮೊದಲಾಗಿ ಮಳೆಯೊಳ| ಗೆಂದು ಪೊರಮೊಡೆಯೆನುತ್ತೆ
ವರಮಂನಗುತಿ| ತ್ತಂದಭವನೋತು ಘನಕೃಪೆಯಿಂದಂನಮಿನಂದಿಯ
ಡಿಯನೋವಿದನಾಗಳ್॥

ವ| ಅಂತೋವಿ ಭಕ್ತವತ್ಸಳನಪ್ಪ ಮರುಳ್ಗಳೊಡೆಯನಾನಮಿನಂದಿ
ಯಡಿಗಳಭಕ್ತಿಯುನ್ನತಿಯಂ ನಂದಿನಾಥಂಗೆ ಪೇಳ್ದು ಕೊಂಡಾಡುತ್ತಂ
ತಾಂಬರಿಸಿದದಿವ್ಯ ವಿಮಾನದೊಳ್ನಮಿ ನಂದಿಯಡಿಗಳಂ ಕುಳ್ಳಿರಿಸಿನಿಯಾ
ಮಿಸಲ್ತಾಗಳ್॥

ಕಂ॥ ಧರೆಯೊಳ್ಪೂಮಳೆ ನಭದೊ। ಳ್ಸುರಭೇರೀ ರಾವಮೆಸೆಯಲಾ
ಶಿವಭಕ್ತಂ। ಬೆರಸುಮಣಿಪುಷ್ಪಕಂಸಾ। ದರದಿಂದಂ ರಜತಗಿರಿಗೆಬಂದು
ತ್ತಾಗಳ್॥

ವ॥ ಅಂತುಬಂದನಮಿನಂದಿಯಡಿಗಳ್ಪುರಸುರ ಜಟಾಚಳಾಸ್ಥಾನಮಂ
ಟಪದೊಳ್ಸಕಲ ಗಣಂಗಳ್ಸಹಿತಂ ಮಹೇಶ್ವರಂ ಮಹಾಸುಖದಿಂದೊ
ಡ್ಡೋಲಗಂಗೊಟ್ಟಿರ್ದಾಗಳ್॥

ಕಂ॥ ಮಿಗೆಸೊಗಸಿಂಸುರ ಮುನಿಗ। ಳ್ಪೊಗಳಲ್ನಮಿನಂದಿ ಯಡಿಗೆ
ಗಣಪದಮಂಕೊ। ಟ್ಟಗಧರನಮಿತ ಪದಾಂಬುಜ। ಯುಗಶಂಕರನೊ
ಪ್ಪುತಿರ್ದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರಚಾರಿತ್ರದೊಳ್ನಮಿನಂದಿ ಮಾಹೇಶ್ವರಕಥಾವೃತ್ತಾಂ
ತಂಸಪ್ತತ್ರಿಂಶದಾಶ್ವಾಸಂ॥

— ಶ್ರೀ —

## ಮೂವತ್ತೆಂಟನೆಯಆಶ್ವಾಸಂ

## ವೇಳ್ಕೊತ ಮಾಹೇಶ್ವರಕಥಾವೃತ್ತಾಂತಂ

ಗುರುಪಾದಭಕ್ತಿಯಿಂತ। ಚ್ಛರಣಜನಂ ಮೆಚ್ಚೆ ಮೆರೆದವೇಳ್ಕೊತಗರ್ಭ
ದರದಿಂ ಗಣಪದವಿತ್ತಾ। ನಿರುಪಮಸೋಮೇಶನೊಲ್ದು ಪಾಲಿಕೆನ
ಮ್ಮಂ॥ ೧

ಘನಚೋಳ ಧರೆಯೊಳೊಲವಿಂ। ಧನಧಾನ್ಯದಪಿರ್ಚನುಳ್ಳಭಕ್ತಾಘದೆ
ಘೂ। ವಿನುತಮಣಿಮಂದ ಪುತ್ರೂ। ರನಿಶಂ ಸತ್ಕೀರ್ತಿವೆತ್ತುರಂಜಿಸು
ತಿರ್ದಂ॥ ೨

ಗುರುಭಕ್ತರ ಹರಭಕ್ತರ। ವರಜಂಗಮಭಕ್ತರಾ ಲಯಂಗಳ್ಪೆದಾ।ದ
ರದಿ ಮಣಿಮಂದಪುತ್ತೂ ... ನಾಥರಯಶ

ಛಂ॥
ಚಾರುತರಶುಭಶಧಿನಿರುತಿ। ಘ್ರಸಿರೆೞ್ವೇೞಿರ್ಯ್ಯಕ ತನೆಂಬ ಮಾಹೇಶಂಗಾ। ೬
ರೀರಮಣನಕೃಪೆಯಿಂದಂಥಾರಿಣೆಗಾಶ್ಚರ್ಯ ವೆನಿಪಭಕ್ತಿಯೊಳಿರ್ದ್ದಂ॥

ವ॥ ಘುತ್ತ್ರಮಾವಣಿಮುಂಡಪುತ್ರರೊಳಧಿಕ ಶೈವಾಚಾರ್ಯರೆನಿಸುತಿರ್ಪರವರಿಂ ಸದ್ಗುರುಕಾರುಣ್ಯಮಂ ಪಡೆದು ಗುರುವೆಲಿಂಗವೆಂದು ಕಂಡುದಾಸ್ಯಭಾವದಿಂ ಗುರುವಾಜ್ಞೆ ಗುರುಕೃಪೆಯಾರ್ಯನ ಶುಶ್ರೂಷೆ ಸೇವೆವೆಷ್ಟಶವೃತ್ತಿ ಪಾದೋದಕಪ್ರಸಾದವೆಂಬೀ ನಿಯಮವಂ ಶಿಷ್ಯತನದಗುಣಮುಂಬೀರ್ಶುತ್ತಂ ಸಂಮುಖಸಮಾಸನ ಸಮುಪಜ್ಞೆಯೆಂಬಿಪಂಬಿಟ್ಟ ಅಹಂಕಾರವಳಿದು ಕಿಂಕರವೃತ್ತಿಯಿಂ ವೇೞಿರ್ಯ್ಯ ತಮಾಹೇಶ್ವರಂ ಗುರುಭಕ್ತನೆನಿಸುತಿರ್ದನಂತುಮಲ್ಲದೆಯುಂ

ಕಂ॥ ಮೂವತ್ತಾರುಂತತ್ವಂ। ಜೀವಂಶಿವತತ್ವಮೆಸೆವ ಶಿವತತ್ವದ
ಸ। ಜ್ಜೀವಂಗುರುತತ್ವಮೆನು। ತ್ತಾವಂಗುರುಭಕ್ತನೆನಿಸಿದಂ ವೇೞಿರ್ಯ್ಯ
ತಂ॥ ೭॥

ವ॥ ಅಂತಾವೇೞಿರ್ಯ್ಯತಂಮನೋವಾಕ್ಕಾಯಂಗಳೆಂಬೀ ತ್ರಿಕರಣಶುದ್ಧಿಯಿಂಸತೀ ಪುತ್ರರಂ ವ್ಯವಸ್ಥಾಯಮುಮಂ ಮರೆದಿರುಳಂ ಪಗಲುಂ ಬಿಡದೆಗುರುಪಾದ ಭಕ್ತಿಯಿಂ ಮರುಳಾಗಿ ಗುರುಮಂದಿರದಬಾಗಿಲಂ ಕಾವುತ್ತಿರ್ಪುದುಂ ತದ್ಗುರುಗಳ್ ಕೃಪೆಯಿಂಕರೆದು ಪಾದಸನಿಾಪದೊಳ್ಕುಳ್ಳಿರಿಸಿ ಗುರುವಚನಮ ಲಂಘ್ಯಂಶಿಷ್ಯರ್ಗದು ಕಾರಣಂ ನೀನೆನ್ನಾಜ್ಞೆಯುಂ ಕೈಕೊಂಬುದೆನುತ್ತಿಂತೆಂದರ್॥

ಕಂ॥ ಎಲೆಮಗನೆ ನಮ್ಮಪಾದದ। ನೆಲವಿಂ ಬಿಡಲಾರ ದಿರ್ದೊಡೀ
ಪಾದುಕೆಯುಂ। ಸಲೆತಾಳ್ದಿದೊಡೆಯುಂ ನಿಜ। ನಿಳಯಕ್ಕಂಪೋಗಿಭಕ್ತ
ನೆನಿಪುದು ಜಸದಿಂ॥ ೮

ವ॥ ಎಂದೊಡಾವೇೞಿರ್ಯ್ಯತಂ ಗುರುವಾಜ್ಞೆಯಂ ಮಾರವೆಹಸ್ತಾಧನುತ್ತಂ ಕೈಕೊಂಡು ತನ್ನನಿಳಯಕ್ಕೇೞ್ತಂದು ಶ್ರೀಗುರುಪಾದುಕೆಗಳಂ ತಮ್ಮಮಸ್ತಕದೊಳಿಪ್ಪುತ್ತು ನೂತನೋತ್ಸವಕ್ಕದಿಂ ಬಿಗಿದುಸುತ್ತಿ ದೃಢೀಕರಿಸಿ ಭಯಭಕ್ತಿಯಿಂ ನಾನಾವಿಧದರ್ಶನೆಗಳಿಂ ತಿರೋಹಿತಮುಂಮಾಡಿ ನಲಿಪಾಡಿಪಾಡಿ ಲಿಂಗಮೂರ್ತಿಗಳಪ್ಪ ಮಾಹೇಶ್ವರರ್ಗೆಭಜಿಸಿಯುಸ್ವತ್ತಂ ನಿಜಬವಸಾಯ ಪ್ರಿಯಾರ್ಥ ನಂತುಮಲ್ಲದೆ

ಯುಂ||

ಕಂ|| ಗುರುಭಕ್ತಿಯ ಮರುಳಿನಿಸು|ತ್ತುರುತರ ಸಂವತ್ಸರಂಗಳುಂಪಿರಿ ದಾಗು| ತ್ತಿರೆಶಿವನಂದಾ ವೇಳ್ಳೊ| ತರಮನಮಂ ನೋಡಲೆಂದು ಬರುತಿ ರ್ಪಾಗಳ್| ೭|

ಮ|| ಪರಶಾವೇರಿಯನೊಲ್ದು ಮಿಂದು ಘನರುದ್ರಾಕ್ಷಾಳಿಯುಂ ತೊ ಟ್ಟಬಂ| ಧುರಭಸ್ಮಾಂಕಿತನಾಗಿತದ್ಗುರುಶಿವಾಂಘ್ರಿ ಧ್ಯಾನಮಂತಾಳ್ದು ತ| ಚ್ಛಿರದೊಳ್ಪೊತ್ತೆಸೆದಿರ್ಪ ಪಾದುಕೆಗಳಂ ಸದ್ಭಕ್ತಿಯಿಂಪೂಜಿಗೆ| ಯ್ದಿರೆ ವೇಳ್ಳೊತರಮುಂಡೆ ಬಂದುಗಿರಿಶಂ ನಿಂದಿರ್ದನಾನಂದದಿಂ||

ಕಂ|| ಫಣಿಗಣ್ಣದಿ ಶಶಿಕೆಂಜಡೆ ಫಣಿಗಳ್ಮಿರಪ್ಪೈದು ಮೊಗದಿಶನ್ಸಾ ಘದಸಂ ಪಣಿಯುದಶಬಾಹುವಿಂದಾ| ರಣಿಮುಖಪಿತಪ್ರೋತುಮೂರ್ತಿ ಯಿಂನಿಂದಿರ್ದಂ|| ೯|

ವ|| ಅಂತುದಿವ್ಯಮೂರ್ತಿಯಂಮಸ್ತಕದೊಳ್ಗುರುಪಾದುಕೆ ಯಿರ ಲ್ತಿಲವಾಗೆನೆಂದು ಹೊರಹಜ್ಜೆದೊಳೆರಗಲ್ ಛಲಕ್ಕೆಕರೆಗೂರಪಂಜಿಕ ಗುವಿಡಿದುವೇಳ್ಳೊತಂ ಗಳ್ಕರಿಂದಿಂತೆಂದಂ||

ಕಂ|| ವನಜಾಸನಂಗಗೋಚರನೆನಿಪನ್ನಂ ನಿನಗೆತೋರಲಿರಗೆಯ ದೇಕೆಂದೆನೆವೆ| ಳ್ಳೊತಂಕೈಮುಗಿದನುವಪುದಿಂ ಚಂದ್ರಮೌಳಿಗಂದಿಂ ತೆಂದಂ|| ೧೦|

ಚಂ|| ಘನಗುರುಲಿಂಗಮೆಂಬನುಡಿಯಂ ನೆರೆತಾಳ್ದುಭವ ಸ್ವರೂಪ ಮಂ ದಿನದಿನದಲ್ಲಿಕಂಡುಮುದಮಂ ಪಡೆದಿರ್ಪನೊರಲ್ದುಭಾವಿಸ| ಲ್ಕ ನಮಿ ದುಮುನ್ನ ಮೇನಿನಗೆರಂಗಿರುತಿರ್ಪುದು ಬೇರೆಬಾಹ್ಯದೊಳ್ತನು ವೆರಗಲ್ಕೆವೇಳ್ಕೆ ಪರಿಪೂರ್ಣನೆನಿಪ್ಪಕೃಪಾಬ್ಧಿ ಶಂಕರಾ|

ವ|| ಎಂದಾಗುರುಲಿಂಗಭಕ್ತನಪ್ಪ ವೇಳ್ಳೊತನಿಂತೆಂದಂ||

ಕಂ|| ಶಿರದೊಳ್ಪೊತ್ತಿರ್ಪೀಮ| ದ್ಗುರುಪಾದುಕೆದೇವನಿಮ್ಮಪಾದು ಕೆಯಲ್ಲಾ| ಗುರುಮೂರ್ತಿಯೆಂಬವೇಳ್ಳೊ| ತರಗುರುಭಕ್ತಿಗೆಕಪರ್ದಿ ಮೆಚ್ಚಿದನಾಗಳ್|| ೧೨|

ವ|| ಅಂತುಸದ್ಗುರುಮೂರ್ತಿಯೊಳ್ತನ್ನನೇಕ ನಿಷ್ಠೆಯೊಳ್ಕಂಡ ವೇ ಳ್ಳೊತರಂ ಕರುಣಾವಲೋಕನದಿಂ ನೋಡಿ ಬೋಳೈಸಿ ಯೆಲೆಮಗನೆ ನೀಂ ಗುರುಭಕ್ತನಪ್ಪೆಯೆಂದಿಂದುಧರಂ ನಂದಿನಾಥಂಗಿಂತೆಂದಂ||

ಕಂ॥ ಗುರುಪಾದಮಕೆ ಶಿರದೊಳಿರ| ಲ್ಪರವಸ್ತುವಿಗೆರಗನೆಂಬ ಫಳ
ದಿಂದಾಂ ಮುಂ|| ದಿರಲಿರಗನೀತನೆನುತಂ| ಕರುಣದಿನಾನಂದಿಗೆಂದನಂ
ದುವೆಯೆರಸಂ|| ೧೮|

ವ|| ಎಂದಾಶಿವಂ ಮೆಚ್ಚಿ ಗುರುಭಕ್ತಿಯ ಫಲಮಂ ಕೊಂಡಾಡುತ್ತಾಗ|
ಳ್ತಾಂ ಭರಿಸಿದ್ದದಿವ್ಯಪುಷ್ಪಕದೊಳಾ , ವೇಳಕ್ಕೂತರಂ ಪ್ರೀತಿಯಿಂ ಕುಳ್ಳಿರಿ
ಸಿ ನಿಯಾಮಿಸಿದಾಗಳ್||

ಕಂ|| ಸುರಭಸದಿಂ ವೇಳಕ್ಕೂತ| ವೆರ್ ರಸನಿಮಿಷಪಟಹರವದೊಳೆಸಲ್ಗಳ
ಮಳೆಯೊಳ್| ವರಪುಷ್ಪಕಮದುಪೊಳೆವು| ತ್ತುರುತರ ರಜತಾಚಳಕ್ಕೆ
ಬಂದುತ್ತಾಗಳ್|| ೧೯|

ವ|| ಅಂತು ಬಂದು ವೇಳಕ್ಕೂತವೆರ್ರಸು ಗಿರಿಜಾರಮಣಂ ಕೈಲಾಸ
ಸ್ಥಾನದೊಳೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್|

ಕಂ|| ದೇವಗಣಂ ಪೊಗಳುತ್ತಿರಲಾ ವೇಳಕ್ಕೂತಗೆನ್ನ ಮೆಚ್ಚಿ ಗಣಪದ
ಮಂ ಕೊಟ್ಟೋವಿದ ಸದ್ಗುಣನಿಧಿಗಿರಿಜಾವಲ್ಲಭನೆಸೆವುತಿರ್ದನಾಸ್ಥ
ಯಿಕೆಯೊಳ್| ೨೦|

ಗದ್ಯ ಇದು ಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪಂಪಾಪುರಾಧಿಪತಿ ವಿರೂ
ಪನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ
ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ವೇಳಕ್ಕೂತ ಮಾಹೇಶ್ವರಕಥಾಪ್ರ
ಕ್ರಾಂತಂ ಅಷ್ಟತ್ರಿಂಶದಾಶ್ವಾಸಂ||

...ಶ್ರೀ...

## ಮೂವತ್ತೊಂಭತ್ತನೆಯ ಆಶ್ವಾಸಂ

## ಗಣನಾಥಮಾಹೇಶ್ವರ ಕಥಾವೃತ್ತಾಂತಂ

ಸ್ವಾಮಿಗಣನಾಥಗೊಲವಿಂ। ದಾಮಾಗಣಪದವಂಕೊಟ್ಟುಮೆರೆದಾಸುರ
ರಕ್ಷಾಮಣಿಮುನಿಗಣಚಿಂ। ತಾಮಣಿಸೋಮೇಶನೊಲ್ದು ಪಾಲಿಕೆನ
ಮ್ಮಂ॥ ೧॥

ಗಳವೃತ್ತಂ॥ ಚೋಳಧರಿತ್ರಿಯೊಳಗ್ಗಳಕೆರೆಯಿಂ ಶಾಲಿಯಕ್ಕ್ಯವೊಲ
ದಿಂ ಫಳವನದಿಂ। ಶೂಲಿಯಭಕ್ತರಗೇಹಾವಳಿ ಲಿಂಗಾಲಯದಿಂದೆಸೆದಿ
ರ್ಕುಂ ಶಿವಪುರಂ॥ ೨॥

ಕಂ॥ ಅಂತಾ ಶಿವಪುರದೊಳ್ ಬಳ। ವಂತಂಗಣನಾಥನೆಂಬಮಾಹೇಶ್ವರ
ನತ್ಯಂತೋದ್ರೇಕದ ಭಕ್ತಿಯನಾಂತು ಮಹಾಕೀರ್ತಿವೆತ್ತು ತಾನಿ
ರುತಿರ್ಪಂ॥ ೩॥

ವ॥ ಮತ್ತಮಾಶಿವಪುರದೊಳಾಮಹೇಶ್ವರಂ ನಿಚ್ಚಲ್ ಭವಿಗಳಪ್ಪವ
ರ್ಗೆ ಬೇಡಿದಪ್ರೊಂಗೊಟ್ಟು ಶಿವಭಕ್ತರಂಮಾಡಿ ಬಳಕ್ಕಂಲಿಂಗಾರ್ಚನೆ
ಯುಂ ಮಾಡುವಿ[illegible]ಸಿಯಾವ ಸುಂಪಿಡಿದಿರುತಿರ್ಪನೆಂತುಮಲ್ಲದೆಯುಂ॥

ಕಂ॥ ಪಿರಿದೊಸೆ ಗೊಡುವನಲ್ಲದೆ। ಡಿರದಲಗಂ ತೋರಿನತ್ವದಿಂ
ಭವಿಗಳಭಾ। ಸುರದ[illegible]ಳ್ಪಿಸಿತಮು ನಿಟ್ಟೇ। ಶ್ವರಕಿಂಕರರೆನಿಸಿಮೆರೆದನಾ
ಗಣನಾಥಂ॥ ೪॥

ವ॥ ಅಂತೀಪರಿಯೊಳ್ದಿನದಿನದೊಳ್ ಭವಿಗಳ್ಗೆವರಂವಿಭೂತಿಯನಿಟ್ಟು
ಶಿವಭಕ್ತರಂ ಮಾಡುತಿರ್ಪಗಣನಾಥನಸಮರ್ಥಿಕೆಯಂಕೇಳ್ದು ನಾಡೊ
ಳಗುಳ್ಳಭವಿಗಳೆಲ್ಲಂಪೊನ್ನಾಸೆಗೆ ಕೆಲಂಬರಂಜಿಕೆಯಿಂ ಕೆಲಂಬರಾರ್ಜಿ
ತಭಕ್ತಿವಿಗೆಮುಕ್ತಿಯಿಚ್ಛೆಯಿಂ ಕೆಲಂಬರ್ಭಕ್ತರಾಗಿ ಲೋಕದೊ
ಳ್ವಂದ್ಯರೆನಿಸುತ್ತಿರ್ದರಂತುಮಲ್ಲದೆಯುಂ॥

ಕಂ॥ ನಿರುತಂಪಾಲ್ಮಧುವಾದಂ। ತಿರೆಸಾರುಚಿಯಳವುದಪರಿ ಪರಿ
ಯೊಳ್ಪೊಂಗೊಂ। ಡುರುತರಭವಿಗಳ್ ಶಿವಭ। ಕ್ತರಾಗಿಗಣನಾಥನಿಂ
ದೆಗತಿವಡೆದಿರ್ಪರ್॥

ವ॥ ಅಂತು ಕಾಲಿಗೆ ಸಕ್ಕರೆಯುಮೆಸ್ಯುವಂತೆ ಭವಿಗಳ್ಪೊಂಗೊಂಡು
ವಿಭೂತಿಯನಿಟ್ಟು ಶಿವಭಕ್ತರಾಗಿ ಮುಕ್ತಿಭುಕ್ತಿಯಂಪಡೆವುತಿರ್ದರಂ
ತುಮಲ್ಲದೆಯುಂ॥

ಕಂ|| ದಿನದಿನದೊಳ್ಮೈವರ್ಕೈವರ| ನನುನಯದಿ ವಿಭೂತಿಯಿಟ್ಟುಮಾ ಹೇಶ್ವರರಂ| ದೆನಿಸುತ್ತಂ ಗಣನಾಥಂ| ಘನಭಕ್ತಿಯನಿಯಮದೊಳ್ವಿ ರಾಜಿಸುತಿರ್ದಂ|| ೬

ವ|| ಇಂತುಗಣನಾಥಮಾಹೇಶ್ವರಂ ತನ್ನ ತನುಮನೆಧನ ಮೆಂಬಿವರಿಂ ತಾಂಪಿಡಿದನಿಯತಾಚಾರದ ಛಲಮುಂ ಸಲಿಸುತ್ತಂಮತ್ತಮೊಂದು ದಿವಸಂ ನಿಚ್ಚಕಿನಂದದಿಂ ಪೊಂಗೊಟ್ಟನಾಲ್ವರುಭವಿಗಳ್ ವಿಭೂತಿಯನಿಟ್ಟು ಭಕ್ತರಂಮಾಡಿ ನಿಜನಿಳಯಕ್ಕೆಲ್ತಂದು ಸನ್ಮಾನದಿಂ ಕುಳ್ಳಿರಿಸಿಬಳಿಕಂ ನೆನೆದಾತ್ಮನಿಯಮದೊಳೊಬ್ಬ ಭಕ್ತಂಕೊರತೆಯೆಂದುಚಿತ್ತದೊಳ್ಪರಿಭಾವಿಸಿಪೊರಮೊಡಲ್ಬಗೆಯುತ್ತಿರ್ಪಾಗಳ್||

ಚಂ|| ವರಗಣನಾಥನಾಂತ ಛಲದೇಳ್ಗೆಯ ನೀಕ್ಷಿಸಲೆಂದೆನುತ್ತಮೀ| ಶ್ವರನೊಲವಿಂ ನರಾಕೃತಿಯೊಳುರ್ವಿಗೆ ಸಚ್ಛಕುನಂಗಳಂಸುವಿ| ಸ್ತರದೊಳಿಪೇಳುತಂಡಮರುಗಂ ಕರದೊಳ್ಪಿರಿದೊಪ್ಪಿಮಂದಿರಾ| ಜರಖಿಳಶ್ರುತಿಪ್ರತತಿಬಣ್ಣಿಸೆಬಂದನುದಾತ್ತವೃತ್ತಿಯೊಳ್|| ೭

ವ|| ಅಂತುಕಂತುಹರಂ ನರಾಕೃತಿಯಿಂ ಶಕುನಿಗನಾಗಿಬಂದುಪೊರಗಿರ್ಪುದಂ ಮನೆಯಪರಿಜನಂಕಂಡು ಪರಿದುಪೋಗಿಭರದಿಂ ಸ್ವೈರವೃತ್ತಿಯಿಂಬರಿಬಿಸುವಾತನೊಬ್ಬಂ ಬಾಗಿಲೆ ಳಿರ್ದಪನೆಂದುಪೇಳಲ್ಕೇಳ್ದು ಹರುಷೋತ್ಸುಕಹೃದಯನಾಗಿ ಗಣನಾಥಮಾಹೇಶ್ವರಂ ವಿಭೂತಿಯಂಕೊಂಡುಪೊರಮಟ್ಟಾಗಳ್||

ಕಂ|| ಶರಣಂಭಕ್ತ್ಯುದ್ರೇಕದಿ ನಿರದೇಲ್ತಂದುರ್ಬಿ ಡಮರುಗದಶಕುನಿಗನಂ ಪಿರಿದೊತ್ತಿ ಪಿಡಿದು ಘಣೆಯೊಳ್ವರ ಭಸಿತಮನಿಡುವೆನೆಂದೊಡೊದರಿದನಾಗಳ್|| ೮

ಉ|| ಒಲದೆಕಾಡುತಂ ಛಲದಭಕ್ತಿಯಬಲ್ಪಿಗೆ ಮೆಚ್ಚೆಪಾರ್ವತೀ| ವಲ್ಲಭನಾತ್ಮಭಾಳದ ವಿಲೋಚನಮಂ ತೆರೆಯುತ್ತೆ ಶಂಭುನಾಂ| ನಿಲ್ಲೆನೆ ಪೂಸದಲ್ಲದೆ ದಿಟಂಬಿಡನೆಂದು ವಿಭೂತಿಯಂಕರಂ ಭುಲ್ಲವದಿಂದೆಪೂಸಿಶರಣಂಬಳಿಕಾನತನಾದನರ್ಥಿಯಿಂ|| ೯

ವ|| ಅಂತುಭಯಭಕ್ತಿಯಿಂದಾನತನಾಗಿ ನೋಳ್ಪಗಣನಾಥಮಾಹೇಶ್ವರಂಗೆಪರಮಕಾರುಣ್ಯದಿಂದೆ ಭಕ್ತವತ್ಸಲನಪ್ಪ ಭೂತೇಶಂತನ್ನದಿವ್ಯಮೂರ್ತಿಯಂತೋರಿಸಿದಾಗಳ್||

ಮಾಲಿನೀವೃತ್ತಂ॥ ಅಮರನದಿನಿಶಾನಾಥಂ ಹುತಾಶಂಫಣೀಂದ್ರಂ
ಸಮುಚಿತಗರಳಂ ಭಸ್ಮಂಮದೇಭೇಂದ್ರಚರ್ಮಂ। ಡಮರುಗಮು
ರುಶೂಲಂ ಪತ್ತುತೋಳ್ಪಂಚವಕ್ತ್ರಂ। ಕ್ರಮದಿನೆಸೆಯಲೊಲ್ದಿಪ್ಪಿರ್ದ
ನಾಪಾರ್ವತೀಶಂ॥ ೧೦

ವ॥ ಅಂತೊಪ್ಪುವದಿವ್ಯಮೂರ್ತಿಯಂ ಕಂಡು ಭಯಚಕಿತಹೃದಯ
ನಾಗಿ ದೇವಾ ಎನ್ನಯ ಭಕ್ತಿಯಫಲಕ್ಕೆ ನಿನ್ನೊಳ್ಪೀರ್ದಪ್ಪೆನೆಂದಾ
ನಂದಾಶ್ರುವಾರಿಯಿಂ ಮುಂದುಗಾಣದಡಿದಾವರೆಯೊಳ್ಸೈಗೆಡೆದು ಪೊ
ರಳ್ವಗಣನಾಥಮಾಹೇಶ್ವರನಂ ಭಕ್ತದೇಹಿಕನಪ್ಪ ಗಿರಿಜೇಶಂ ಕಾರು
ಣ್ಯದಿಂಪಿಡಿದೆತ್ತಿ ಕುಳ್ಳಿರಿಸಿ ಬೋಳೈಸಿನಂದಿನಾಥಂಗಿಂತೆಂದಂ॥

ಕಂ॥ ಶ್ರುತಿಗಳ್ಗೆ ನಿಲ್ಕದೆನ್ನುಮ। ನತಿಭರದಿಂಪಿಡಿದುತನ್ನಫಲದಿಂದೆ
ನಗಂ॥ ಮತಿವಿಗಲುಪದೇಶಿಸಿದಂ। ಕ್ಷಿತಿಯೊಳಗಿನವನಂತೆ ಭಕ್ತರಾ
ರನುತಿರ್ದಂ॥ ೧೧

ವ॥ ಎಂದುಪೊಗಳ್ದು ಕೊಂಡಾಡುತ್ತಂ ತಾಂಬರಿಸಿದದಿವ್ಯ ವಿಮಾನ
ದೊಳ್ಕುಳ್ಳಿರಿಸಿ ಗಣನಾಥನಂ ಗಿರಿಶಂನಿಯಾಮಿಸದಾಗಳ್॥

ಕಂ॥ ಅರಲಮಳೆಸುರಿಯಲಾಸ ಚ್ಛರಣಂಬೆರಸಮರ ಪಟಹರವಮ
ಸೆಯಲ್ಚೆ ಚ್ಚರನೆಮಣಿಪುಷ್ಪಕಂತಾಂ ಸುರು। ಚಿರರಜತಾಚಳಕ್ಕೆ
ಬಂದತ್ತಾಗಳ್॥

ವ॥ ಅಂತುಬಂದು ಗಣನಾಥಮಾಹೇಶ್ವರಾನ್ವಿತ ಪನನ್ಯಜವಿಜಯ
ಯಂಪ್ರಮಥಗಣಂಬೆರಸೊಡ್ಡೋಲಗಂಗೊಟ್ಟುಕುಳ್ಳಿರ್ದಾಗಳ್॥

ಕಂ॥ ನಿಜಚರತತಿಮೆರೆವುತ್ತಿರೆ। ದುರ್ಜನಗಿರಿವಜ್ರನೆನಿಪ ಗಣನಾಥಂ
ಗ॥ ತ್ಯ್ರಜಿತ ಗಣಪದವಿತ್ತಾ। ನಿರ್ಜಿತಕುಸುಮಾಸ್ತ್ರನೆಸೆದನಾಸಭಿ
ಕೆಯೊಳ್॥ ೧೨

ಗದ್ಯ॥ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಮಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರಚಾರಿತ್ರದೊಳ್ಗಣನಾಥಮಾಹೇಶ್ವ ಕಥಾವೃತ್ತಾಂ
ತಮೇಕೋನಚತ್ವಾರಿಂಶದಾಶ್ವಾಸಂ॥

— ಶ್ರೀ —

## ನಾಲ್ವತ್ತನೆಯ ಆಶ್ವಾಸಂ

### ವಾಹಿಲ್ಯರ ಕಥಾವೃತ್ತಾಂತಂ

ವಾಹಿಲ್ಯಗೆ ನಿಮಿಷಸಂ| ದೇಹಂ ಪೊಗಳುತ್ತಿರಲ್ಕೆ ಗಣಪದವಿ
ತ್ತು|ತ್ಸಾಹದೆ ಮೆರೆವೊಪ್ಪುವವೃಷ| ವಾಹನನೋರ್ವೆಶನೊಲ್ದು ಪಾ
ಲಿಕೆನಮ್ಮಂ|| ೧

ಚೋಳಲೋರ್ವನರೆಯೊಳ್ ಶಿಖರ| ಶ್ಯಾಮಲೆಯದಿಂ ಲಿಂಗಗೇಹದಿಂ ಸು
ರುಚಿರಪ್ರಾ| ಘಾಳಿಗಳಿಂ ಮಣಿತೋರಣ| ಜಾಳದಿ ತಿರುಪೊನ್ನೆಯೆಂಬ ಪು
ರವೆಸೆದಿರ್ಕುಂ|| ೨

ತಿರುಪನ್ನೆಯೆಂಬ ಪುರದೊಳ್| ಶರಣಜನಾಂಭೋಧಿ ಚಂದ್ರನೆಂ
ದೆನಿಸುತಂ| ಪರಮಾನಂದದಿ ನಿರ್ಪಂ| ನಿರುಪಮ ವಾಹಿಲ್ಯನೆನಿಪ ಪರ
ಮಶಿವೈಕ್ಯಂ||

ವ|| ಮತ್ತಮಾತಂ||

ಮ|| ಗುರುಕಾರುಣ್ಯದಿನಾಂತು ಹೃತ್ಕಮಲದೊಳ್ ಸಲ್ಲೀಲೆಯಿಂ ಲಿಂ
ಗಮಂ|ನಿರುತಂ ಸಂಧಿಸಿ ಭಕ್ತಿಭಾವಕುಸುಮಾನೀಕಾರ್ಚನಂಗೆಯ್ದು
ಸಾ|ದರದಿಂ ಪಂ ವರಭಕ್ತಸಂತತಿಗೆ ಮೃಷ್ಟಾನ್ನಂಗಳಿಂದರ್ಥದಿಂ| ಪರಿ
ತೋಷಂಬಡಿಸುತ್ತಮಿರ್ಪನನಿಶಂ ವಾಹಿಲ್ಯಮಾಹೇಶ್ವರಂ|| ೪

ಕಂ|| ನಿಚ್ಚಂ ಪೊಸಪರಿಯಲರ್ಗಳ| ನಚ್ಚರಿಮಿಗೆ ಭಾವದಲ್ಲಿ ಕಲ್ಪಿಸಿ
ಮನದೊಳ್| ಬೆಚ್ಚಂತಿರ್ಪಿನೆ ಲಿಂಗ| ಕ್ಕಚ್ಚರಿಯಂ ಮಾಡುತಿರ್ಪನಾ
ವಾಹಿಲ್ಯಂ|| ೫

ಇಂದರ್ಕವಿಂದು ಪಂಕಜ| ಮಿಂದುತ್ಪಲವಿಂದು ಕುಂದವಿಂದಬ್ಜ
ಮೆನು| ತ್ತಿಂದುಧರಂಗಾಭಕ್ತಂ| ಸಂದಮನೋಭಾವದಲರ್ಗಳರ್ಚಿಸು
ತಿರ್ದಂ||

ವ|| ಇಂತೀಪರಿಯೊಳಾ ವಾಹಿಲ್ಯ ಮಾಹೇಶ್ವರಂ ಪಲವುವತ್ಸರಂ ಮ
ನೋಭಾವಕುಸುಮದಿಂ ಪ್ರಾಣಲಿಂಗಕ್ಕೆ ಪೂಜೆಯಂ ಮಾಡುತತ್ಸಾನಂ
ದದಿಂದಿರುತಿರ್ದನಂತುಮಲ್ಲದೆಯುಂ||

ಕಂ|| ಈತೆರದಿ ನಿರುತ ಕಾವೇರೀತಟಕತಿಭಕ್ತಿಯಿಂದ ಮೊಂದುದಿ
ನಂ| ಪ್ರೀತಿಮಿಗೆಪೋಗಿ ಬಳಿಕಂಗ| ಜಾತೇಶಾರ್ಚನೆಯ ಬಗೆಯೊಳಿ
ರ್ದಪ್ಪಕ್ಕಂ||

ವ|| ಅಂತೀಲಿಂಗಾರ್ಚನೆಯಂ ಮಾಡಲ್ವೇಳ್ಕೆಂದುಕಾವೇರಿ ನದಿಯೊಳು ಸ್ನಾನಮಂಮಾಡಿ ಧೌತಾಂಬರಮನುಟ್ಟುಗವೋಕ್ತಿಯಿಂವಿಭೂತಿರುದ್ರಾಕ್ಷೆಗಳಂ ತಾಳ್ದು ವಾಹಿಲ್ಯಮಾಹೇಶ್ವರಂ ಪದ್ಮಾಸನಮನಳಂಕರಿಸಿ ಸದ್ಭಕ್ತಿಯಿಂದಂತಾಗಳ್||

ಮ|| ತನುದೇವಾಲಯಮುದ್ಧಹೃತ್ಕಮಲವೇಪೀಠಂ ಲಸತ್ಪ್ರಾಣಮೇ| ಘನಲಿಂಗಂ ತನಗಾಗೆಭಾವಸುರಭೂಜಾತಪ್ರಸೂನೌಘಮ| ರ್ಚನೆಯಂ ಭಕ್ತಿಮಿಗಲ್ಕೆಮಾಡಿ ಮನದೊಳ್ ಕೂರ್ತಾಡಿಪಾಡುತ್ತೆ ಲೋ| ಚನಮಂಮುಚ್ಚಿ ಸಮಾಧಿವೆತ್ತೆಸೆದನಾ ವಾಹಿಲ್ಯಮಾಹೇಶ್ವರಂ||

ಕಂ|| ಜನನುತವಾಹಿಲ್ಯಂ ಮೇ| ದಿನಿಯುರಿಯುದತೆರದಿಹೃದಯದೊಳ್ ಶಿವಲಿಂಗಾ| ರ್ಚನೆಯಂ ಮಾಳ್ಪದರಿಂದಂ| ದನುನಯದಿಂ ಪ್ರಾಣಲಿಂಗಿಯೆನಿಸುತ್ತಿರ್ದಂ||

ವ|| ಅಂತೀಪರಿಯೊಳ್ಪ್ರಾಣಲಿಂಗಕ್ಕೆ ಮನೋಭಾವಶಿವಪೂಜೆಯಂ ಮಾಡಿ ಪರಮಾನಂದದಿಂ ಕಾವೇರೀತೀರಸಿಂತಳದರ್ನಿಜಮಂದಿರಕ್ಕೆ ಪೋಪಗಪ್ತಮಾಹೇಶ್ವರನಪ್ಪ ವಾಹಿಲ್ಯರಭಾವಕುಸುಮದರ್ಚನೆಯಂ ಭಕ್ತಿಯಿಂಪ್ರಕಟಿಸಲ್ವೇಳ್ಕುಮಂದಾಪುರದೊಳ್ ಸದ್ಯೋಗ್ಯೇಷ್ಟಿಯಿಂಪೂಜಿತ್ತೆಂಕುಲ್ಲಿದ ಗೋಂದಣದ ಶಿವಭಕ್ತರೊಳುದ್ಭವಿಸನಪ್ಪವರ್ ಜಂಗಮದಮನವಂಸದಾಶಿವಂಪ್ರೇರಿಸಲ್ಕಾಗಳ್||

ಕಂ ಹರಪೂಜೆಗೆಯ್ದು ವಾಹಿಲ್ಯರನೊಲವಿಂ ಪುರದವೀಧಿಯೊಳ್ಬರುತಿದಿರ್ಕೊಳ್| ಶರಣಜನಂಗಳ್ಕಳ್ಕ| ದಿರೆಕಂಡತಿಭಕ್ತಿಯಿಂದಮಾನತರಾದರ್||

ವ|| ಅಂತಾನತರಾಗಿ ಪಳ್ಳಿರ್ದ ವಾಹಿಲ್ಯಗೆ ತಚ್ಛರಣಜನಂಗಳೊಳಗೊಬ್ಬರ್ದ್ದಂಡನಪ್ಪಜಂಗಮನಿಂತೆಂದಂ||

ಕಂ|| ಘನಶುದ್ರಾಕ್ಷೆ ವಿಭೂತಿ [illegible] ಲಿಂಗಾ| ರ್ಚನೆಮನದಾರ್ಕಂಡವರಿ [illegible] ಶಿವಂಭಕ್ತಂ||

ವರಹೃದಯದುಪ್ಪಿತ ಲಿಂಗ| ಕ್ಕುಸುಭಾವ [illegible] ಲ್ಕಂ ನಾ| ವರದಿಂದರ್ಚಿಸಿದಿಂದಾಂ ಹರಿಹಂದನ [illegible]

ಬಂಧಂ॥ ೧೨

ಎನೆನಗುತಿದು ಚಿತ್ರಂಮೇ। ವಿನಿಯೊಳ್ಸುರಭೂಜ ಕುಸುಮವಿರ ದಾಂನಿಚ್ಚ। ರ್ಚನೆಗೆಯ್ವೆನೆಂಬಜಂಗಮ। ಕನುನಯದಿಂ ನುಡಿದನಾ ಗಳಾವಾಹಿಲ್ಯಂ॥

ವ। ಎಂದುನುಡಿದ ತಚ್ಛರಣಜನಕ್ಕೆ ಶರಣಾರ್ಥಿಯೆನುತ್ತಂ ಸುರಗಿ ಯಂತೆಗೆದಾಗಳ್॥

ಕಂ। ಸುರಗಿಯೊಳೆರ್ದೆಯಂ ಸೀಳ್ದಾ। ಸುರದಿಂಬಗೆಯಲ್ಕೆ ಕಲ್ಪತರು ಕುಸುಮದಬಂ। ಧುರಪೂಜೆವೆರಸುಲಿಂಗಂ। ಪಿರಿದೆಸೆದಿರೆ ಕಂಡು ಶರಣರ ಚ್ಚರಿವಟ್ಟರ್॥

ವ। ಅಂತಾವಾಹಿಲ್ಯರ ಮನೋಭಾವದ ಕುಸುಮಪೂಜೆಯ ನಿಶ್ಚಯ ಮಂಕಂಡಚ್ಚರಿವಟ್ಟ ಜಂಗಮಮುಖ್ಯ ಶರಣರ್ಜಯಜಯ ಯೆನುತಿ ರ್ಪಾಗಳ್॥

ಕಂ। ಪದಪಿಂದಂ ಭಾವಲತಾಂ। ತದಪೂಜೆಯ ದಿಟವನಧಿಕಶಶ ಕಾಗರ್ಗಾಂತೋ। ರಿದುಬಕ್ಕೆವೆಚ್ಚಿ ಭಕ್ತನ। ಹೃದಯದಿಪೊರ ಮಟ್ಟಶಂ ಭುಮೂರ್ತಿಯೊಳೆಸೆದಂ॥ ೧೪

ಅನಿಮಿಷಧುನಿಯಿಂ ಶಶಿಯಿಂ। ದನಲಸಿನಹಿಯಿಂ ವಿಭೂತಿಯಿಂ ಶಾರ್ದೂಲಾ। ಜಿನವಿದಶಭುಜದಿ ಪಂಚಾ ನನದಿಂದೊಪ್ಪಿರ್ದನಾಗ ಳಾಗಿರಿಜೇಶಂ॥ ೧೬

ವ। ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರವಶನಂಗಮನೆ ಯ್ದಿ ಭಯಭಕ್ತಿಯಿಂ ಚರಣಾರವಿಂದದೊಳ್ಪೊರಳ್ದ ವಾಹಿಲ್ಯರಂಕಾ ಕಾರುಣ್ಯದಿಂಪಿಡಿದೆತ್ತಿ ಕುಳ್ಳಿರಿಸಿಮೆಯ್ದಡವಿ ಮಂದಾಕಿನೀಧರಂನಂದಿ ನಾಥಂಗಿಂತೆಂದಂ॥

ಕಂ। ಒದವಿದ ಭಕ್ತಿವಿಗಲ್ನಿಜ। ಹೃದಯಾಬ್ಧಿಯೊಳೆನಗೆಭಾವಪೂ ಜೆಯನಿವನಂ। ದದೋಳಾವಂ ಮುನ್ನಂಪೂ। ಡಿದನೆಂದೆನುತಿರ್ದನೀ ತುಗಿರಿಜಾರಮಣಂ॥

ವ। ಎಂದುಕೊಂಡಾಡುತ್ತಮಾವಾಹಿಲ್ಯವ ಹೇಶ್ವರನಂ ತಾಂ ಪರಿಸಿ ದದಿವ್ಯವಿಮಾನದೊಳ್ಕುಳ್ಳಿರಿಸಿಕೊಂಡಾ ನಿಸಿ ಪೋನಶ್ವಾತ್ಮ ಜಾರಮಣಂನಿ ಜಾವಾಸಕ್ಕೆಯ್ದಲ್ಕಾಗಳ್॥

ಕಂ॥ ಕಲ್ಯಾಣಾನ ಕರವದೊಳ್॥ ಮೌಲ್ಯಮಣಿ ಪ್ರಭೆಯೊಳೆಸೆವ ಪುಷ್ಪಕಮೊವಾ ಹಿಲ್ಯಂ ಬೆರಸೇಳ್ತಂದುದು। ಕಲ್ಯಾಭರಣನ ನಗೇಂದ್ರಕುತ್ಸವದಿಂದಂ॥

೧೪

ವ॥ ಅಂತುತಪ್ಸಹದಿಂ ಬಂದವಾಹಿಲ್ಯಂ ಬೇಸುಮಹಾಗಣಾನ್ವಿತಗಿರಿಜೇಶನೊಡ್ಡೋಲಗಂಗೊಟ್ಟುಕುಳ್ಳಿರ್ದಗಳ್॥

ಕಂ॥ ದೇವೇಂದ್ರಂ ಪೊಗಳುತ್ತಿರ। ಲಾವಾಹಿಲ್ಯಂಗೆ ಮೆಚ್ಚಿ ಗಣಪದವಿತ್ತಂ। ತೀವಿದ ಕರುಣಾಂಬುಧಿಗಿರಿ। ಜಾವಲ್ಲಭನೊಪ್ಪುತಿರ್ದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಸಲಿಗೆರೆಯ ಪುರಾಧಿಪ ಶ್ರೀಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ವಾಹಿಲ್ಯ ಮಾಹೇಶ್ವರಕಥಾವೃತ್ತಾಂತಂಚತ್ವಾರಿಂಶದಾಶ್ವಾಸಂ

—ಶ್ರೀ—

## ನಲವತ್ತೊಂದನೆಯಆಶ್ವಾಸಂ

### ಚೆರುತ್ತೊಣೆಯಾಂಡರ ಕಥಾವೃತ್ತಾಂತಂ

ಕಂ॥ ವರಚೆರುತ್ತೊಣೆಯಾಂಡಂಗಾ। ದರದಿಂ ಮುನಿನಿಕರಮುಘೋಷಿನಿಕ್ಕಿತಿಮುದದಿಂ। ಪರಮಗಣಪನಮ ನಿತ್ತಾ ನಿರುಪಮ ಸೋಮೇಶನೊಲ್ದುಪಾಲಿಕೆನಮ್ಮಂ॥

ಪರಮೈಶ್ವರ್ಯದೊಳೊಪ್ಪುವ। ವರಚೋಳೋರ್ವರೆ ಯೊಳ್ ಸ್ವರಾಲಯಡಿಂಭ। ಕ್ರರ ಗೃಹಪಙ್ತಿಗಳಿಂದಂ। ತಿರಿಪಾವರಿಯೆಂಬ ಪಟ್ಟಣಂಕರಮೆಸೆಗುಂ॥

೨

ತ್ರಿರಿಪಾದ್ರಿ ಪುರದೊಳ್ ಶಂ॥ ಕರಪದಪಂಕರುಹ ಭೃಂಗನೆನಿಸುತ್ತಂತಾಂನಿರುಪಮ ಚೆರುತೊಣೆಯಾಂಡಂ। ಪಿರಿದಷ್ಟೈಶ್ವರ್ಯದಿಂದಮೊಲವಿಂದಿರ್ದಂ॥

ವ॥ ಅಂತುಷ್ಟವೈಶ್ವರ್ಯ ಸಂಪನ್ನನಾಗಿರ್ಪುತ್ತಂ ಚೆರುತ್ತೊಣೆಯಾಂ

ಡಂಶಿವಲಿಂಗಾರ್ಚನೆಯರ್ಥಿಯಿಂ ಶಿವಾಗಮದೊಳ್ಪುಷ್ಪಾಧ್ಯಾಯಮಂ ಕೇಳ್ದು ಮನದೊಳಿಂತೆಂದಳ್ ||

ಕಂ|| ಎರೆಯಲ್ಕ ಫಲಂದೂರ| ಲ್ತರಲಧಮಂವನದೊಳರಸಿತರೆಮಧ್ಯ ಮವಾ| ದರದಿಂತಾಂ ಬೆಳಸಿದರ ಲ್ಪರಿದು ತ್ತಮಮೆಂದು ತಿಳಿದುತಂದಾ ಭಕ್ತೆ|| ೪

ವ|| ಅಂತಾಚೆರುತೊಣೆಯೊಂಡನಾಗವೇಕ್ತ್ರಿಯಿಂ ವಿಭೂತಿರುದ್ರಾಕ್ಷಿಗಳಂ ತಾಳ್ದು ನಿಜಪತ್ನಿವೆರಸು ತಿರಿಪಾದರಿಪುರಾಧೀಶ್ವರನಪ್ಪ ಶಿವನಿರೆಯಕ್ಕೆಲ್ತಂದು ಪರಮಭಕ್ತಿಯಿಂ ತಾಂತಂದುಶ್ವೇತಾರ್ಕಪುಂಡರೀಕ ಮಾಲತಿಯಶೋಕೆ ಪಟ್ಟೆಗೆರಕ್ತಾಗಸ್ತ್ಯ ನಂದ್ಯಾವರ್ತಪುನ್ನಾಗವಕುಳಪಾಟಲಿ ಪಲಾಶಕದಳೀಕುಸುಮಂಗಳೆಂಬುದನುದಯ ಕಾಲದೊಳ್ಸಮರ್ಪಿಸುತ್ತಂ ಮತ್ತಂಬೃಹತೀದ್ರೋಣ ದತ್ತೂರ ಕರವೀರಪಾಟಳಿ ಕೈರವಕೋಕನದ ಪಂಚಕಪ್ರಸೂನಂಗಳಿವಂ ಮಧ್ಯಂದಿನದೊಳ್ಸದಾಶಿವಂಗರ್ಚನೆಯಂ ಮಾಡುತ್ತಂ ಬಿಲ್ವಪತ್ರೆಭದ್ರೆಶಮಿಯತಸಿಬಹುಕರ್ಣಿಕೆಪಿಚಕಿಳಕೇತಕಿ ನೀಳೋತ್ಪಳ ಪೃಥುವಿ ಪದ್ಮ ಶಂಖಪುಷ್ಪವೆಂಬಿವಂರಾತ್ರಿಯೊಳ್ಗಿರಿಜೇಶಂಗೆ ಪೂಜೆಯಂಮಾಡುತ್ತ ಮೀಪರಿಯೊಳ್ದಿನದಿನದೊಳೀನಿಯಮವಂ ಸಲಿಸುತ್ತಂಪಲವುವತ್ಸರಂ ಪೋಗಲ್ಕಿರುತಿರ್ದನಂತುಮಲ್ಲದೆಯುಂ||

ಕಂ|| ದಿನದಿನದೊಳ್| ಶಿವಲಿಂಗಾ| ರ್ಚನೆಗಳನೀತೆರದಿಮಾಡಿಚೆರುತೊಣೆಯೊಂಡಂ| ಘನಜಂಗಮಗುರುವಿಂಗತಿ| ವಿನಯದಿ ಬೆಸಕೆಯ್ಯುತಿರ್ದನುತ್ಸವದಿಂದಂ|| ೭

ವ|| ಅಂತೀಪರಿಯೊಳಿರುತ್ತ ಮೊಂದುದಿವಸಂನಿಚ್ಚ ಕಿನಂದದಿಂದುಷಃಕಾಲದೊಳೆರ್ದು ಕರಡಿಗೆಯಂಕೊಂಡು ತಾಂಬೆಳಸಿರ್ದ ಪೂದೋಂಟಮಂಪೊಕ್ಕಾಗಳ್||

ಕಂ|| ಬಂದುಗೆದಾಸಾಳಂ ನವ| ಕುಂದಂಗೋರಟಕರಂಜೆಯೊಂಬಲ್ಮಾಳ್ಕೆ| ತ್ತಂಪಾಡಿಮ ದಲರೆಂಬಿವು ನಂದಾಳಿದೊಳ್ಪೂವನಾಯ್ದುಕೊಯ್ಯುತ್ತಿರ್ದಂ|| ೬

ನೆಲಲೊಳಗೇ ಕಾಕಿತ್ವಟ| ನೊಳಗುಡಿಗಿರದುರ್ಬಿ ಕೊರ್ಬಿದರಲಿರಿಡಸುಕೋಮಳ ಪುಷ್ಪಂಗಳನಾ| ಚೆರುತೊಣೆಯೊಂಡಂಭಕ್ತಿಯಿಂದೆ

ಕ್ಕೊಪ್ಪು ನದಾಗಳ್||

ವ|| ಅಂತಾಚಿರುತೊಣೆಯೊಂಡಂ ಪರಿಪರಿಯ ಪರಿಮಳಕುಸುಮಂಗ ಳಂಕೊಯ್ದು ಕರಂಡಗೆಯಂತುಂಬಿಕೊಂಡು ನಿಜಮಂದಿರಕ್ಕೆ ಬಂದಾ ನಂದದಿಂ ಸ್ನಾನಮುಂಮಾಡಿ ಧೌತಾಂಬರಮನುಟ್ಟು ನಿಜಪತ್ನಿ ವೆರಸು ಶಿವನಿಳಯಕ್ಕೆಬಂದು ಲಿಂಗದಸವಿೂಪದೊಳ್ ಪದ್ಮಾಸನಮನಳಂಕರಿ ಸಿಯೊಗವೋಕ್ತಿಯಿಂವಿಭೂತಿರುದ್ರಾಕ್ಷಿಗಳಂತಾಳ್ದಾಗಳ್||

ಕ|| ಪಿರಿದೊಲವಿಂತಾಂತಂದಾ| ಪರಿಮಳಪುಷ್ಪಕ್ಕೆ ಪ್ರತಾನಮುಂಸೋ ದಿಸಿತ| ಚ್ಛರಣಂಪಡಲಿಗೆಯಂತುಂ| ಬಿರಿಸಿ ಶಿವಾರ್ಚನೆಗೆಮನಮುನಿ ತ್ತಿರ್ಪಾಗಳ್||

ಚಂ|| ವಿಳಸಿತಲಿಂಗದರ್ಚನೆಗೆ ಸೋದಿಸಿಬಾಸಣಿಸಿರ್ದ ಚೆಂಗಣಿ| ಗಿ ಲೆಯಿರವಂತಿ ಮಲ್ಲಿಗೆಸುಪಾಟಲಿ ಸಂಪಗೆಯೆಂಬಪುಷ್ಪಮುಂ| ನಲವಿನೊ ಳೆತ್ತಿವಾಸಿಸುತಿರಲ್ ಮುಗುಳ್ದೀಕ್ಷಿಸಿನಾಡೆಕೊಯ್ದು ತ| ಲ್ಲಲನೆಯ ಮೂ ಗನಾಸುರದಿಕೊಯ್ದನ ನನ್ಯಜವೈರಿಕಿಂಕರಂ||

ಕ|| ಅನುಪಮತೈಚಿರುತೊಣೆಯೊಂಡಂ| ಘನಭಕ್ತ್ಯುದ್ರೇಕದಿಂದ ಮಿನಿಯಳಮೂಗಂ| ಮುನಿದರಿದು ಬಿಸುಟನೆಂಷಾ| ಮನಸಿಜರಿಪುಮೆ ಚ್ಚಿರೂಪುದೋರಿದನಾಗಳ್|| ೧೦

ಬಾಂದೊರೆಯಿಂ ಪೆರೆಯಿಂಫಣಿ ಯೆದಂಕರೆಯಿಂವಿಭೂತಿಯಿಂ ದಂಫಣೆಗ| ಣ್ಣಿಂದಂಪಂಚಾನನದಿಂ| ದಂದಶಭುಜದಿಂ ಶಿವಂವಿರಾಜಿ ಸುತಿರ್ದಂ||

ವ|| ಅಂತುವಿರಾಜಿಸುವ ದಿವ್ಯಮೂರ್ತಿಯಂಕಂಡು ಹರುಷಪುಳಕಿತ ನಾಗಿನಿರ್ಭರಭಕ್ತಿಯಿಂ ಪಾದಾರವಿಂದದೊಳ್ಸಿಗೆಡೆದು ಪರವಶತೆಯಿಂ ದಿ ರುತಿರ್ಪ ಚಿರುತೊಣೆಯಂಡರಂ ಸತ್ಕರುಣದಿಂಪಿಡಿದೆತ್ತಿ ಕುಳ್ಳಿರಿಸಿ ನಂದಿನಾಥಂಗಿಂತೆಂದಂ||

ಕ|| ಭರದಿನೆನಗೆಂದು ತಂದಾ| ಪರಿಮಳಕುಸುಮವನೆವಾಸಿಸಲ್ಕೆ ಳಸಿಂತ| ನ್ನರಸಿಯುನಾಸಿಕಮಂ ಪಿಡಿ| ದರಿದಿವಗಾರ್ಸ ದೃಶರೆಂದನಾಗಿ ರಿಜೇಶಂ|| ೧೧

ವ|| ಎಂದೀಪರಿಯೊಳ್ಪೊಗಳ್ದು ಕೊಂಡಾಡುತ್ತಂ ಪರಮಪ್ರೀತಿಯಿಂ ತಾಂಬರಿಸಿದ ದಿವ್ಯಪುಷ್ಪಕಪ್ರೊಳ್ ಚಿರುತೊಣೆಯೊಂಡರಂ ಕುಳ್ಳಿರಿಸಿ

ನಿರೂಪಿಸಿದಾಗಳ್‌॥

ಕಂ॥ ಪರಿಮಳಕೆ ಪರಮೆಗಳೆ ಝುಂ। ಕರಿಸುತ್ತಂ ಚಾರಿವರಿವಪ್ರೊ ಮೆಳೆಯೊಳ್ತ ಚ್ಛರಣಂಬೆರಸುವಿಮಾನಂ। ಸುರುಚಿರರಜತಾಚಳಕ್ಕೆಬಂ ದುತ್ತಾಗಳ್‌॥ ೧೨

ವ। ಅಂತುಬಂದುಚೆರುತೊಣೆಯೊಂಡರ್ವೆರಸು ಗಿರಿಜಾರಮಣನೊ ಡ್ಡೋಲಗಂಗೊಟ್ಟುಕುಳ್ಳಿರ್ದಾಗಳ್‌॥

ಕಂ। ಒಳಯುತ ಚೆರುತೊಣೆಯೊಂಡಂ। ಗೊಲವಿಂ ಗಣಪದಮನಿ ತ್ತುಮೆರೆದ ಮಹಾನಿಶ್ಚಳನಗತನೆಯಾನಯನೋ। ತ್ಪಳಸಸಿಯೆನಿಪಭ ವನೆಸೆದನಾಸ್ಥಾಯಿಕೆಯೊಳ್‌॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀಮತ್ಪುಲಿಗರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ ಷಷ್ಠಿಪುರಾತನರಚಾರಿತ್ರದೊಳ್ಚೆರುತೊಣೆಯೊಂಡ ಮಾಹೇಶ್ವ ಕಥಾ ವೃತ್ತಾಂತಮೇಕಚತ್ವಾರಿಂಶದಾಶ್ವಾಸಂ॥

— ಶ್ರೀ —

## ನಾಲ್ವತ್ತೆರಡನೆಯಆಶ್ವಾಸಂ

### ಕುಲಚಂಗಮಾಹೇಶ್ವರ ಕಥಾವೃತ್ತಾಂತಂ

ಕುಲಚಂಗರ್ಗನಿಮಿಷಸಂ। ಕುಳಮುಖಿಮುಖಿಯೆಂದೆನಲ್ಕೆ ಗಣ ಪದಮಂಕೊ। ಟ್ಟಲಘುಕೃಪಾವಾರಿಧಿಮಂ। ಗಳಮಯಸೋಮೇಶನೊ ಲ್ದುಪಾಲಿಕೆನಮ್ಮಂ॥ ೧

ಪಿರಿಯಸಕದಿ ನೊಪ್ಪುವಚೋಳರಾಷ್ಟ್ರದೊಳ್‌ ಲಿಂಗಭಕ್ತರಾ ಲಯತತಿಯಿಂ। ಹರಮಂದಿರಸಂದೋಹದಿ। ತಿರುವೆಯ್ಯಾರನಿಪ್ಪಸತ್ಪು ರಂಕರಂಮೆಸೆಗುಂ॥

ತಿರುವೆಯ್ಯಾರೆಂಬ ಪುರದೊಳ್‌। ಪರಮಶಿವಾಗಮಕಳಾ ವಿಶಾರದ ತೆನದಿಂ। ಹರಪದಭಕ್ತಿಯ ನಾಂತಾ। ದರದಿಂ ಕುಲಚಂಗನೆಂಬಶಾ ಜಂಮೆರೆದಂ॥ ೨

ವ॥ ಅಂತಾ ಕುಳಚಂಗನೆಂಬ ರಾಜವರ್ಯಂ ಶಿವಲಿಂಗಾರ್ಚನೆಯುಂ ಪುಷ್ಪಾರ್ಥಿಯಿಂ ತನ್ನ ಕೇಳೀ ವನದೊಳ್ತಾಂ ಬೆಳೆಯಿಸಿದ ಪೂದೋಂಟಕ್ಕೆ ಪೋಗಿ ಭಕ್ತಿ ಮಿಗಲಾಗಳ್॥

ಕಂ॥ ಅಳಿಮುಟ್ಟದ ಕಂಪಡಗದ। ಸುಲಲಿತೆಗಂಧಪ್ರಸೂನ ಕಾಲ ಮಂ ನಲವಿಂ। ಕುಳಚಂಗಂ ಕೊಯ್ದಾಗಳ್। ಘುಳಿಲನೆ ನಿಜರಾಜಮಂ ದಿರಕ್ಕೆಳ್ತಂದಂ॥ ೪

ವ॥ ಅಂತೆಳ್ತಂದು ನಿಜರಾಜಮಂದಿರದೊಳ್ ಪರಿಮಳೋದಕದಿಂ ಪೂಜೆಯುಂಮಾಡಿ ಪೊಡವಟ್ಟು ನಲಿದಾಡಿ ಪಾಡುತ್ತೀಪರಿಯೊಳ್ ಕುಳಚಂಗಮಾಹೇಶ್ವರಂ ನಿಜಲಿಂಗಜಂಗಮಪರಿಚರ್ಯದ ನಿಯಮಮುಂದಿನ ದಿನದೊಳ್ ಸಲಿಸುತ್ತಂ ಪರಮಭಕ್ತಿಯಿಂದಿರುತಿರ್ದನಂತು ಮಲ್ಲದೆಯುಂ॥

ಕಂ॥ ಘನತರಭಕ್ತಿ ಮಿಗಲ್ಕಂ। ದನುನಯದಿಂ ಲಿಂಗವಂತೆಜಂಗಮನಿಕರ। ಕ್ಕನುದಿನವೀದುವನೀವು। ತ್ತನುಪಮಕುಳಚಂಗಭೂಪ ನಿರ್ದಂ ಜನದೊಳ್॥

ವ॥ ಅಂತೀಪರಿಯೊಳ್ಕುಳಚಂಗಮಾಹೇಶ್ವರಂ ಲಿಂಗಜಂಗಮಪರಿಚರಿಯದಿಂದಿರುತ್ತಂ ಮತ್ತಮೊಂದುದಿವಸಂ ಪ್ರಭಾತಸಮಯದೊಳೆಸರ್ದ ತನ್ನ ಪೂದೋಂಟಕ್ಕೆ ಪೊಕ್ಕಾಗಳ್॥

ಚಂ॥ ಚೆರುನನೆ ಚಲ್ಲರಲ್ದ ಕಳಿವೂಪಲೆವೂ ಕೊಳೆವಿರ್ದ ಪೂಕಡಂ। ದುರುಕೆಡಿದಿರ್ದ ಪೂಬಿಡಲೆಕೀಡೆಕದರ್ದಂಕಿದ ಪೂಸೆಲಂದಿನೆ। ಯುದ್ದಿರೆಮುರುಟರ್ದ ಪೂಪರಳೆಪತ್ತಿದ ಪೂವೆನಿಪಂತಿವೆಲ್ಲಮಂ। ತೊರೆಪೊಸೆದುದ್ಘಪುಷ್ಪಕುಳಮಂ ನೆರೆಕೊಯ್ದನುಮೇಶಕಿಂಕರಂ॥ ೬

ವ॥ ಅಂತೀತೆರದೊಳ್ಪರಿಪರಿಯ ಕುಸುಮಂಗಳಂ ಕೊಯ್ದು ಕೊಂಡು ಕುಳಚಂಗಮಾಹೇಶ್ವರಂ ನಿಜಮಂದಿರಕ್ಕೆ ಬಂದಾನಂದದಿಂ ಸ್ನಾನಮಂ ಮಾಡಿ ಧೌತಾಂಬರಮನುಟ್ಟು ನಿಜಸತಿಪರಕು ಶಿವನಿಳಯಕ್ಕೆಳ್ತಂದು ಲಿಂಗದಸಮೀಪದೊಳ್ಪದ್ಮಾಸನದೊಳ್ಕುಳ್ಳಿರ್ದಾಗಳ್ಮೋಕ್ತಿಯಿಂ ವಿಭೂತಿರುದ್ರಾಕ್ಷೆಗಳಂ ತಾಳ್ದಾಗಳ್॥

ಕಂ॥ ಕರವೀರಂ ಬಕುಳಂಪಾ। ದರಿಮಲ್ಲಿಗೆಯೆಂಬ ಪೂಗಳಂಸೋದಿಸಿ ಕಂ॥ ಕರಪೂಜೆಗೆ ಕುಳಚಂಗಂ। ಪಿರಿದೊಲವಿಂದೆದೆಂಡೆಗಟ್ಟ ದನಾ

ಗಳ್॥

ವ॥ ಅಂತಾ ಪರಿಮಳದ ಪುಷ್ಪಮಾಲೆಗಳಂ ಪಡಲಿಗೆಗಳಂ ತುಂಬಿಬಾಸಣಿಸಿ ಕುಳಚಂಗಮಾ ಹೇಶ್ವರಂ ಪರಮಭಕ್ತಿ ನಿಗಲ್ಕಾಗಳ್

ಕಂ॥ ಪರನಂಪೂಜಿಸಲೆಂದಾ। ಪರಮಾಹೇಶ್ವರನೆನಿಪ್ಪ ಕುಳಚಂಗಂಸಾ। ದರದಿಂಪಡಲಿಗೆಯುರಳಂ ತಿರಿಗಿಕಟಾಕ್ಷದಿ ನಿರೀಕ್ಷಿಸುತ್ತಿರಲಾಗಳ್। ೮।

ಹರವರಪೂಜೆಗೆ ಕಟ್ಟಿದ। ಪರಿಮಳಿಪಲತಾಂತಮಾಲೆಯಂ ಕಂಡಾಗಳ್। ತರಳೆಮುಡಿಯುಲ್ಕಿತೆಗೆದಾ। ಕರಮಂ ಕಡಿದಿಳೆಗೆ ಕೆಡಪಿದಂ ಕುಳಚಂಗಂ॥ ೯।

ಪಿರಿದುಂಭಕ್ತ್ಯುದ್ರೇಕದಿ। ಪರಮಪ್ರಿಯುಳಪ್ಪ ಸತಿಯಕರಮಂ ಕಡಿದಾ। ಸುರದಕುಳಚಂಗ ಮಾಹೇ। ಶ್ವರಂಗೆಶಿವ ನೋತುರೂಪುದೋರಿದನಾಗಳ್॥ ೧೦।

ಉಪೇಂದ್ರವಜ್ರವೃತ್ತಂ॥ ಮರುನ್ನದೀಚುಂಬಿತ ಚಾರುಜೂಟಂ।ಸರೋರುಹಾರಾತಿ ಸಮೀರಮಿತ್ರಂ। ಕರೀಂದ್ರಚರ್ಮಾಂಭಸಿತಂಫಣೀಂದ್ರಂ। ವಿರಾಜಿಸುತ್ತೊಪ್ಪಿದನದ್ರಿಜೇಶಂ॥ ೧೧।

ವ॥ ಅಂತೆಸೆವದಿವ್ಯಮೂರ್ತಿಯಂ ಕಂಡುಪರಮಾನಂದರಸದೊಳೋಲಾಡಿ ಭಯಭಕ್ತಿಯಿಂ ರೋಮಾಂಚಕಂಚುಕಿತ ಗಾತ್ರನಾಗಿ ಚರಣಕಮಲದೊಳ್ಪೊರಳ್ದು ಪರವಶೀಭೂತನಾಗಿರ್ದ ಕುಳಚಂಗಮಾಹೇಶ್ವರನಂ ಸತ್ಕಾರುಣ್ಯದಿಂ ಗೌರೀರಮಣಂಪಿಡಿದೆತ್ತಿ ಕುಳ್ಳಿರಿಸಿಮೆಯ್ದಡವಿ ನಂದಿನಾಥಂಗಿಂತೆಂದಂ॥

ಕಂ॥ ನಲಿದೆನ್ನಯಪೂಜೆಗೆತಂ। ದಲರಂನಿಜರಮಣಿ ಮುಡಿಯಲೆಂದೆತ್ತಲ್ಕೋ। ಮಳಕರಮಂ ಕಡಿದನೆನ। ಲ್ಕಲಿಕುಳ ಚಂಗಂಗೆ ಸರಿಯದಾರೀಧರೆಯೊಳ್॥ ೧೨

ವ॥ ಎಂದೀಪರಿಯೊಳಿಂಮಧುರಂ ಕೊಂಡಾಡುತ್ತೊಲವಿಂ ತಾಂಬರಿಸಿದದಿವ್ಯ ವಿಮಾನದೊಳ್ಕುಳಚಂಗ ಮಾಹೇಶ್ವರನಂಕುಳ್ಳಿರಿಸಿ ನಿಯಾಮಿಸಿದಾಗಳ್॥

ಕಂ॥ ಬಿಡದೆಕರೆವರಳ ಮಳೆಯೊಳ್। ಮೃಡಭಕ್ತಂಚೆರಸು ದಿವ್ಯಪುಷ್ಪಕಮಾಗಳ್। ಪೊಡೆನಮರಪಟಹರವದೊಳ್। ಸಡಗರದಿಂ ರಜತಗಿರಿ

ಗೆ ಬಂದುತ್ತಾಗಳ್‌॥ ೧೩॥

ವ॥ ಅಂತುಬಂದ ಕುಳಚಂಗಮಾಹೇಶ್ವರಂಬೆರಸು ಗಿರಿಜಾರಮಣಂ ಪರಮೋತ್ಸಾಹದಿಂ ಪ್ರಮಥಗಣಂಗಳ್ಸಹಿತೊಡ್ಡೋಲಗಂಗೊಟ್ಟು ಕು ಳ್ಳಿರ್ದಾಗಳ್‌॥

ಕಂ॥ ಕುಲಿಶಧರಂಪೊಗಳುತ್ತಿರೆ। ಕಲಿಕ೦ಳಚಂಗರ್ಗೆ ಮೆಚ್ಚಿ ಗಣಪದ ಮಂಕೊಟ್ಟೊಲವಿಂ ಮೆರೆವಾಗಳ್ಗಿರಿ। ನಿಳಯನೆನಿಪ್ಪ ಭವನೆಸೆದನಾಸ್ಥಾ ಯಿಕೆಯೊಳ್‌॥ ೧೪॥

ದಗ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ ಚಿಪುಂಜರಂಜಿತಪಾದಪಂಕಜಶ್ರೀಮತ್ಪಲಿಗೆರೆಯ ಪುರಾಧಿಪಶ್ರೀಸೋ ಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ಕುಳಚಂಗ ಮಾಹೇಶ್ವರಕಥಾವೃ ತ್ತಾಂತಂದ್ವಿಚತ್ವಾರಿಂಶದಾಶ್ವಾಸಂ॥

...ಶ್ರೀ...

## ನಾಲ್ವತ್ತು ಮೂರನೆಯಆಶ್ವಾಸಂ

### ಕಲಿಕಂಭ ಮಾಹೇಶ್ವರವೃತ್ತಾಂತಂ

ಅಂಬುಜಸಂಭವನುತಕಲಿ। ಕಂಭರವೀರಕ್ಕೆ ಮೆಚ್ಚಿ ಗಣಪದಮಂ ಸಾ। ಡಂಬರದಿನಿತ್ತುಮೆರೆವಾ। ಶಾಂಭವಿ ವಲ್ಲಭನೊಲ್ದು ಪಾಲಿಕೆನಮ್ಮಂ॥೧

ಅತಿಲಸಿತ ಚೋಳಧರೆಯೊಳ್‌। ಸಿತಕಂಠಾಗಾರದಿಂ ಮಹಾಸದ್ಭ ಕ್ತ। ಪ್ರತತಿಗಳಚೆಲ್ವಿನಿಂದು, ನ್ನತತಿರುಮರೆಯೆಂಬ ಸತ್ಪುರಂಕರಮೆ ಸೆಗುಂ॥ ೨।

ತಿರುಮರೆಯೆಂಬಾಪುರದೊ। ಳ್ವೀರಜಂಗಮಲಿಂಗಭಕ್ತಿಯುಂ ನೆರೆತಾ ಳ್ದಾ। ದರದಿಂ ವನ್ನಿಯುವಂಶದ। ಕರಿಕಂಭನೆನಿಪ್ಪ ಭಕ್ತ ನೆಸೆವುತಿ ರ್ದಂ॥

ವ॥ ಮತ್ತಮಾಕಳಿಕಂಭಂಮಾಳ್ಪ ಜಂಗಮಭಕ್ತಿಯೆಂತೆಂದೊಡೆ॥

ಮ॥ ಅನುರಾಗಂಮಿಗೆ ಮಜ್ಜನಂ ವಸನಮುಂ ಭೂಷಾಳಿಮಾಲ್ಯಾ ನುಲೇ ಪನಮಾರೋಗಣೆಚಾರು ಕಾಮಿನಿಲಸತ್ಸಂಗೀತಸಾರಂ ಸುವಾ

ಘನಮೆಂದೆಂಬೆಸೆವಷ್ಟ ಭೋಗದೊದವಂ ಸಜ್ಜಂಗಮಂಗಳಿನೆ ಟ್ಟನೆಮಾ
ಡುತ್ತಿರ್ದು ತ್ರಿಪುರ್ದನಲ್ಲಿ ಕಲಿಕಂಭಾಖ್ಯಂ ಮಹಾಶ್ಚರ್ಯದಿಂ॥ ೪॥

ವ॥ ಅಂತು ಕಲಿಕಂಭಮಾಹೇಶ್ವರಂ ಕಾರಣಮೂರ್ತಿ ಲಿಂಗಶಿಕ್ಷಾ
ಮೂರ್ತಿ ಲಿಂಗಭವದೂರಮೂರ್ತಿ ಲಿಂಗಪಾದೋದಕ ಪ್ರಸಾದದಾ
ತೃಮೂರ್ತಿ ಲಿಂಗಶಿವತಾತ್ಪರ್ಯ ಭೋಗಮೂರ್ತಿ ಲಿಂಗಮೆಂದೆನಿಪ
ಜಂಗಮಂಗಳ್ಗೆ ಮಹಾಭಕ್ತಿಯಿಂ ಮನವಾರೆಘನಂ. ಸಮೆಯಲ್ಕೆಸರ್ವ
ಭೋಗಂಗಳಂ ಭೋಗಿಸಲ್ಕಿಂತು ದಾಸೋಹಂ ಭಾವಮನಳವಟ್ಟು ತ
ನ್ನಾವಿನ ಹಂಕಾರಮಳಿದು ಟ್ಟ ಮಹಾಪ್ರಸನ್ನತೆಯುಂ ಪಡೆದು ಜಂಗಮ
ಲಿಂಗಾರ್ಚನ ವ್ಯಾಪರಿಯೆಂದ ರಿಪುತ್ತಂ ಜಂಗಮಭಕ್ತನೆನಿಸಿ ಪಲವು ಪ
ಸ್ಸರಂ ಬೆಸಕೆಯ್ಯುತಿರ್ದ ನಂತುಮಲ್ಲದೆಯುಂ॥

ಕಂ॥ ಪುರಹರಭಕ್ತನಪ್ಪ ಕಲಿಕಂಭರಜಂಗಮಭಕ್ತಿಗಂಡು ನಾಪರ
ದಿ ನೆಗಳ್ದು ತದ್ಗೃಹದ ಭಟ್ಟನೆನಿಪ್ಪ ವನೊರ್ವನಂದುಬಂಧುರುತರ
ಜಂಗಮತ್ವಮದು ಲೇಸೆನುತಂ ಬೆಸಕೈಯಲಾರದಾ। ಸುರದೊಳವಿಟ್ಟು
ಪೋಗಿವರಜಂಗಮ ವೇಷವನಾಂತನರ್ಥಿಯಿಂ॥ ೫॥

ವ॥ ಅಂತುಮುನ್ನಂ ಭಟ್ಟನಾಗಿರ್ದು ಬಿಟ್ಟು ಪೋಗಿಪ್ಪತ್ತುವರುಷಕ್ಕೆ
ಮರಪಿಕ್ಕಿ ರುದ್ರವೇಷಧಾರಿಯಾಗಿ ಮತ್ತನೇಕಲಿಂಗಮೂರ್ತಿಗಳಪ್ಪ
ಜಂಗಮಲಿಂಗಂಗಳಂ ಕೂಡಿಕೊಂಡು ಸಾಡಂಬರದಿಂದಾ ಕಲಿಕಂಭಮಾ
ಹೇಶ್ವರನರಮನೆಯುಂ ಪೊಗಲ್ಕಾಗಳ್॥

ಕಂ। ಗುಡಿತೋರಣದಿಂದಿದಿಗೊರ್ಂ! ಡೊಡಲಂ ಶಿವಶರಣರಡಿಗ
ಳೊಳ್ನಲವಿಂ ಸೈ। ಗೆಡಪಿಶರಣಾರ್ಥಿಯೆನುತಂ। ಕಡುನೇಹದಿ ಪೆರ್ಚ
ಕುಳ್ಳಿರಿಸಿದಂ ಭಕ್ತಂ॥

ವ। ಅಂತು ಕುಳ್ಳಿರ್ದ ಶರಣಜನದೊಳ್ ಮಣಿಹಾರಮಧ್ಯದೊಳ್ತರಳ
ಮೊಪ್ಪುವಂತೆ ಪೊಸತಾಗಿ ವೇಷಮಂ ತಾಳ್ದು ಬಂದಜಂಗಮಂಗಳ್ಗೆ ಮಂಗ
ಳವೆನಿಸುತ್ತಿರ್ದನಾಗಳ್॥

ಕಂ। ಮಿಸುಪವರಜಡೆಯ ನುಡಿದ್ಧಿ। ಳಸಿದವಿಭೂತಿಯ ನನೇಕ
ರುದ್ರಾಕ್ಷೆಗಳಂ। ಪೊಸಕಾಶಾಂಬರಧಿಂ ರಾಜಿಸುವಾ ಜಂಗಮಃದಮೂ
ರ್ತಿಪಿರಿದೆಸೆದಿರ್ಕುಂ॥ ೮



ವ॥ ಅಂತೆಸೆವಪೊಸಜಂಗಮದ ಪಾದಮಂ ತೊಳೆದರ್ಚಿಸಿ ಕಲಿಕಂಭ

ಮಾಹೇಶ್ವರಂ ತನ್ನರಸಿಯುಂ ಪ್ರಿಯದಿಂ ಕರೆದಿಂತೆಂದಂ॥
ಚಂ॥ ಹರವರಮೂರ್ತಿಯಪ್ಪಿರಿಯರಂ ಪ್ರಿಯನೊಲ್ದಿರಗೆಂದೆನೆಕ್ಕಿನಿ।
ರ್ಭರದೊಳೆನೋಡಿ ಕಂಡರಿದು ಮುನ್ನ ಕಟೆನ್ನಯ ಗೇಹದಲ್ಲಿ ಕಿಂ। ಕ
ರನೆನಿಸಿರ್ಪವಂಗೆ ತಲೆ ವಾಗುವಳಲ್ಲದಿಟಕ್ಕೆ ತಾಂ ನಗು। ತ್ತಿರದೆ ಮಗು
ಳ್ದು ತತ್ಸತಿಗೆ ಕೋಪಿಸಿದಂ ಕಲಿಕಂಭನಳ್ತಿಯಿಂ॥
ವ॥ ಅಂತು ಕೋಪಾರೂಢನಾಗಿ ಕಲಿಕಂಭವೀರ ಮಾಹೇಶ್ವರನಿಂ
ತೆಂದಂ॥
ಮ॥ ಪರುಸಂಮುಟ್ಟೆ ಸುವರ್ಣವಾದ ಬಳಕಂ ಕಾಬೊರ್ನ್ನದೆಂದೆಂ
ಬರೇ ಹರನಂತಾಳ್ದರಭಕ್ತರೊಳ್। ಕುಲಮುಮಂ ಶ್ರೀಯುಂ ವಿಚಾರಿಪ್ಪ
ಡೇ। ಪರಶೈವಾಗಮ ಕೋವಿದರ್ನಿರುತಮೆಂದಂದಾಗಳಾ ಬೋಪದಿಂ
ಕಲಿಕಂಭಂ ಸರಿಜಂಗಮಕ್ಕೆರಗಳೆಂದುದ್ರೇಕವಂತಾಳ್ದಿದಂ॥
ವ॥ ಅಂತುದ್ರೇಕದಿಂ ಕಡುಮುಳಿದು ಕಿಡಿಕಿಡಿಯಾಗಿ ಘುಡಿಘುಡಿ
ಸುತ್ತಾಗಳ್॥
ಕಂ॥ ವೃಷಭಮೂರ್ತಿಯಪ್ಪ ಜಂಗಮ; ದಡಿಗೆರಗದೆ ನಿಂದೆಗೆಯ್ದಳಂ
ದತಿ ಛಲದಿಂ। ಮಡದಿಯತಲೆಯುಂ ಖಡ್ಗದಿ। ಕಡಿದುರ್ಬಿದಿರೆಡೆ ನಾ
ಗಳಾ ಕಲಿಕಂಭಂ॥ ೧೦
ವ॥ ಅಂತು ನಿಜಪ್ರಾಣಲಿಂಗಮಪ್ಪ ಜಂಗಮದ ನಿಂದೆಗೆಯ್ದಳೆಂದು ತ
ನ್ನರಸಿಯ ಸಿರಮಂ ಕಡಿದ ಗಣಾಚಾರ್ಯ ಶೀಲನೆಂಬ ನಿಜ ಕಲಿಕಂಭಮಾ
ಹೇಶ್ವರನ ಭಕ್ತಿಯ ನಿಷ್ಠೆಗೆ ಮೆಚ್ಚಿ ಗಿರಿಜಾರಮಣಂ ನಿಜಮೂರ್ತಿಯಂ
ತೋರಿದಾಗಳ್॥
ಮಂದಾರವೃತ್ತಂ॥ ಚಾರುಜಟಾಜೂಟಂ ನದಿರಾಡ್ರಂ ಮಾಳುತಸು
ತಂ ಪನ್ನಗರಾಜಂ। ಸ್ಮೇರದಪಂಚಾಸ್ಯಂ ದಶದೋರ್ವಿನ್ಯಸ್ತಾರದಿನೊ
ಪ್ಪೆಲ್ಕೊಪ್ಪಿದನೀಶಂ॥
ವ॥ ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರಮಾನಂದರಸಾಬ್ಧಿ
ಯೊಳೋಲಾಡಿ ಪದಕಮಳಯುಗಳದೊಳಗೊಡಲ ನೀಡಾಡಿ ಪರವಶ
ನಾಗಿರ್ಪ ಕಲಿಕಂಭಮಾಹೇಶ್ವರನಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿ
ಸಿ ಮೆಯ್ದಡವಿ ಬೋಳೈಸುತ್ತಂ ನಂದಿಕೇಶ್ವರನೊಳ್। ಲೋಕೇಶ್ವರನಂ
ತೆಂದಂ॥

ಘನವೆಂದೆಂಬಿಸೆವಷ್ಟ ಭೋಗದೊದವಂ ಸಜ್ಜಂಗಮಂಗಳಿನೆ ಟ್ಟನೆಮಾ
ಡುತ್ತಿರ್ಪ ತ್ರಿರ್ಪನಲ್ಲಿ ಕಲಿಕಂಭಾಖ್ಯಂ ಮಹಾಶ್ಚರ್ಯದಿಂ॥ ೪॥

ವ॥ ಅಂತು ಕಲಿಕಂಭಮಹೇಶ್ವರಂ ಕಾರಣಮೂರ್ತಿ ಲಿಂಗಶಿಕ್ಷಾಮೂರ್ತಿ ಲಿಂಗಭವದೂರಮೂರ್ತಿ ಲಿಂಗಪಾದೋದಕ ಪ್ರಸಾದದಾತೃಮೂರ್ತಿ ಲಿಂಗಶಿವತಾತ್ಪರ್ಯ ಭೋಗಮೂರ್ತಿ ಲಿಂಗವೆಂದೆನಿಪ್ಪ ಜಂಗಮಂಗಳ್ಗೆ ಮಹಾಭಕ್ತಿಯಿಂ ಮನವಾರೆ ಧನಂ. ಸಮೆಯಲ್ಕಿಸರ್ವ ಭೋಗಂಗಳಂ ಭೋಗಿಸಲ್ಕಿಂತು ದಾಸೋಹಂ ಭಾವಮನಳವಟ್ಟುತನುವಿನ ಹಂಕಾರವಳಿದು ಟ್ಟ ಮಹಾಪ್ರಸನ್ನತೆಯುಂ ಪಡೆದು ಜಂಗಮ ಲಿಂಗಾರ್ಚನ ವ್ಯಾಪರಿಯೆಂದ ರಿಪುತ್ತಂ ಜಂಗಮಭಕ್ತನೆನಿಸಿ ಪಲವುವತ್ಸರಂ ಬೆಸಕೆಯ್ವುತಿರ್ದ ನಂತುಮಲ್ಲದೆಯುಂ॥

ಕಂ॥ ಪುರಹರಭಕ್ತನಪ್ಪ ಕಲಿಕಂಭರಜಂಗಮಭಕ್ತಿಗಂದು ಸ್ವಾವರ
ದಿ ನೆಗಳ್ದು ತದ್ನೃಪದ ಭಟ್ಟನೆನಿಪ್ಪ ವನೊರ್ವನಂದುಬಂಧುರುತರ
ಜಂಗಮತ್ವಮದು ಲೇಸೆನುತಂ ಬೆಸಕೈಯಲಾರದಾ। ಪುರದೊಳಿವಿಟ್ಟು
ಪೋಗಿವರಜಂಗಮ ವೇಷವನಾಂತನರ್ಥಿಯಿಂ॥ ೫॥

ವ॥ ಅಂತುಮುನ್ನಂ ಭಟ್ಟನಾಗಿರ್ದ ಬಿಟ್ಟುಪೋಗಿಪ್ಪತ್ತುವರುಷಕ್ಕೆ ಮರಪಿಕ್ಕಿ ರುದ್ರವೇಷಧಾರಿಯಾಗಿ ಮತ್ತನೇಕಲಿಂಗಮೂರ್ತಿಗಳಪ್ಪ ಜಂಗಮಲಿಂಗಂಗಳಂಕೂಡಿಕೊಂಡು ಸಾಡಂಬರದಿಂದಾ ಕಲಿಕಂಭಮಾಹೇಶ್ವರನರಮನೆಯುಂಪೊಗಲ್ಕಾಗಳ್॥

ಕಂ। ಗುಡಿತೋರಣದಿಂದಿದಿರ್ಗೊಂ! ಡೊಡಲಂ ಶಿವಶರಣರಡಿಗ
ಳೊಳ್ಚಲವಿಂ ಸೈ। ಗೆಡಪಿಶರಣಾರ್ಥಿಯೆನುತಂ। ಕಡುನೇಹದಿ ಪರ್ಚಿ
ಕುಳ್ಳಿರಸಿದಂಭಕ್ತಂ॥

ವ। ಅಂತುಕುಳ್ಳಿರ್ದ ಶರಣಜನದೊಳ್ ಮಣಿಹಾರಮಧ್ಯದೊಳ್ತರಳಮೊಪ್ಪವಂತೆಪೊಸತಾಗಿ ವೇಷಮಂತಾಳ್ದು ಬಂದಜಂಗಮಂಗಳ್ಗೆ ಮಂಗಳವೆನಿಸುತ್ತಿರ್ದನಾಗಳ್॥

ಕಂ। ಮಿಸುಪವರಜಡೆಯ ನುಡ್ಧಿ। ಳಸಿದವಿಭೂತಿಯ ನನೇಕ
ರುದ್ರಾಕ್ಷೆಗಳಂ। ಪೊಸಕಾಶಾಂಬರದಿಂ ರಾಜಿಸುವಾ ಜಂಗಮದಮೂ
ರ್ತಿಪಿರಿದೆಸೆದಿರ್ಕುಂ॥

ವ॥ ಅಂತೆಸೆವಪೊಸಜಂಗಮದ ಪಾದಮಂ ತೊಳೆದರ್ಚಿಸಿಕಲಿಕಂಭ

ಮಾಹೇಶ್ವರಂ ತನ್ನರಸಿಯುಮಂ ಪ್ರಿಯದಿಂ ಕರೆದಿಂತೆಂದಂ||

ಚಂ|| ಹರವರಮೂರ್ತಿಯಪ್ಪಿರಿಯರಂ ಪ್ರಿಯನೊಲ್ದಿರಗೆಂದೆನಲ್ಕೆ ನಿ|
ರ್ಭರದೊಳೆನೋಡಿ ಕಂಪರಿದು ಮುನ್ನ ಕಟಿನ್ನಯ ಗೇಹದಲ್ಲಿ ಕಿಂ| ಕ
ರನೆನಿಸಿರ್ಪವಂಗೆ ತಲೆ ವಾಗುವಳಲ್ಲದಿಟಕ್ಕೆ ತಾಂನಗು| ತ್ತಿರದೆಮಗು
ಳ್ದತ್ತ ಸತಿಗೆ ಕೋಪಿಸಿದಂ ಕಲಿಕಂಭನಲ್ತಿಯಿಂ|| ೮

ವ|| ಅಂತು ಕೋಪಾರೂಢನಾಗಿ ಕಲಿಕಂಭವೀರ ಮಾಹೇಶ್ವರ ನಿಂ
ತೆಂದಂ||

ಕಂ| ಪರಸಂಪುಟ್ಟಸುವರ್ಣವಾದ ಬಳಕಂ ಕಾಬೊರ್ನ್ನದೆಂದೆಂ
ಬರೇ|ಹರನಂತಾಳ್ದರಭಕ್ತರೊಳ್| ಕುಲಮುಮಂಶ್ರಯಂ ವಿಚಾರಿಪ್ಪ
ಡೇ| ಪರಕೈಪಾಗಮು ಕೋವಿದರ್ನಿರುತಮೆಂದಂದಾಗಲಾಬೋಪದಿಂ
ಕರಿಕಂಭಂ ಸರಿಜಂಗಮಕ್ಕೆರಗಳೆಂದು ಪ್ರೇಕವಂತಾಳ್ದವಂ||

ವ| ಅಂತು ಪ್ರೇಕದಿಂ ಕಡುಮುಳಿದು ಕಿಡಿಕಿಡಿಯಾಗಿ ಘುಡಿಘುಡಿ
ಸುತ್ತಾಗಳ್||

ಕಂ|| ಮೃಡಮೂರ್ತಿಯಪ್ಪ ಜಂಗಮ| ದಡಿಗೆರಗದೆ ನಿಂದೆಗೆಯ್ದಳಂ
ದತಿ ಛಲದಿಂ| ಮಡದಿಯ ತಲೆಯುಂ ಖಡ್ಗದಿ| ಕಡಿದುರ್ಬಿದಿರೆರ್ದ ನಾ
ಗಳಾ ಕಲಿಕಂಭಂ|| ೧೦

ವ|| ಅಂತು ನಿಜಪ್ರಾಣಲಿಂಗಮಪ್ಪ ಜಂಗಮದ ನಿಂದೆಗೆಯ್ದಳೆಂದು ತ
ನ್ನರಸಿಯ ಸಿರಮುಂ ಕಡಿದ ಗಣಾಚಾರ್ಯ ಶೀಲನೆಂಪ ನಿಪ ಕಲಿಕಂಭಮಾ
ಹೇಶ್ವರನ ಭಕ್ತಿಯುನಿಷ್ಠೆಗೆ ಮೆಚ್ಚಿ ಗಿರಿಜಾರಮಣಂ ನಿಜಮೂರ್ತಿಯಂ
ತೋರಿದಾಗಳ್||

ಮಂದಾರವೃತ್ತಂ|| ಚಾರುಜಟಾಜೂಟಂ ನದಿರೌದ್ರಂ ಮಾಲತಸಂ
ತಂ ಪನ್ನಗರಾಜಂ| ಸ್ಮೇರಪಂಚಾಸ್ಯಂ ದಶದೋರ್ವಿಸ್ತಾರದಿನೊ
ಪ್ಪೆಲ್ಕೊಪ್ಪಿದನೀಶಂ||

ವ|| ಅಂತೊಪ್ಪುವ ದಿವ್ಯಮೂರ್ತಿಯಂ ಕಂಡು ಪರಮಾನಂದರಸಾಬ್ಧಿ
ಯೊಳೋಲಾಡಿ ಪದಕಮಳಯುಗಳದೊಳಗೊಡಲ ನೀಡಾಡಿ ಪರವಶ
ನಾಗಿರ್ಪ ಕಲಿಕಂಭಮಾಹೇಶ್ವರನಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿ
ಸಿಮುದ್ದಡವಿಬೋಳ್ಳೈಸುತ್ತಂ ನಂದಿಕೇಶ್ವರನೊಳ್| ಲೋಕೇಶ್ವರನಿಂ
ತೆಂದಂ||

ಕಂ॥ ಪರಭವದಸುಖಶನೆಲೆ ಯೆ। ನಿಪರಸಿಯನೀಕ್ಷಿಸದೆಜಂಗಮಕ್ಕೆ ರಗಳೆನು। ತ್ತುರುತರಕೋಪದೊಳಸಿಯಿಂ। ಶಿರವರಿದನೆನಲ್ಕಿವಂಗದಾ ದೊರ್ ರೆಥರೆಯೊಳ್॥ ೧೩

ವ॥ ಎಂದೀಶ್ವರಂಕೊಂಡಾಡುತ್ತಾಗಳ್॥

ಕಂ॥ ಧರೆಯುಂಬೆಳಗುತೆಬಂಡಾ। ಸುರಪುಷ್ಪಕದಲ್ಲಿ ಕೂರ್ತುಕಲಿಕಂ ಭರನಾ। ದರದಿಂಕುಳ್ಳಿರಿಸಿಶಿವಂ। ಕರುಣದಿ ನಿಯಮಿಸಿದ ನರಳಮಳೆ ಯೊಳಗಾಗಳ್॥

ಕರಿಕಂಭರ್ವೆಸತ್ತ್ವ। ಸುರದನಿಮಿಷಪಟಹ ರವದಮಣಿಪುಷ್ಪಕ ಮಂ। ಬರಮುಂಬೆಳಗುತ್ತತಿ ಭಾ। ಸುರರಾಪ್ಯಾಚಳಕೆ ಬಂದುದುತ್ಸವ ದಿಂದಂ॥ ೧೪

ವ॥ ಅಂತುಸಂತಸದಿಂ ಬಂದಕಲಿಕಂಭಮಾಹೇಶ್ವರಂ ಬೆರಸುಗಿರಿಜೆ ಯರಸಂ ಪ್ರಮಥಗಣಾನ್ವಿತ ಪೊಡ್ಡೋಲಗಂಗೊಟ್ಟು ಕುಳ್ಳಿರ್ದಾ ಗಳ್॥

ಕಂ॥ ಸ್ವರ್ಗಪತಿಮುಖ್ಯ ನಿರ್ಜರ। ವಗಂಪೊಗಳುತ್ತಿರಲ್ಕೆ ನೀವಿಂ ಕಲಿಕಂ। ಭರ್ಗಗಣಪದಮನಿತ್ತಾ। ಭರ್ಗಂಪಿರಿದೊಪ್ಪುತಿರ್ದನಾಸ್ಥಾ ಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಮಾಣಿಕ್ಯಮಾಲ್ಯಮ ರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಸುಲಿಗೆರೆಯ ಪುರಾಧಿಪ ಶ್ರೀ ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ ಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ಕಲಿಕಂಭ ಮಾಹೇಶ್ವರ ಕ ಥಾವೃತ್ತಾಂತಂ ತ್ರಿಚತ್ವಾರಿಂಶದಾಶ್ವಾಸಂ

—ಶ್ರೀ—

## ನಾಲ್ವತ್ತುನಾಲ್ಕನೆಯಆಶ್ವಾಸಂ

### ತಂಡೇಶಮಾಹೇಶ್ವರಕಥಾವೃತ್ತಾಂತಂ

ಖಚರಸುರಕಿನ್ನರೋರಗ। ನಿಚಯಂಪೊಗಳುತ್ತಿರಲ್ಕೆ ತಂಡೇಶಂ ಗಂ। ದಾಶಳಿತಪಡಚಿರ ಕೊಟ್ಟಾ। ಸುಚರಿತ ಸೋಮೇಶನೊಲ್ದು ಪಾಲಿ

ಕನಮ್ಮಂ॥ ೧

ಸ್ವಾಗತೆ॥ ನೀಲಲೋಹಿತ ನಿವಾಸಮೆನಿಪ್ಪ। ಚೋಳದೇಶದೊಳ ಗೂರ್ಜಿತ ಸಪ್ಪ। ಕ್ಷಾತ್ರಿಳಿತನೊಳೊಲ ವಿಂದೆಸೆಯುಲ್ವ। ಲ್ಲೀಲೆಯೆಂಬಪು ರವಿಂದಾಸ ದೊಳ್ಪಿಂ॥ ೨

ಕಂ॥ ಅದುಕಾವೇರೀ ತಟದೊಳ್ನಿರೆ। ಪದೆದೊಪ್ಪುವುದಲ್ಲಿ ಸಿಂಪಿನೊ ಳ್ಮುತ್ತೊಗೆವಂ। ದದಿಮೂರ್ಖವಿಪ್ರನು ದರದೊಳುದಯಿಸಿ ತಂಡೇಶ ನೆಂಬಪೆಸರಿಂದಿರ್ದ॥ ೩

ಆತಂಡೇಶಂ ಕ್ರೀಡೆಯೊ। ಳೋತೀಶ್ವರಭಕ್ತ ರಾತ್ಮಜರಸಂಗತಿ ಗಂ। ಗಾ ತಟದೊಳಮಳವಾಳ। ವ್ರಾತದ ಲಿಂಗಮನೆ ಮಾಡಿಪೂಜಿಸುತಿ ರ್ದಂ॥

ವ॥ ಅಂತೀಪರಿಯೊಳ್ಮಳಲ ಲಿಂಗಂಗಳಂಮಾಡಿ ಪತ್ರಪುಷ್ಪಂಗಳಂತಂ ದುಭಕ್ತಿಭಾವದಿಂ ಪೂಜೆಗೆಯ್ದು ತಮ್ಮ ಮನೆಯೆಂಬುದಂ ಮರೆದುಪಸಿ ಪ್ರಮಂ ನೀರಳ್ಕೆಯುಮಂತೊರೆದುಶಿವಧ್ಯಾನದಿಂ ತಂಡೇಶನಿರಲ್ಕಂಡತಿ ಮೂರ್ಢನಪ್ಪತಂದೆಕಂಡುಕಿಡಿಕಿಡಿಯೋಗಿ॥

ಕಂ॥ ಇವನಕಟ ಕೆಟ್ಟುಪೋದಂ। ಶಿವಭಕ್ತರಮಕ್ಕಳೊಡನೆಬಿಡದಾ ಡಿಯೆನು। ತ್ತವಿವೇಕದಿ ನಾವಿಪ್ರಂ। ಭವನಕೆ ತಂಡೇಶನಂ ಕರಲ್ದೆಳೆ ದೊಯ್ದಂ॥ ೫

ವ॥ ಅಂತಳೆದೊಯ್ದು ಲಘು ನೀಂಬೂದಿಯುಮರುಳ್ಗಳಮಕ್ಕಳೊಡನಾ ಡಿ ಕೆಟ್ಟುಪೋಗದೆ ನಮ್ಮಾಯಾಕಳಪಿಂಡಮ ಕಾವುದೆಂದು ಪೇಳಲ್ಕೈ ಕೊಂಡು ಮತ್ತಮಾಗಳ್ತಂಡೇಶಂತನ್ನ ಮನದೊಳಗಿಂತೆಂದಂ॥

ಕಂ॥ ಅಂತಾತಂಡೇಶಂ ಮುದ। ವಂತಾಳ್ದು ಪು। ಗಳಪಿಂಡನಾಡಿಪನೆ ವದಿಂ। ಕಾಂತಾರದೊಳೀಶನನೇ। ಕಾಂತದೊಳರ್ಚಿಸುವ ಚಿತ್ತದಿಂ ಕೈಕೊಂಡಂ॥ ೬

ವ॥ ಅಂತುಕೈಕೊಂಡ ತಂಡೇಶಂ ವಿಭೂತಿರುದ್ರಾಕ್ಷೆಗಳನಾದುಷ್ಟಾ ತ್ಮಕನಪ್ಪ ತಂದೆಕಾಣದಂತೆ ಬೈತಿಟ್ಟೆಂದು ನಿಶಿತಪರಶುವಂ ಪಿಗಲೊ ಳಾಂತುಸಲ್ಲೀಲೆಯಿಂ ಗಡಣದಗೋವರ್ಗರನಾಕಳಪಿಂಡನಾಡಿಸಲ್ಕೆಪೊ ರಪೊಟ್ಟಾಗಳ್॥

ಕಂ॥ ಗಡಣದಗೋಪರ್ಸಹಿತಂ। ದಡವಿಗೆತಂಡೇಶನೆಯ್ದಿ ಗೋವಿ

ನಪಿಂಡಂ। ಬಿಡೆಮೇಯಿಸುತಂ ಗಂಗೆಯ। ತಡಿಗೆಯ್ತಂದಂ ಸುಘೋ
ಷ್ಪವನ್ನಿಗಲಾಗಳ್॥

ವ॥ ಅಂತಾ ಕಾವೇರೀನದಿಯ ತಟಕೆಯ್ತಂದು ಜಳಕಂಬೊಕ್ಕು ವಿಭೂ
ತಿರುದ್ರಾಕ್ಷೆಗಳಂ ತಾಳ್ದು ಕೋಮಳಮಪ್ಪ ಮಳಲಲಿಂಗಮಂ ಮಾಡಿ ಪಲ
ವಾಕಳ ಪಾಲಂ ಕರೆದು ಮಜ್ಜನಕ್ಕೆರೆದು ಕಕ್ಕೆಯ ಪೂಗಳಿಂ ಪೂಜೆಗೆಯ್ದು
ಪಂಚಾಕ್ಷರಿಯಂ ಜಪಿಸುತ್ತಂ ಬಲವಂದು ದಂಡನಮಸ್ಕಾರಮಂ ಮಾಡಿ
ಮನೋಭಾವದೆ ಭಕ್ತಿಯಿಂ ಪ್ರಸಾದಮಂ ಕೊಂಡು ತಂಡೇಶಂ ಪರಿಪರಿ
ಯ ನಿಯಮಮಂ ನೆಸಲಿಸುತ್ತ ನಿರ್ವರ್ತಿರ್ದನಂತುಮಲ್ಲದೆಯುಂ॥

ಕಂ॥ ಪಲವು ದಿನಂ ವಿಧಿಪ್ರಕಾರದಿ। ನೊಲವಿಂದಂ ಮಳಲಲಿಂಗಮಂ ಪೂ
ಜಿಸಿ ನಿರ್ಮಳಭಕ್ತಿಭಾವದಿಂ ಸಲೆ ನಿಲೆ ತಂಡೇಶಂ ಮಹೇಶಭಜನೆಯೊ
ಳಿರ್ದಂ॥ ೮

ವ॥ ಅಂತೀ ಪರಿಯ ಶಿವಭಜನೆಯೊಳ್ ತಂಡೇಶನಿರುತ್ತಿರ್ದೊಂದು ದಿವಸದೊ
ಳ್॥

ಕಂ॥ ಆವಿನಪಿಂಡಂ ಕಾವುತೆ। ಕಾವೇರಿಯ ನದಿಗೆ ಬಂದು ತಂಡೇಶಂ
ಸ್ವ। ಭಾವದಿ ವಿಭೂತಿಯಂ ತಳೆ। ದಾ ವಾಳುಕಮಂ ತರಂಗದಿಂ ತೆಗೆದಾ
ಗಳ್॥ ೯

ಥಳಥಳಿಸಿ ಪೊಳೆವ ಮಳಲಿಂ। ಎಳಸಿತ ಲಿಂಗಮನೆ ಮಾಡಿ ಭಕ್ತಿ ಮಿಗ
ಲ್ಗೋ। ಕುಳಮಂ ನೆರೆ ಕರೆದು ಸುಧಾ। ಜಳದಭಿಷೇಕಮನೆ ಮಾಡಿದಂ
ತಂಡೇಶಂ॥ ೧೦

ವೃತ್ತಮನಂತರಂ

ಕಂ॥ ವಿನುತ ದ್ರೋಣಂಗುಳ್ಳಂ। ವನಕುಂದಂ ಕಕ್ಕೆ ಯೆಕ್ಕೆಯೆಂಬಿವ
ರಲರಿಂ। ಮನವೊಲ್ದೊಲ್ದಾ ಲಿಂಗಾರ್ಚನೆಯಂ ನೆರೆ ಮಾಡಿ ಮಾಡಿ ನಲಿ
ವುತ್ತಿರ್ದಂ॥

ಪರವಶದ ಭಕ್ತಿಯಿಂ ಬಂ। ಧುರ ಲಿಂಗದ ಮುಂದೆ ಕುಣಿದು ಪಾಡಿ ಪೊ
ಕ್ಕಿ ಕರಂ। ಪೊರಳ್ದು ಬಲವಂದು ಭಕ್ತಂ। ಪರಮಧ್ಯಾನಮನೆ ತಾಳ್ದು ಮೆ
ಯ್ಮರೆದಿರ್ದಂ॥

ವ॥ ಅಂತು ಶಿವಧ್ಯಾನದಿಂ ಮೆಯ್ಮರೆಯಲ್ಕಾಗಳೆ ಆ ಪಶನೆಯ್ದೆ ಗೋವ
ರ್ಗಂಡು ಪರಿದು ಪೋಗಿ ತತ್ಪಿತಂಗೆ ನಿನ್ನ ಮಗನಾಕುಳಗಳಂ ಕರೆದು

ಪಾಲೆಲ್ಲಮಂ ಚೆಲ್ಲಿಕೆಡಿಸುತ್ತಿರ್ದಪನೆಂದು ಪೇೞಲಾ ಮೂರ್ಖನಪ್ಪವಿಪ್ರಂ ಕೇಳ್ದು ಕಿಡಿಕಿಡಿವೋಗಿ ಮುರುಗುತ್ತಂ ಪರಿದುಪೋಗಿ ಕಾವೇರೀತೀರದೊಳ್ ಕಂಡು ನೋೞ್ಪಾಗಳ್||

ಕಂ|| ಪಂಚಾಕ್ಷರಿಯಂ ಜಪಿಯಿಸು| ತ್ತಂಚಲಿಯಿಸದೀಶನಿಷ್ಠೆಯಿಂದಿರ್ಪ ಮಹೋ| ದಂಚಿತಚಿತ್ತದಮಗನಂ ಚಂಚಳಮತಿಯಪ್ಪ ಪಾಪಿವಿಪ್ರಂ ಕಂಡಂ|| ೧೩

ಚಂ|| ಮಗನಿದಿರಲ್ಲಿ ತೋರ್ಪ ತುೞ ವಾಳುಕಲಿಂಗಮನೆಂಟುದಿಕ್ಕಿನೊಳ್| ಮಿಗೆಪರಿದಿರ್ಪ ಪಾಲಪೊನಲಂ ನೆರೆಕಂಡುಮಹೋಗ್ರಕೋಪದಿಂ| ಭುಗಿಲಿಪುವಕ್ಕಟೇ ವ್ಯಸನದಿಂ ಸುಧೆಯಂಬರಿಕ್ಕೈದನೆಂದು ಮುಂದಿಗೆ ಪರಿತಂದನಾ ದ್ವಿಜನುದಗ್ರತೆಯಿಂ ನೆರೆಪೊಯ್ಯನಲಳ್ಕರಿಂ||

ಕಂ|| ಮುನಿದು ಘುಡುಘುಡಿಸಿ ಮಗನಂ| ಜನನುತಮಾಹೇಶವರ್ಗಮಂ ನಿಂದಿಸುತಂ| ಘನಪಾಪಿವಿಪ್ರನಾಮೇ| ಲಿನಲಿಂಗಮನಕ್ಕಟೊಡೆದುಕೆಡಪಿದನಾಗಳ್|| ೧೫

ವ|| ಅಂತೊದೆದು ಕೆಡಪಲದಂ ಕಂಡು ತಂಡೇಶಂ ಕಡುದುಃಖದಿಂ ಮಿಡುಮಿಡನೆ ಮಿಡುಕಿ ಕೋಪದಿಂ ಘುಡುಘುಡಿಸಿ ಕಿಡಿಕಿಡಿಯಾಗಿ ಪತ್ತಿರ್ದ ಕೊಡಲಿಯಂ ಕೊಂಡೆರ್ದಾಗಳ್||

ಕಂ|| ಕಡುಗೆರಳ್ದು ಕೊಡಲಿಯಿಂದಂ| ಕಡಗಿ ಶಿವದ್ರೋಹಿಯಪ್ಪ ತಾತನ ತಲೆಯಂ| ಕಡಿದಿಕ್ಕಲ್ ತಂಡೇಶಂ| ಗುಡುಪತಿ ಕರನೊಲ್ದು ರೂಪುದೋರಿದನಾಗಳ್|| ೧೬

ತೋಟಕವೃತ್ತಂ|| ಸುರದೀರ್ಘಿಕೆ ಚಂದ್ರಮ ಸಗ್ನಿ ಫಣಾ| ಧರನಂಗಜವಿಷಂ ಭಸಿತಂ ಶಿವೆ ಬಂಧುರ ಪಂಚಮುಖಂ ದಶಬಾಹುಗಳೊ| ಪ್ಪಿರೆ ಶಂಭು ನಿಜಾಕೃತಿಯಿಂ ಪೆಸೆದಂ|| ೧೭

ವ|| ಅಂತಾ ಖಂಡಪರಶು ನಿಜಮೂರ್ತಿಯಂ ತೋರಲ್ಕಂಡು ತಂಡೇಶಂ ಚರಣಕಮಲಮನಪ್ಪಿಕೊಂಡು ಬಿಡದೆ ಪರಮಾನಂದಾಶ್ರುಜಲಭರಿತನಯನನಾಗಿ ಮುರದ್ವೇರಗಿರ್ಪಾಗಳ್||

ಕಂ|| ಖಂಡೇಂದುಮೌಳಿ ಕೃಪೆಯಿಂ| ತಂಡೇಶನ ನಿಷ್ಠೆಗೋತು ಪಿಡಿದೆತ್ತಿ ಕರಂ| ಕೊಂಡಾಡಿ ಪ್ರಮುದಿಸೋವುತೆ| ನಂದಿಗೆ ನಗ್ಗರಾಜಿತ್ತನು ಜೆಗಂದಿಂತೆಂದಂ ೧೮

ಅಸದಳದಿನೆನ್ನ ನೊಲ್ದ| ಜೇಸುತನಿವಂತಂದೆ ಯೆಂದು ನೋಡಿ ದನೇನಿಂ| ಡಿಸಿದನೆ ತಲೆಗಡಿದನೆನು| ತ್ತ ಸಮಾಕ್ಷಂ ಮೆಚ್ಚಿಪೊಗಳ್ದನಂ ದೋಃವಿಂದಂ||

ವ| ಅಂತುಮೆಚ್ಚಿಕೊಂಡಾಡುತ್ತಮಾಗಳ್||

ಕಂ| ವರಕುಸುಮ ವೃಷ್ಟಿವೆರಸಂ| ಬರದಿಂಪೇಳ್ತಂದಮಣಿ ವಿಮಾನದೊಳತ್ಯಾ| ದರದಿಂ ತಂಡೇಶನನೊ| ಲ್ದಿರಿಸಿ ಶಿವಂನಿಯಮಿಸಲ್ಕೆಚಿಗಿದುತ್ತಾಗಳ್||

ಕಂ| ದಿಕ್ಕಿನೊಳುರು ಪಟಹಧ್ವನಿ| ತೆಕ್ಕನೆತೀವಲ್ಕೆ ಮಣಿವಿತಾನಂ ಕೈಲಾ| ಸಕ್ಕಾತಂಡೇಶಂ ಬೆರ| ಸಕ್ಕಜದಿಂಬಂದುಪೊಕ್ಕುದತಿಸಂಭ್ರಮದಿಂ|| ೨೦

ವ| ಅಂತುಬಂದ ತಂಡೇಶಂ ಬೆರಸುಕೈಲಾಸ ಸಭಾಮಂಟಪದೊಳಖಿಳಗಣಸಮೇತಂ ಗಿರಿಜಾವರ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ| ವೃಂದಾರಕ ರುಷಿಯೆನಲರ| ವಿಂದಭವಂ ಬಿಡದೆಪೊಗಳಲಾ ತಂಡೇಶಂ| ಗಂದುಗಣಪದಮನಿತ್ತಾ| ನಂದದಿಶಿವನೆಸೆವುತಿರ್ದನಾಸ್ಥಾಯಿಕೆಯೊಳ್||

ದಗ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರಿಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿ ಪುರಾತನರ ಚಾರಿತ್ರದೊಳ್ತಂಡೇಶ ಮಾಹೇಶ್ವರಕಥಾವೃತ್ತಾಂತಂಚತುಶ್ಚತ್ವಾರಿಂಶದಾಶ್ವಾಸಂ||

...ಶ್ರೀ...

ನಾಲವತ್ತೈದನೆಯ ಆಶ್ವಾಸಂ
ಕೊಲ್ಪುಲಿಯಾಂಡಮಾಹೇಶ್ವರವೃತ್ತಾಂತಂ

ನಿರುತಂಕೊಲ್ಪುಲಿಯಾಂಡಂ| ಗುರುತರಗಣಪದಮನಿತ್ತ ಮೆರದಗತ ನಯಾ| ಪರಪ್ಪದ... ಸ್ಸ್...ನೊಲ್ದು ಪಾ

ಲಿಕೆನಮ್ಮಂ|| ೧

ವಿಳಸಿತಚೋಳಮಹೀಮಂ| ಡಳದೊಳ್ ಪರಶಿವನಭವನ ತತಿಯಿಂ ಭಕ್ತಾ| ವಳಿಗಳಸನ್ಮಂದಿರಸಂ| ಕುಳದಿಂ ತಿರುವಣ್ಣಮಾಲೆಯೆಂಬೂರೆಸೆಗುಂ| ೨|

ತಿರುವಣ್ಣಮಾಲೆಯೊಳ್ಸ| ಚ್ಚರಿತವ್ಯವಹಾರಿಯೆನಿಸುತಂ ನಿಜಧನಮಂ| ವರಜಂಗಮಕ್ಕೆಬೀರು| ತ್ತಿರುತಿರ್ಪಂ ಬಹುಳಯುಕದಿ ಕೊಲ್ಪುಲಿಯಾಂಡಂ| ೩|

ಜಂಗಮಮೂರ್ತಿಗಳಂಶಿವ| ಲಿಂಗವೆನುತ್ತಂ ತೆಕಂಡುಭಯಭಕ್ತಿಮಿಗಲ್| ಲ್ಪಿಂಗದೆ ತಾಂಬೆಸಕೆಯ್ವುತ್ತಂ ಗುಣಗಣ ರಾಶಿಯುಪ್ಪಕೊಲ್ಪುಲಿಯಾಂಡಂ| ೪|

ವ|| ಅಂತುಕೊಲ್ಪುಲಿಯಾಂಡಂಲಿಂಗವಂತ ಜಂಗಮಂಗಳ್ಗೆ ತನುಮನಧನಂಗಳಲ್ಲಿ ವಂಚನೆಯಿಲ್ಲದೆ ಸನ್ಮಾನದಿಂ ಬೇಡಿತ್ತಂಕುಡುತ್ತಂ ಪಲವುವರುಷಂ ಹರುಷದಿನೀಪರಿಯೊಳಿರುತ್ತಂದ್ವೀಪಾಂತರಕ್ಕೆತಾಂ ವ್ಯವಹಾರಕ್ಕೆ ಪೋಪುದ್ಯೋಗಮುಂ ತಾಳ್ದಿರ್ಪನ್ನೆಗಂಚೋಳಮಂಡಳದೊಳವರ್ಷಣಮಾಗಿ ಬರಂಬೀಳ್ವುದನರಿದುತನ್ನ ಮಾತೃಪಿತೃಗಳಂ ಕರೆದು ಪೊಡಮಟ್ಟು ಕೈಗಳಂಮುಗಿದಿಂತೆಂದಂ|

ಮ|| ವಿಧಿತಂಚೋಳಧರಿತ್ರಿಯೊಳ್ನೆರೆಬರಂಬೀಳ್ವಂ ತುಟಾಗಿರ್ಪದಿಂ ತಿದರೊಳ್ಮಕ್ತಿಯು ನೀವಜಂಗಮಸಮೂಹಂ ಬಂದೊಡಾಸ್ಯವಿ||ಲ್ಲದೆ ಧಾನ್ಯಂಗಳಿನರ್ಥದಿಂ ಪಸನದಿಂ ಸಂತೃಪ್ತಿಯುಂ ನೀವೆಪೂ| ಳ್ಪುದೆನುತ್ತಂ ಪಿತೃಮಾತೃಗಳ್ಗುಸಿರ್ದನಾ ಭಕ್ತಂಮಹೋತ್ಸಾಹದಿಂ| ೫|

ಮತ್ತಮಾಗಳ್||

ಕಂ|| ಘನಭಕ್ತಿಯಿಂದೆ ನೆರಪಿದ| ಧನಮುಂಬಹುಧಾನ್ಯಮುಂಮಹಾಭಕ್ತೌಘ| ಕ್ಕನುನಯದಿ ನೀವುಡೆನುತಂ| ಜನನಿಗೆ ಜನಕಂಗೆ ಪೇಳ್ದುಕೊಟ್ಟಂಭಕ್ತಂ|| ೬

ವ| ಅಂತಾಕೊಲ್ಪುಲಿಯಾಡಂ ತನ್ನರಸಿಯುಂ ಕರೆದಿಂತೆಂದಂ||

ಕಂ|| ಭರದಿಂ ಮನ್ಮಾತಾಪಿತೃ| ಪರಿಚರ್ಯಂಗೆಯ್ವುದೆನ್ನ ಶಿವಭಕ್ತರ್ಗಂ| ದರದಿ ಬೆಸಕೆಯ್ವುದೆನುತುಂ|ನಿರವಿಸಿದಂ ತನ್ನಸತಿಗೆಕೊಲ್ಪುಲಿಯಾಂಡಂ||

ವ॥ ಮತ್ತಮೀಬರದೊಳಿಂಗ ಜಂಗಮಂಗಳ್ಗೆ ಬೇಡಿತ್ತಂಕೊಟ್ಟುಸು ರಕ್ಷಿಸ್ಯಂಗೆಯ್ಯುವೆಂದು ತನ್ನ ತಾಯ್ತಂದೆಗಳಡಿಗೆರಗಿ ಬೇಳ್ಕೊಂಡುನಿ ಜವ್ಯವಾಹಾರಕ್ಕೆ ಕೋಲ್ಪುಲಿಯಾಂಡಂ ಪೊರಮಟ್ಟಾಗಳ್॥

ಕಂ॥ ಶರನಿಧಿಯೊಳ್ಪ್ರಿತ್ರಮನೇ। ರಿರದತಿ ವೇಗವೊಳೆ ಪೋಗಿದ್ವೀ ಪಂಗಳನಾ। ಹರಭಕ್ತಂ ಪೊಕ್ಕೆಲವಿಂ। ಪರಮಣಿಮೌಕ್ತಿಕಮನುನರಸಿ ಕೊಳುತಿರ್ದಂ॥ ೮

ವ॥ ಮತ್ತಮಿತ್ತಲ್ಚೋಳ ಮಂಡಲದೊಳವರ್ಷಣವಾಗಿ ಬರಂಬಿದ್ದು ಜಗಮೆಲ್ಲ ಮುರುಳ್ದು ಪೋಗುತ್ತಿರಲದರೊಳ್ಪೊಟ್ಟೆಗಿಲ್ಲದೆ ಲಜ್ಜೆಗೆಟ್ಟುಭವಿ ಗಳಪ್ಪಸಹಸ್ರಸಂಖ್ಯೆಯುನಂಟಕ ಳಿದು ಬರಲ್ಕೊಲ್ಪುಲಿಯಾಂಡರತಾ ಯ್ತಂದೆಗಳೆನಿಪ್ಪ ಎಂವಿಚಾರದಿಂ ಲಿಂಗಜಂಗಮಕ್ಕೆಂಗು ಸವೆದಿರ್ದಬ ಹುಳಧನಧಾನ್ಯವೆಲ್ಲಮಂ ಸವೆಯಲ್ಕೀಲಿಕ್ಕಿ ರಕ್ಷಿಸುತಿರ್ಪ ಸಮಯ ದೊಳ್॥

ಚಂ॥ ತಮಗಿರಿಸಿರ್ದ ಸರ್ವಧನಧಾನ್ಯಮುದಿರ್ಪುದನೆಯ್ದೆ ಕೇಳ್ದು ಜಂ ಗಮನಿಕುರುಂಬ ಮೊಬ್ಬರೆಕೋಲ್ಪುಲಿಯಾಂಡನತಂಬೆತಾಯ್ಗಳ। ಕ್ರ ಮವನೆಚಿತ್ತದೊಳ್ತಳೆದು ನಂಟರಮೇಲಣನಲ್ಮೆಯಿಂದವಿಂ। ನಿಮಗೆಪ ಗಿಕ್ಕಲಿಲ್ಲೆನುತಮಂತವರಂಕಡುಗಾಯ್ದು ನೂಂಕಿದರ್॥

ಕಂ॥ ಪಸಿದುಂ ನಚ್ಚಿದವಂನೆಮಿಾ। ಗರಿಯಾಯ್ತಾಗಲೆಂದು ಮಿಲ್ಲನ ಮಗಾರುಂಟೇ। ಸ್ವರಭಕ್ತರೆನುತೆದೇಶಾಂ। ತರಕೆಲ್ಲಂಪರೆದುಪೋಯ್ತು ಜಂಗಮವಾಗಳ್॥

ವ॥ ಅಂತಾಲಿಂಗವಂತ ಜಂಗಮಂಗಳೆಲ್ಲಂ ದೇಶಪೇಶಕ್ಕೆಪೋಗಲಿತ್ತ ಲ್ಚೋಳದೇಶದೊಳ್ಮಳೆಬಂದು ಬರಂತಿಳಿಯಲ್ಪಿಂದಿರ್ದ ನಂಟರಿಪ್ಪತ್ತೆ ಲ್ಲಂಭವಿಗಳಪ್ಪ ಪರನೂರರ್ಗೆ ಕಳುಪಿಕೊಲ್ಪುಲಿಯಾಂಡನ ಸತೀಪು ತ್ರರುಂ ತಾಯ್ತಂದೆಗಳುಂಸುಖದಿಂದಿರುತ್ತಿರಲ್॥

ಕಂ॥ ಭರದಿಂ ಕೋಲ್ಪುಲಿಯಾಂಡಂ। ಪಿರಿದುಂ ಭಂಡಮನೆಕೊಂಡುಪ ತ್ರರವೊಂದು। ಕ್ಕೆರದೆಮಗುಳ್ದೊಲವಿಂ ತ। ತ್ಪರಕೇಸ್ತಂದಾಗಳಾತ್ಮ ಗೃಹಮಂಪೊಕ್ಕಂ॥

ವ॥ ಅಂತುತನ್ನರಮನೆಯಂ ಪೊಕ್ಕುತಾಯ್ತಂದೆಗಳಿಗಾನತನಾಗಿನ ಲ್ಮೆಯಿಂ ಕ್ಷೇಮಕುಶಲವನಾರಯ್ದು ಹಿಂದಣಬರದೊಳನ್ನಿ ಲಿಂಗವಂತ

ಜಂಗಮಂಗಳ್ಗೆ ಹರುಷಮಪ್ಪಂತೆ ಬೆಸೆಕೆಯ್ದಿ ರೆ. ಎಂದು ಬೆಸ: ಗೊಳಲ್ಕವರಿಂ ತಂದರ್‌॥

ಕಂ॥ ಪಿರಿದುಂ ನಂಟರಬಳಗಂ। ಪಿರಿದೆಲ್ಲಾ ಧನಗಳವರ್ಗೆ ತೀರ್ದುದು ದುಬಳಕೆಲ। ಶ್ವರಭಕ್ತರ್ಗಿಲ್ಲಾ ಯೆನ। ಲುರಿಪತ್ತಿದತೆರದಿ। ಮರುಗಿದಂತದ್ಭಕ್ತಂ

ವ॥ ಅಂತು ಮನದೊಳ್ಮರುಗಿ ಕೊಲ್ಪುಲಿಯಾಂಡಂ ತನ್ನ ತಾಯ್ತಂದೆಗಳ್ಗಿಂತೆಂದಂ॥

ಕಂ॥ ಇಳೆಯೊಳ್ಕಾಳ್ಪಿಕ್ಕಂತು। ಜ್ವಲನಾಡಿದರೆಂಬಗಾದೆನಿಮಗಾದುದುನಿ। ಮ್ಮಳಶಿವಭಕ್ತರ್ಗಿಕ್ಕದೆ। ಸಲೆಭವಿಗಳಿಗಿಕ್ಕಿ ವಸ್ತುಗೆಡಿಸಿದಿರೆಂದಂ। ೧೩।

ವ॥ ಎಂದು ಖತಿಗೊಳುತ್ತಂ ಕೊಲ್ಪುಲಿಯಾಂಡಂ ತನ್ನ ಮನದಳಲ್ತೀರ್ವಂತೊಂದುಪಾಯಮಂ ನೆನೆದಂತವರ್ಗುಡಲಿತ್ತು ಕಳುವುವೆನೆಂದು ಕಾಟಲದಿಂ ಕಿಂಕರರನಟ್ಟಿ ಕರೆಯಲ್ಕಾರ್ತಿವಿಂಪಾ ನಂಟುಬಳಗಮನಾದರಿಸುತ್ತಿದ್ದಾಗಳ್‌॥

ಕಂ॥ ಬೇಗದಿ ತನ್ನಯ ಪೊದಲಿನ। ಬಾಗಿಲೊಳಾರ್ಪೋಗದಂತೆ ಕಾಪಂ ಪೇಳ್ದಂ। ತಾಗಳಸಿವಿಡಿದು ನಿಂದಂ। ನಾಗವಿಭೂಷಣನಭಕ್ತ ಕೊಲ್ಪುಲಿಯಾಂಡಂ॥ ೧೪।

ವ॥ ಅಂತಸಿಯಂಜಡಿದಾಗಳ್‌॥

ಕಂ॥ ಮುಳಿಸಿಂ ಕೊಲ್ಪುಲಿಯಾಂಡಂ। ಬೆಳಗೆಯ್ವಂತರಿವಪಾವರಿಗನಂದದಿನು। ಜ್ವಳಪಸಿಯಿಂದಂ ಭವಿಗಳ। ಬಳಗಮನುಕೆ ತರಿದುಕೆಡಪಿದಂ ಧರೆಬೆದರಲ್‌॥ ೧೫।

ಕರಣರಥನಮಂತಿನವಂ। ದರೆನುತ್ತಂ ಕಾಯ್ದು ಭವಿಗಳೆಂದೆನಿಸುವನಂ। ಟರನುರೆತವಿಸಿದಭಕ್ತಂ। ಗುರುತರದಿಂ ಮೆಚ್ಚಿ ರೂಪುದೋರಿದನಭವಂ॥ ೧೬।

ಕಿರುನಾಗರತೆ ಉಡುಗೆಗಳಿಂ। ಕರೆಗೊರಳಿಂ ನೊಸಲಕಣ್ಣಿ ನಿಂಪಿರೆಯಿಂ ಬಾಂದೊರೆಯಿಂ ವಿಭೂತಿಯಿಂ ನೆರೆ। ಮೆರೆವಗಜಾರಮಣನಮಳ ಮೂರ್ತಿಯೊಳೆಸೆದಂ। ೧೭

ವ॥ ಅಂತೆಸೆವಮೂರ್ತಿಯಂ ಕಂಡು ತಾಳ್ದಿರ್ದಸಿಯುಂ ಬಿಸುಟ್ಟು ಪರಮಾನಂದಭರಿತ ಹೃದಯನಾಗಿ ಭಯಭಕ್ತಿಯಿಂ ಚರಣದೊಳ್ಪೊಗೆಡೆದು

ಪರವಶಭೂತನಾಗಿರ್ಪ ಕೊಲ್ಲಿಪುರಿಯಾಂಡನಂ ಕಾರುಣ್ಯದಿಂದೆತ್ತಿ ಕು
ಳ್ಳಿರಿಸಿ ಮತ್ತಮಾತನ ಕೈಯಿಂಮಡಿದ ಭವಿಗಳಪ್ಪನಂತರ್ಗೆ ಜೀವಮಂ
ಕೊಟ್ಟಿತ್ತಿ ಗಂಗಾಧರಂ ನಂದಿನಾಥಂಗಂದಿಂತೆಂದಂ||

ಕಂ|| ಎನ್ನಯಶರಣರ್ಗಿರಿಸಿದ| ಹೊನ್ನಂಸಲಿತಿಂದರೆಂದು ನಂಟರನ
ನಿತಂ| ತಾಂನೆರೆತವಿಸಿದ ನೆನಲೀಸನ್ನುತಭಕ್ತಂ ಗದಾರ್ಸಮಾನಂಥರೆ
ಯೊಳ್|| ೧೮|

ವ|| ಎಂದಿಂದುಧರ ನಾನಂದದಿಂ ಕೊಂಡಾಡುತ್ತಂ ತಾಂಬರಿಸಿದದಿ
ವ್ಯವಿಮಾನದೊಳ್ಕೊಲ್ಲಿಪುರಿಯಾಂಡನಂ ಕುಳ್ಳಿರಿಸಿ ನಿಯಾಮಿಸಿದಾಗಳ್

ಕಂ|| ಭೂತೇಶನಸದ್ಭಕ್ತನ| ಮೇತಂ ಮಣಿಪುಷ್ಪಕಂ ನಭೋಂತ
ಮನಾತ್ಮ| ದ್ಯೋತಿಯೊಳುರೆಬೆಳಗುತ್ತಂ| ಕೌತುಕದಿಂ ರಜತಗಿರಿಗೆ
ಬಂದುತ್ತಾಗಳ್|| ೧೯

ವ|| ಅಂತುಬಂದು ಕೊಲ್ಲಿಪುರಿಯಾಂಡಂ ಬೆರಸುಗಿರಿಶಂಗಣಾನ್ವಿತನಾ
ನಂದದಿಂದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ಕೊಲ್ಲಿಪುರಿಯಾಂಡಂಗಹಿವರ| ತಳ್ಪಂಪೊಗಳಲ್ಕೆ ಪರಮಪದಮಂ
ಕೊಟ್ಟಾ| ಗನಲ್ಪಗುಣವಾರ್ಧಿ ಬುಧಜನ| ಕಲ್ಪದ್ರುಮ ಶಂಭುಮೆರೆದ
ನಾಸ್ವಾಮಿಕೆಯೊಳ್|| ೨೦|

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ
ಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ
ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ
ಷಷ್ಟಿಪುರಾತನರಚಾರಿತ್ರ, ದೊಳ್ಕೊಲ್ಲಿಪುರಿಯಾಂಡ ಮಾಹೇಶ್ವರ ಕಥಾ
ವೃತ್ತಾಂತಂಪಂಚ ಚತ್ವಾರಿಂಶದಾಶ್ವಾಸಂ||

—ಶಿ/ೞ—

## ನಾಲ್ವತ್ತಾರನೆಯ ಆಶ್ವಾಸಂ

### ಕಳಚೆತ್ತಿಯಾಂಡ ಮಾಹೇಶ್ವರ ಕಥಾವೃತ್ತಾಂತಂ

ತ್ರಿದಶರ್ಜಯಜಯ ಯೆನೆಕೇ। ಳ್ವದಪಂ ಕಳಚೆತ್ತಿಯಾಂಡಗಂ ಪೊಲ
ವಿಂದ। ಗ್ಗದಗಣಪದವಿತ್ತೊತ್ತುಪ್ಪವಸದ। ಮಳವಿಭುಸೋಮೇಶ ನೊಲ್ದು
ಪಾಲಿಕೆನಮ್ಮಂ॥ ೧।

ಸನ್ನುತಚೋಳಧರಿತ್ರಿಯೊ। ಳುನ್ನತಮಾಹೇಶವರ್ಗಪಾಲಯುತತೆ
ಯಿಂ। ರನ್ನದ ಲಿಂಗನಿಕೇತನ। ದಿಂನಾಡೆ ಕಣಂಜಿಯೆಂಬ ಪುರಮೆಸೆದಿ
ರ್ಕುಂ॥ ೨।

ಎಸೆವಕಣಂಜಿಯಪುರದೊ। ಳ್ಪಸಿಯಂಸೂಡಿದನಭಕ್ತಿಯಂಪ್ರಕಟಿಸು
ತ್ತು। ರಸೆಯಂನಿಜಯಶದಿಂಥವ। ಳಿಸುತಂ ಕಳಚೆತ್ತಿಯಾಂಡನೆಂಬಂ ಮೆ
ರೆದಂ॥ ೩।

ವ॥ ಅಂತಾ ಕಳಂಜಿಪುರದೊಳ್ಕನ್ನೆಯ ಕುಲತಿಲಕನೆನಿಪ ಕಳಚೆತ್ತಿಯಾಂಡಂ ಶಿವನಿಂದೆ ಗುರುನಿಂದೆ ಜಂಗಮನಿಂದೆಯೆಂಬಿವಂ ಕೇಳದಗಣಾಚಾರತ್ವಮಂ ಪಿಡಿದು ದೂಷಕಜನ ವಿದ್ರಾವಣ ನೆನಿಸುತಿರ್ದನಂತುಮಲ್ಲದೆಯುಂ॥

ಚಂ॥ ಪರಗುರುಮರ್ತ್ಯನೆಂದು ಧರಣೀನುತಲಿಂಗಮ ನಶ್ಮಮೆಂದು
ಸ। ಚ್ಚರಿತರೆನಿಪ್ಪ ಜಂಗಮ ಸಮೂಹ ಮದಂ ಕುಲಹೀನರೆಂದುಮಾ।
ಸುರದೊಳೆನಿಂದೆಗೆಯ್ದ ಘನದೂಷಕರಂ ಬಿಡದೊಕ್ಕಲಿಕ್ಕಿನಿಷ್ಠುರತ
ರ ಜಿಹ್ವೆಯಂಪಿಡಿದು ಕೋಯ್ವುತಮಿರ್ಪ ನುಮೇಶಕಿಂಕರಂ॥ ೪

ಕಂ॥ ಪರಿಪರಿದುಚೋಳದೇಶದೊ। ಳರದೀಶ್ವರನಿಂದೆಗೆಯ್ವ ಶಾರ
ಸನೆಗಳಂ।ಪಿರಿದುಂಕೊಯ್ದುಡುಕುತ್ತಂ। ದುರಗಲಿ ಕಳಚೆತ್ತಿಯಾಂಡ
ನಿರಂಜನಸಭೋಳ್॥ ೫।

ವ॥ ಅಂತುಗಣಾಚಾರಿಯಪ್ಪ ಕಳಚೆತ್ತಿಯಾಂಡ ನೀನಿಯಮಮಂ ಬಿಡದೆ ಶಿವಲಿಂಗಪೂಜಾ ಪರನಾಗಿ ಜಂಗಮಪ್ರೇಮಿ ಯೆನಿಸುತ್ತ ಮಿರ್ದನಂತುಮಲ್ಲದೆಯುಂ॥

ಕಂ॥ ಘನದೂಷಕಮರ್ಥನನೆಂ। ದೆನಿಸುವ ಕಳಚೆತ್ತಿಯಾಖ್ಯ ಮಾ
ಹೇಶನತ। ನ್ಮನಮಂನೋಡಲ್ಕಭವಂ। ಜಿನದದಿನುದ್ದಂಡವೇಷದಿಂಬೇ
ಳ್ಪಂದಂ॥ ೬।

ವ|| ಅಂತು ಖಂಡಪರಶು ಮರ್ತ್ಯರೂಪಂದಾಳ್ದತಿ ಪ್ರಚಂಡವೃತ್ತಿ ಯಿಂ ಬಂದು ಕಳಚೆತ್ತಿಯಾಂಡರ ಸಮೀಪದೊಳ್ನಿಂದಿರ್ದು ದ್ರೇಕದಿ ನಿಂತೆಂದಂ|

ಚಂ| ವಸುಧೆಯುಜೋಳರಂಬಿಡದೆ ಜಂಗಮಲಿಂಗವೆನುತ್ತೆ ಕಂಡು ನೀಂ ಮುಸಣದೊಳಿರ್ದ ಮಂಗಳನೆನಿಪ್ಪ ಕಪಾಲಿಯನೀಶನೆಂದು ಪೂ ಜಿಸಿಮರುಳಾಗಿ ಪೋದೆಯಕಟೆಂದೆನುತೇಳಿಸಿ ನಿಂದಿರಲ್ಕೆ ಕೋಪಿಸಿಕ ಳಚೆತಿ ಯಾಂಡನಲಗಂ ಸೆಳೆದೆರ್ದೊ ಡುಮೇಶ ನೋಡಿದಂ| ೭

ವ| ಅಂತುಕುಟಿಲ ವೇಷದೀಶ ನೋಡುತಿರ್ಪಾಗಳ್|

ಕಂ|| ಸಿಡಿದೆನಿತನೋಡಿದೊಡೆಬೆಂ| ಬಿಡೆನಾಂನಿಲ್ಲಿಲ್ಲಿ ಪೋಪೆಯೆನು ತಟ್ಟೆಕರಂ| ಜಡಿದು ಕಳಚೆತ್ತಿಯಾಂಡಂ | ಪಿಡಿಯೆಶಿವಂನಗುತೆ ರೂಪು ದೋರಿದನಾಗಳ್| ೮|

ಉಪೇಂದ್ರವಜ್ರ|| ಸ್ರೋತಸ್ವಿನೀ ಕೈರವಬಂಧುಪಾವಕಂ|ವಾತಾ ಶನಂ ಭಸ್ಮಮತೀವವೇದಾ|ತೀತಂ ಸುಪಂಚಾಸ್ಯದಿ ಪತ್ತುತೋಳ್ಗಳಿಂ ಭೂತೇಶನೊಪ್ಪಿರ್ದ ನತಿಪ್ರಮೋದದಿಂ| ೯|

ವ|| ಅಂತೊಪ್ಪುವದಿವ್ಯಮೂರ್ತಿಯಂ ಕಂಡು ಬೆಚ್ಚಿ ಬೆದರಿಬಾಯ್ಬಿ ಡುತಕಟಕಟೆನ್ನಯ ಗಣಾಚಾರವಶೀಲಂ ನಿನ್ನ ಮೇಲೆ ಯಾಯಿತ್ತೆಯೆ ನುತಂ ಪರಿಚ್ಛೇದಿಸಿ ತನ್ನಂತಾಂ ಕೊಂದು ಕೊಳಲೆಳಸಿ ಗೋಣಿಂಗೆ ಕಾರಮನಿಕ್ಕಿ ಸೆಳೆವಕೈಯಂ ಪಿಡಿದು ಕಾರುಣ್ಯಾಕರನಪ್ಪ ಶಿವಂಮಾಣಿಸಿ ಬೋಳೈಸುತ್ತಿರಲಾ ಕಳಚೆತ್ತಿಯಾಂಡ ವೀರಮಾಹೇಶ್ವರಂ ಕಿಂಕರ್ವಾ ಣತೆಯಿಂ ಚರಣದೊಳ್ಪೊರಳ್ದಾನಂದಾಶ್ರು ಪಯಃ ಕಣಂಗಳ್ಪೊಳೆಯುತ್ತ ತಿಪರವಶೀಭೂತನಾಗಿರ್ಪಾಗಳ್ ನಂದಿನಾಥಂಗಂದಿಂತೆಂದಂ||

ಕಂ|| ಮನಮಂ ನೋಡಲ್ಕೆಂದಾಂ| ಬಿನದದಿನಿಂದಿಸಿ ದೊಪಟ್ಟ ತನ್ನ ಯಭಲಕೆ| ನ್ನನೆಪಿಡಿದವೀರನಿವನೆಂ| ದೆನುತಂ ಕೊಂಡಾಡಿ ಪೊಗಳ್ದ ನಗಜಾರಮಣಂ| ೧೦|

ವ|| ಎಂದು ಕೊಂಡಾಡುತ್ತಂ ಕಳಚೆತ್ತಿಯಾಂಡವೀರ ಮಾಹೇಶ್ವರ ನಂ ತಾಂ ಧರಿಸಿದ ದಿವ್ಯಪುಷ್ಪಕದೊಳ್ಕುಳ್ಳಿರಿಸಿ ನಿಯಾಮಿಸಿದಾಗಳ್|

ಕಂ|| ಕಳಚೆತ್ತಿಯಾಂಡ ಸಹಿತಂಜಳರುಹಸಖನಂತೆ ಪೊಳೆವಹೇಮ ವಿಮಾನಂ| ಕಳಧೌತಗಿರಿಗೆ ಘನಮುಂ| ಗಳವಾದ್ಯಂ ಮೊಳಗಲಿರದೆಬಂ

ದುತ್ತಾಗಳ್। ೧೧।

ವ॥ ಅಂತುಬಂದಕಳಚೆತ್ತಿಯಾಂಡಂ ಬೆರಸುಸಕಲಗಣ ಸಮೇತನಾನಂದದಿಂ ದೋಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್।

ಕಂ। ದೂಷಕಸಂಕುಳಶರನಿಧಿ। ಶೋಷಣಕಳಚೆತ್ತಿಯಾಂಡಭಕ್ತಂ ಗತಿಸಂ। ತೋಷದಿಗಣಪದವಿತ್ತಹಿ। ಭೂಪಶಿವಂಮೆರೆವುತಿರ್ದನಾನಾಥಿಕೆಯೊಳ್॥ ೧೨।

ದಗ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ಕಳಚೆತ್ತಿಯಾಂಡಮಾಹೇಶ್ವರಕಥಾವೃತ್ತಾಂತಂಷಟ್ಚತ್ವಾರಿಂಶದಾಶ್ವಾಸಂ॥

...ಶ್ರೀ...

## ಸಪ್ತಚತ್ವಾರಿಂಶದಾಶ್ವಾಸಂ

### ಕಲಿಯ ನಾಯನ್ಮಾರರ ವೃತ್ತಾಂತಂ

ಇಳೆಪೊಗಳೆಕಲಿಯನಾರ। ಗೊರ್ಲವಿಂ ಗಣಪದಮನಿತ್ತು ಮೆರೆದ ಮಹಾಮಂ। ಗಳನಿಳಯನೆನಿಪ ಸದ್ಗುಣ, ಜಳನಿಧಿಸೋಮೇಶನೊಲ್ದು ಪಾಲಿಕೆನಮ್ಮಂ॥ ೧।

ಸರುಚಿರ ಚೋಳಾವನಿಯೊ। ಳ್ವರಮಶ್ರೀಯಿಂ ಮಹೇಶಭಕ್ತರ ನಿರಯೋ। ತ್ಕರಪಭೂಸತರದಪೆಂಪಿಂ। ತಿರುವತ್ತೂರೆಂಬಸತ್ಪುರಂಕರಮೆಸೆಗುಂ॥ ೨।

ರೇಸಿಸಿಪಪ್ರಾಟಕೋಟ। ಪ್ರಾಸಾದದನೆಸೆವಲಿಂಗನಿಳ್ಳಯುಂಪಿರಿದುಂ ಭಾಸುರತುಂ ಮಂಗಳದನಿ। ವಾಸಂತಾನೆನಿಸುತಾಪುರಂಮೆಳ್ದಿರ್ಕುಂ॥ ೩।

ಪಿರಿದುಂಪೆರ್ಮೆಯೊಳೆಸೆವಾ। ತಿರುವತ್ತೂರೆಂದೆನಿಪ್ಪ ಪುರದೊಳ್ಮಾಹೇ। ಶ್ವರಮುಖಪರ್ವಣನೆನಿಸು। ತ್ತಿರುತಿರ್ಪಂ ಕಲಿಯನಾರನೆಂಬ ಶಿವೈಕ್ಯಂ॥ ೪।

॥ ಪಿರಿದೆನಿಪರ್ಷದುನ್ನತಿಯೊಳ್ಶೈಲಜೆಳಾಶನದ್ಯೆವರ್ಧ್ಧಲ್ಗೆಯೊಳ್ಪುರಕಾಧರಂಗಭೀರತೆಯೊಳಂಬುಧಿ ಸತ್ಕಳೆಯೊಳ್ಸುಧಾಕರಂ। ಶರಣಜನಕ್ಕೆ ಸಂತಸದಿನೀವೆಡೆಯೊಳ್ಸುರಭೂಜಮೆಂದುಮು। ವರ್ಣಿಸನೆರೆಬಣ್ಣಿಸಲ್ಕಲಿಯನಾರನೆನಿಪ್ಪ ಶಿವೈಕ್ಯನೊಪ್ಪುವಂ॥ ೫॥

ವ॥ ಮತ್ತಮಾ ಕಲಿಯ ನಾರನೆಂಬಭಕ್ತಂ ತಿರುವತ್ತೂರಧಿಪತಿಯಪ್ಪ ಶಿವಲಿಂಗಕ್ಕೆ ನಾನಾವಿಧದಪೂಜೆಯುಂಮಾಡಿ ದಿನದಿನಪೊಳ್ಪಿಂಡುಗದೆಣ್ಣೆಯಂ ಸವೆಯಲ್ಕೀಶಾಜನವುಂ ಬೆಳಗುವನಿಯಮಮುಂಪಿಡಿದುಪರಮಮಾಹೇಶ್ವರನೆನಿಸುತ್ತಿರ್ದನಂತುಮಲ್ಲದೆಯುಂ॥

ಕಂ॥ ರಾಜಕಳಾವಳಿಗನೀ। ಶಾಜನಮನನೇಕ ಲಕ್ಷಮಂಬೆಳಗುತ್ತಿರ್ಪಾ ಜನನುತಮಾಹೇಶನ। ತೇಜೋಮಯಕೀರ್ತಿಪರ್ಬಿತೆಂಟುಂದೆಸೆಯಂ॥ ೬।

ಪರಿಕಿಪೊಡೀಸರಿಯೊಳ್ಸ। ತ್ಸರಮುರುವತ್ತಾಗೆ ಕಲಿಯನಾರರವಿತ್ತಂ ನಿರುತಂತೀರಿತ್ತೀಶನ। ಸುರುಚಿರ ಘನದೀಪ್ತಿಗಣ್ಣೆಗದನೇಪೊಗಳ್ವಂ॥ ೭

ಚಂ॥ ಧನಮಿನಿತಿಲ್ಲದಂತೆ ನೆರತೀರ್ದುದು ಚೋಳಧರಿತ್ರಿಯಲ್ಲಿ ನೆಟ್ಟನೆಸವೆಯಿತ್ತು ತೈಲಮುಭವಾಜ್ಞೆಯೊಳಂದು ವಿಪತ್ತಿಪತ್ತಿಮು। ನ್ನಿನನಿಯಮಂಧಿಟಂನಡೆ ಯದ್ಯೈದುಪವಾಸಹುದಾಗೆಚಿತ್ತದೊ। ಳ್ನೆನೆದಗಿದಾಡಾಡಿದಂ ಕಲಿಯನಾರನ ಪಾರಕಳಾವಿಶಾರದಂ॥ ೮।

ವ॥ ಅಂತುಕಲಿಯನಾರಂ ಮನದೊಳ್ನೆನೆದಿಂತೆಂದ॥

ಕಂ॥ ಹರಹರಮರುಳಾದೆಂಮು। ಚ್ಛರೀರದರುಣಾಂಬುವೆಂಬ ತೈಲಮಿರಲ್ಕೇ। ಶ್ವರವರದೀಪ್ತಿಯ ನಿಯಮಂ । ಪಿರಿದೆಡೆವರಿಯಿತ್ತೆ ನುತ್ತಮರುಗಿದನಾಗಳ್॥ ೯।

ವ॥ ಅಂತುಕಲಿಯನಾರಂ ತನ್ನತನುವಿನೊಳ್ತೈಲಮಂ ಕಂಡತನ್ನಲಿಂಗೆ ತಾಂನೆರೆಮೆಚ್ಚಿ ಪಿಗ್ಗುತ್ತಿರ್ದ ವೀರಾಳಾಪದಿಂಪೊರಮಟ್ಟುಲಿಂಗಗೇಹಕ್ಕೆಯ್ತಂದು ಪಳದಿಯಚಲ್ಲಣಮಂಬಿಗಿದುಟ್ಟು ಸರ್ವಾಂಗದೊಳ್ವಿಭೂತಿಯನಿಟ್ಟು ರುದ್ರಾಕ್ಷಾಭರಣಮಂತೊಟ್ಟು ತಳಪತ್ತಿಪೊಳೆವಕೂಳಲಗನಲ್ಲಂಪಿಂಪಿಡಿದುಕೈಗೈದು ಶಿವಾರ್ಚನೆಗುದ್ಯುಕ್ತನಾಗಿ॥

ಕಂ॥ ವರಜಲವಿಧಿಮಜ್ಜನಕ್ಕರೆ। ದುರುಪರಿವ ಳಕಮುಸುಮಚಯದಿನರ್ಚಿಸಿಪಳಿಕಾ ಗಿರಿಶಂಗೆತನ್ನನಿಯಮದ। ಪಿರಿಪಾರತಿಯೆತ್ತಲೆಂದು

ಗವುತ್ತಿರ್ದರ್ಗಂ॥ ೧೦।
ಅನಧರಿಸಗಜಾಪತಿಯಿ। ಸ್ನವಯುವದೊಳ್ದೀಪ್ತಿಗಣ್ಣೆಯಂ ದಿಟಕಿಂ
ತೋ॥ ಱುವೆನೆನುತೆ ಕಲಿಯನಾರಂ। ಜವದಿಂಬೊಬ್ಬಿರಿವು ತಲಗನೆತ್ತಿದ
ನಾಗಳ್॥ ೧೧॥
ಚಂ॥ಸೆಲಿಗಳಸಂದ ನೆತ್ತಿಮಿದಿದಾದಿಸರಿದು ಱಿಮ್ಮವನೆತ್ತರಿಂದೆಕೋ।ಸ್ಪರಿ
ಗಪೊಳರ್ದ ಬತ್ತಿಗಳರಾಶಿಗಳಂ ನೆನೆಯಿಕ್ಕಿ ಮುನ್ನಿನೋಲ್। ತರ
ತರದಿಂದೆ ದೀಪ್ತಿಗಳನಾಗಳೆಪೊತ್ತಿಸಿತಾಂನಿವಾಳಸು। ತ್ತರರೆಯಿಸುತ್ತ
ಮಾಕಲಿಯನಾರನುಮಾಪತಿನೋಡಲೊಪ್ಪಿದಂ॥ ೧೨॥
ವ॥ ಮತ್ತಮಾಕಲಿಯನಾರಂ ನೇಮದಬತ್ತಿಗಣ್ಣೆಯಿಲ್ಲದೆತನ್ನರುಧಿರ
ದಿಂ ಪೊತ್ತಿಸಿರ್ದ ಮೊಲಿದೀವಿಗೆಗಳೊಪ್ಪಿರ್ದುವೆಂತೆಂದೊಡೆ
ಕಂ॥ ರತ್ನಾಕರೆನೊಲವಿಂಬರೆ। ರತ್ನಂಮಿಗೆಭಕ್ತಿಯಿಂ ಶಿವಂಗರ್ಪಿಸಿ
ದಾ। ರತ್ನಸಮೂಹಮು ತಾನೆಸೆ। ನೂತ್ನಜ್ಯೋತಿಗಳೆಪರ್ಬಿ ಬೆಳಗಿದು
ವಾಗಳ್॥ ೧೩॥
ವ॥ ಅಂತುತೊಳಗುವ ದೀಪ್ತಿಗಳಬೆಳಗಿನೊಳ್ಮನ ದನುರಕ್ತಂಪೊಣ್ಮಿ
ತ್ತಂಬಂತೆ ಕಲಿಯನಾಳಂ ತನುವಿಂದುಣ್ಮುವರಕ್ತದಿಂಕೆಂಪುವೆತ್ತು ಪು
ವಲಗನೆತ್ತಿನರ್ತಿಪ್ಪಾಗಳ್॥
ಕಂ॥ ರೌದ್ರರಸಮೂರ್ತಿಯಾಭ ಕ್ತ್ಯುದ್ರೇಕದಿನೆಸೆವಕಲಿಯನಾ
ರಗೋಲವಿಂ। ದದ್ರಿರಿಪುಪೊಗಳುತಿರಲಾ। ರುದ್ರಂಮಿಗೆ ಮುಚ್ಚಿಮೂ
ರ್ತಿಯಂತೋರಿಸಿದಂ॥ ೧೪।
ಜಡೆಯನದಿಫಣಿಯಚಂದ್ರಂ।ಕಿಡಿಗಣ್ಣುರಗೊರಲಹೀಂದ್ರಕುಂಡಲ
ಯುಗ್ಮಂ। ಕಡುಮೆರೆವೆಯ್ದು ಮೊಗಂಗಳ್। ನಿಡುದೊಳ್ತೊತ್ತ ಸೆಯ
ಲೊಪ್ಪಿದಂಗಿರಿಜೇಶಂ॥ ೧೫।
ವ॥ ಅಂತೊಪ್ಪುವಗಿರಿಜೇಶನದಿವ್ಯ ಮೂರ್ತಿಯಂಕಂಡುಕಲಿಯನಾ
ರನುರ್ಬಿ ಪರ್ಚಿಪೆಗ್ಗತ್ತಂಚರಣಂಗಳೊಳ್ಪೊರಳ್ದಾನಂದಾ ಶ್ರುಗಳ್ಸುರಿ
ವುತ್ತಂ ಪರವಶೀಭೂತನಾಗಿರ್ಪಾಗಳ್।
ಕಂ॥ ಕರುಣದಿನೆತ್ತಿಶಿವಂಕು। ಳ್ಳಿರಿಸಿಕರಾಂಭೋಜದಿಂದೆಮೆಯ್ದಡ
ವುತ್ತಂ। ಕರದಿಂದೆಬೋಳವಿಸಿತ। ಚ್ಚರಣನಕಲಿತನ ವನಂದುನಂದಿಗೆ
ಪಡಿದಂ। ೧೬।

ನಿಯಮದತ್ಯೆಲಂತೀದೊರ್ಡೆ| ಭಯಮಿಲ್ಲದೆತನ್ನ ರುಧಿರದಿಂದೀಪ್ತಿಗ
ಳಂ| ನಯದಿಂಬೆಳಗಿದ ನೆನಲಾ| ರಯದಿನಾತನ ಪೋಲ್ಸಮಾನರೆಂದಂಗಿ
ರಿಕಂ|| ೧೭|

ವ|| ಎಂದುಪೊಗಳ್ದು ಕೊಂಡಾಡುತ್ತಂತಾಂಬರಿಸಿಕದಿವ್ಯವಿಮಾನದೊ
ಳ್ಕಲಿಯನಾರರಂ ಕುಳ್ಳಿರಿಸಿ ಗಿರಿಜೆಯರಸಂನಿಯಾಮಿಸಲ್ಕಾಗಳ್||

ಕಂ|| ದಿವಿಜಾನಕರವದೊಳ್ತ್ರ|ಚ್ಛಿವಭಕ್ತಂಬೆರಸುದಿವ್ಯಪುಷ್ಪಕವತ್ತ್ಯು
ತ್ಸವದೆ ರಜತಾದ್ರಿಗನುಮಿಷ| ನಿವಹಂಪೊಗಳುತ್ತಿರಲ್ಕೆ ಬಂದುತ್ತಾಗ
ಳ್|| ೧೮|

ವ|| ಅಂತುಬಂದಕಲಿಯನಾರ ವೀರಮಾಹೇಶ್ವರಂಗೊಡಿಗಣಂಗಳ್ಪರ
ಸು ಹರುಷದಿಂದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ಕಲಿಕಲಿಯನಾರಭಕ್ತಂ| ಗೋಲವಿಂದಸ್ಖಲಿತ ಪದಮನಿತ್ತೋ
ವಿದನಿ| ರ್ಮಳಶಿವನಖಿಳ ಪ್ರಮಥಾ| ವಳಿಯೊಳ್ಪಿರಿದೊಪ್ಪುತಿರ್ದನಾ
ಸ್ಥಾಯಿಕೆಯೊಳ್|| ೧೯|

ಗದ್ಯ ಇದು ಸಕಲಸುರನಿಕರ ಮಕುಟಮಾಮಾಣಿಕ್ಯಮಾಲಾಮ
ರೀಚಿಪುಂಜರಂಜಿತ ಪಾದಪಂಕಜಶ್ರೀ ಪಾಲ್ಕುರಿಗೆರೆಯ ಪುರಾಧಿಪ ಶ್ರೀ
ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ
ಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ಕಲಿಯನಯ್ನಾರ ಮಾಹೇಶ್ವ
ರಕಥಾವೃತ್ತಾಂತಂಸಪ್ತಚತ್ವಾರಿಂಶದಾಶ್ವಾಸಂ

—ಶ್ರೀ—

## ನಾಲ್ವತ್ತೆಂಟನೆಯ ಆಶ್ವಾಸಂ

### ಕಣ್ಣಂಬುಲ್ಲ ನಂಬಿಪ್ಪುರಕಥಾವೃತ್ತಾಂತಂ

ಧಾರಿಣಿ ಪೊಗಳುತ್ತಿರೆಗಂ। ಭೀರ ಕಣ್ಣಂ ಬುಲ್ಲ ನಂಬಿಗಳಲಿತ ಪದಮಂ॥
ಕಾರುಣ್ಯದಿ ನಿತ್ತಮರೋ। ದ್ಧಾರಕ ಸೋಮೇಶನೊಲ್ದು ಪಾಲಿಕ್ಕೆನ
ಮ್ಮಂ॥ ೧॥

ಮಣಿರಂಗವೃತ್ತಂ॥ ಚೋಳಮಂಡಲದೊಳ್ಕ್ಕೆಳವುಷ್ಟೇ। ತಾಳಿದಗೆ
ರ ಜೊತವನಂಭ, ಕಾಲಯಂ ಶರಣವೃಂದಯುಲ್ಲ' ಲೀಲೆಯಿಂದೆಕ
ಣಂಬುಲ್ಲರೆಸೆದಿರ್ಕ್ಕಂ॥ ೨॥

ಕಂ॥ ಕನಕಮಯ ಕಲಶದಿಂದಂ। ಕನಕಶಿವಾಲಯದ ದೀಪಸೇವೆಕ್ಷಣಬೂ
ತೊಳಪ್ಪ। ವನತರ ಭಕ್ತಶಿರೋಮಣಿ, ಯೆನಿಸಿ ಕಣ್ಣಂಬುಲ್ಲನಂಬಿಯೆಂಬಂ
ಪೆಸರಂ॥ ೩॥

ಪರಿಭವಸೆವ ಕಣ್ಣಂಪೊನ್ನೆ। ಲ್ಪರದಿಂದಂ ಪುಣ್ಯಮಾಳಿದರ್ಕ್ಕಮನವನಿ॥
ಶ್ವರಭಕ್ತಗಿರೀವೃತ್ತ' ರದಿ ಕಣ್ಣಂಬುಲ್ಲನಂಬಿ ಯೆಂಬಂ ಪೆಸರಂ ॥೪॥

ವ॥ ಅಂತೀಪರಿಯ ಸ್ವವಸ್ಥೆಯೊಳಿರು ತ್ತೊಂದುದಿವಸಂ ಗಹನಾಂ
ತರಕ್ಕೆ ಪೋದೆಡೆಯೊಳೊಂದು ಶಿವಲಿಂಗಾಲಯಮಂ ಕಂಡೊಳಯಿಂಕೆ
ಪೋಗಿ ತಲ್ಲಿಂಗಕ್ಕೆ ಸಾಷ್ಟಾಂಗದಂಡಪ್ರಣತನಾಗಿ ಕೈಮುಗಿದೆಲೆದೇವಾ
ಇನಿತುದಿನಂ ನಾನರಿಯದೆ ಕತ್ತಲೆಯೊಳಿರುತಿರ್ದೆ ನಿನ್ನಿಂದು ಮೊದಲಾ
ಗಿ ನಿಚ್ಚನಿಚ್ಚಂ ನಾಂ ಬಂದು ಕಣ್ಣಂಬುಲ್ಲದೀಪ್ತಿಯಂ ಮಾಳ್ಪೆನೆಂದಾ ನಿ
ಯಮಮಂ ಪಿಡಿದು ಕಣ್ಣಂಬುಲ್ಲನಂಬಿ ಪರಮಸುಖದಿಂದಿರುತ್ತಿರ್ದ ನಂ
ತುಮಲ್ಲದೆಯುಂ॥

ಕಂ॥ ಪುಲ್ಲಶರರಿಪು ಸೆನಾಸಾ। ಪುಲ್ಲದಿನಲವಿಂ ಪೆಪೂಜೆಯಂ ಮಾಡಿ ಕಣ್ಣಂ।
ಬುಲ್ಲಿನ ದೀಪ್ತಿಯ ಪೆತ್ತು ತ್ತಲ್ಲಿ ಕಣ್ಣಂಬುಲ್ಲನಂಬಿ ಪೆಸರಿಂದಿರ್ದಂ॥ ೬॥

ವ॥ ಅಂತೀಪರಿಯೊಳ್ನಿಚ್ಚನಿಚ್ಚಂ ತಾಂ ಕೊಂಡು ಪೋದ ಕಣ್ಣಂಬುಲ್ಲ
ಪೊರೆಗಳಿಂ ದೀಪ್ತಿಗಳಂ ಬೆಳಗಿ ತಲ್ಲಿಂಗಕ್ಕೆ ಪೂಜೆಯಂ ಮಾಡಿ ನಲಿದಾಡಿ
ಪಾಡಿ ಬೆಳಗಪ್ಪನ್ನೆವರಂ ಕಣ್ಣಂಬುಲ್ಲನಂಬಿ ಮಾಹೇಶ್ವರಂ ಜಾಗರದೊ
ಳ್ತನ್ನ ನಿಯಮಮಂ ಪಿಡಿದು ಪಲವುವತ್ಸರ ಮಿರುತಿರ್ದ ನಂತುಮಲ್ಲದೆ
ಯುಂ॥



ಕಂ॥ ಇರುತಿರುತೊಂದು ದಿನಂ ದಿನ। ಕರನಸ್ತಮಿಸಲ್ಕೆ ತನ್ನ ನೇಮ

ದಪುಲ್ಲಂ| ಭರದಿಂತಂದಾಶಿವಮಂ| ದಿರದೊಳ್ದೀಪ್ತಿಯ ನೆಬೆಳಗಿದಂ ತ
ಗ್ಭಕ್ತಂ|| ೬|

ವ|| ಅಂತಾಭಕ್ತಂ ಕಣಂಬುಲ್ಲಿನ ಬೆಳಗಿನೊಳ್ವಿಭೂತಿ ರುದ್ರಾಕ್ಷಂಗ
ಳಂತಾಳ್ದಾಗಳ್||

ಚಂ|| ಪರಿಮಳಪುಷ್ಪಸಂಕುಳದಿ ನರ್ಚಿಸಿ ಭಕ್ತಿಮಿಗಲ್ಕೆನರ್ತಿಸುತ್ತಿ
ರೆ ಮನೆಮಂನಿರೀಕ್ಷಿಸಲುಮಾಪತಿ ತನ್ನಯುಮುಂದೆ ಬೆಳ್ಪನಾ| ಳ್ದರಿವು
ತಮಿರ್ಪ ಪುಲ್ಲಪೊರೆಯಂಬೆ ಳಗಾಗದಮುನ್ನಮೆಯ್ದೆನಿ| ರ್ಭರಪೊಳೆ
ತೀಚೆ –ದೀಪ್ತಿನ ಸುಮಾಸುತಿರಲ್ ಶಿವಭಕ್ತನಳ್ಕಿದಂ|| ೭

ಕಂ|| ಬೆಳಗಾಗದಮುನ್ನಮೆಪು| ಲ್ಫಳಿಲನೆತೀರಿತ್ತು ದೀಪ್ತಿನೆರೆಪೋ
ದೊಡೆಮಂ| ಗಳೆಯರ ಸನೆಂತು ತಾಂಕ| ಣ್ತಲೆಯೊಳಗಿರ್ಪನೆನುತಮು
ರೆ ಚಿಂತಿಸಿದಂ|| ೮|

ಮನದೊಳ್ಚಿಂತಿಸುತಾಂಕಂ| ಡೆನುಪಾಯವನೀಗಳಿಂತು ಪುಲ್ತಿ
ದೆರ್ಪಮೇ| ನನಿಶಂತ್ಯಲದಿ ಬಳೆಧ್ವೀ| ಘನಚೆಕುರದದೀಪ್ತಿಯಂಶಿವಂ
ಗರ್ಪಿಸುವೆಂ|| ೯|

ವ|| ಎಂದುಕಣಂಬುಲ್ಲಸಂಬಿ ತನ್ನಮನದೊಳ್ನಿಶ್ಚಯಿಸಿ ನಿಂದಿರ್ದಾ
ಗಳ್||

ಚಂ|| ಒದವಿದಭಕ್ತಿಯಿಂದೆ ನಿಜಮಸ್ತಕಕೇಶಪ ನೊಬ್ಬಿಸಲ್ಕೆಯು|
ಟ್ಟದಮಿಗೆಸೀಳ್ದು ಸುತ್ತಿಯುಬಚಿಂಪೆನುತಾದುರ್ಪ ಮಹೇಶನೋಡನು|
ತ್ತದಿರದೆ ಚುರ್ಚಿ ದಂಥಗಿಲು ಥಂಗಿಲುಮುಂಗರೆವುತಿರಲ್ಕೆಸನ್ಮದದಿ
ನಿವಾಳಿಸುತ್ತಗಿದು ಘೋಯೆಸುತಿರ್ದ ನುಮೇಶಕಿಂಕರಂ|| ೧೦|

ಮತ್ತಂ||

ಕಂ|| ಘುರಿಘುರಿಲಿನೆ ತಲೆನವಿತೆ| ಯ್ದುರಿದುಶಿರಂಪೊತ್ತಿಪೋಗೆಯ ಛಿಳಛಿ
ಳಿಲೆನಲ| ಬ್ಬರಿಸುತೆ ನರ್ತಿಪಶರಣಂ| ಗುರುಕೃಪೆಯಿಂಶಂಭುರೂಪು
ಪೋರಿದನಾಗಳ್|| ೧೧|

ಜಟೆಗಳ್ಸುರನದಿಚಂದ್ರಂ| ನಿಟಲದಕಣ್ಣಣಿವಿಭೂತಿಕರಿವರಚರ್ಮಂ
ಸ್ಫುಟಮಾಗಿರಂಜಿಸಲ್ಧೂ| ರ್ಜಟಿ ದಶಭುಜ ಪಂಚಮುಖದಿ ನೊಪ್ಪಿ
ದನಾಗಳ್|| ೧೨|

ವ|| ಅಂತೊಪ್ಪುವ [illegible] ಮಹಾಜ್ಯೋತಿರ್ಮ

ಯನಾಗಿಪ- ಕಣಂಬುಲ್ಲನಂಬಿಮಾಹೇಶ್ವರಂ ಭಯಭಕ್ತಿಯಿಂ ಚರಣ ದೊಳ್ಬೀಳ್ವೊಗೆಡೆದು ಪರವಶನಾಗಿರ್ಪಾಗಳ್ ಶಿವಂ ಕಾರುಣ್ಯದಿಂ ಪಿಡಿದೆತ್ತಿ ಕುಳ್ಳಿರಿಸಿತನ್ನ ಮೃತಹಸ್ತದಿಂ ಮಸ್ತಕವಂ ನೇವರಿಸಿಮೈದಡವಿಬೋಳೈ ಸುತ್ತಂ ನಂದಿನಾಥಂಗಿಂತೆಂದಂ||

ಕಂ|| ಒಲವಿಂತನ್ನಯನೇಮದ| ಫುಲುಮುರಿದುಕಿ ತೀರೆಕಂಡುರಶಾತ್ರಿ ಯೊಳನಗಂ| ತಲೆನವಿರನುರುಪಿ ಬೆಳಗಂ| ಸಲೆಮಾಡಿದಿವಂಗ ದಾಸರ್ ಮಾನಂಧರೆಯೊಳ್|| ೧೪|

ವ|| ಎಂದುಕೊಂಡಾಡುತ್ತಂ ತಾಂಬರಿಸಿದದಿವ್ಯ ವಿಮಾನದೊಳ್ಕಣಂ ಬುಲ್ಲನಂಬಿಯುಂ ಕುಳ್ಳಿರಿಸಿಶಿವಂ ನಿಯಾಮಿಸಲ್ಕಾಗಳ್||

ಕಂ|| ಅನಿಮಿಷರು ಘೋಯೆನುತಿರೆಭೂ| ವಿನುತಕಣಂಬುಲ್ಲನಂಬಿ ವೆರ ಸತಿಭರದಿಂ| ಘನಮಣಿಪುಷ್ಪಕವಿರದ| ತ್ಯನನಯದಿಂ ರಜತಗಿರಿಗೆಬಂ ದುತ್ತಾಗಳ್|| ೧೮|

ವ|| ಅಂತುಬಂದಕಣಂಬುಲ್ಲನಂಬಿ ವೆರಸು ಗಣಂಗಳ್ಸಹಿತೀಶ್ವರನೋ ಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ|| ಗಂಧರ್ವರ್ಪೊಗಳಲ್ಸುರ| ಸಿಂಧುಕಣಂಬುಲ್ಲನಂಬಿಮಾಹೇಶಂ ಗಂ. ಸೀಂಧ.ರವದನನಪದವಿ| ತ್ತಂದಾಪುರವಿಜಯ ನೆಸೆದನಾಸ್ಥಾಯಿಕೆ ಯೊಳ್|| ೧೫|

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಕಂಜರಂಜಿತಪಾದಪಂಕಜಶ್ರೀ ಮತ್ಪುಲಿಗೆರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ ಷಷ್ಟಿಪುರಾತನರ ಚಾರಿತ್ರದೊಳ್ಕಣಂಬುಲ್ಲನಂಬಿ ಮಾಹೇಶ್ವರ ಕಥಾ ವೃತ್ತಾಂತರ ಅಷ್ಟಚತ್ವಾರಿಂಶ ದಾಶ್ವಾಸಂ||

—ಶ್ರೀ—

## ನಾಲ್ವತ್ತೊಂಭತ್ತನೆಯ ಆಶ್ವಾಸಂ
## ಕಡವೂರಿ ಕಾರಿಗಳ ವೃತ್ತಾಂತಂ

ಕಂ॥ ಘನಶಗಣಮುಖಕಮಲರವಿ, ಯೆನಿಸುವ ಕಡವೂರಕಾರಿಗಕ್ಷ್ಮೆಯುಪದಮಂ| ಮನವೊಳ್ಸತ್ತಾಪದಮಾಸು| ವಿನನಿಧಿಸೋಮೇಶನೊಲ್ದು ಪಾಲಿಕೆನಮ್ಮಂ॥ ೧|

ನುತಚೋಳೋರ್ವರೆಯೊಳ್ವಿ| ಶ್ರುತಯಶದಿಂ ಭಕ್ತಜನದಿ ಶಿವಮಂದಿರದಿಂ| ದತಿರಂಜಿಸುತಂ ಪಿರಿದು| ನ್ನತಿಯಿಂ ಕಡವೂರನಿಪ್ಪ ಸತ್ಪುರವಿರ್ಕುಂ॥ ೨

ಪಿರಿದೊಪ್ಪುವ ತತ್ಪುರದೊಳ್| ಪುರಮಂ ನವಭೃಂಗಿನಾಥ ನೆನಿಸುತ್ತಂ ಸ| ಚ್ಚರಣರಮೇಳದೊಳಿರ್ಪಂ| ನಿರುತಂ ಕಡವೂರ ಕಾರಿಯೆಂಬಶಿವೈಕ್ಯಂ॥ ೩॥

ಪರಿಹಾಸಚರ್ಚೆಯಿಂ ಭ| ಕ್ತರನಾನಗಿಸುತ್ತಮಿರ್ಪ ನೇಮವನಾಂತೀ| ಸ್ವರನಂ ಬಿಡದರ್ಚಿಸುತಾ, ದರದಿಂ ಕಡವೂರ ಕಾರಿಯಿರ್ಪಂ ಜಸದೊಳ್॥ ೪|

ಕಂಡಶಿವೈಕ್ಯರ್ನಗುತಿರೆ ಚಂಡಿಕೆ ಯುಂ ಕಿವಿಯು ಕೊಡಕೆಯುಂ ನಾಸಿಕಮುಂ ಮೊಂಡಿಸಿಕುಣಿಸುತ್ತಂ ಗುಣ| ಮಂಡನ ಕಡವೂರ ಕಾರಿಬಿನದದಿನಿರ್ಪಂ॥ ೫॥

ವ|| ಅಂತೀಪರಿಯ ನಿಯಮಮಂ ಪಿಡಿದಿರುತ್ತಮೊಂದು ದಿವಸಂ ಸಿದ್ಧನಿವದೊಳಿರ್ಪ ಶರಣರ ಸಭೆಗಾನಂದದಿಂ ಬಂದು ಶರಣಾರ್ಥಿ ಯೆನುತ್ತಂ ಕುಳ್ಳಿರ್ದು ಕಡವೂರಕಾರಿ ಪರಿಹಾಸಚರ್ಚೆಯಿಂದಿರು ತಿರ್ಪಾಗಳ್ ಶಿವಭಕ್ತರನಲ್ಲದೆ ಕೇಳಿಸೆನೆಂಬ ಶಿವದಾಸನಪ್ಪ ನರ್ತಕನೊರ್ಬಂ ತನ್ನ ಸಂಪ್ರದಾಯಮುಂ ಬೆರಸು ಬಂದು ಪೊಡಮಟ್ಟು ನಿಂದಿರ್ದು ಕಹಳೆಗಿರುಗಟೆ ತಾಳಕಂಸಾಳವಾದ್ಯ ರಚನೆಗಳುಂ ಸಂಭ್ರಮದಿಂ ತೋರುತಿರ್ಪವಸರದೊಳ್ |

ಕಂ| ತನುವಿನವಿಭೂತಿಮೂಗಿನ| ಕೊನೆಯೊಳ್ಮೂರಿ ದಾಡೆ ತಿರ್ಪ ರುದ್ರಾಕ್ಷೆಗಳಂ| ಘನಹಾಸ್ಯ ರಸಮನೊದವಿಸು| ತನುಪಮ ಕಡವೂರ ಕಾರಿಯಿರ್ದನದಾಗಳ್॥ ೬॥

ವ| ಅಂತು ಜಟ್ಟಿ... ಕಡವೂರ ಕಾರಿ... ಜನಮಂ ನಗಿಸು

ತ್ರಿಪುರಲಕ್ಷ್ಮೀದೇವಿ ಸಂಭ್ರಮಮಮೆಂದೊಡಿದೆ ನೋಡೆಯ ಕೇಳ್ದ ಪರಿಯಿಂ
ದು ಕೇಳಿಸಿದಪೆನೆಂಬ ನರ್ತಕನಿಂತೆಂದಂ||

ಮ|| ಶರಣೌಘಂ ದಿಟವಿಂದು ಕೇಳ್ವನಟಕೇಳ್ಳಿನ್ನೆಂದು ಕೇಳಿಪ್ಪೆ
ನಂ| ಬೆರಡೆಂದುಂ ಘಟಿಯಿಪ್ಪುದಲ್ಲ ವೊಡೆಯಾರ್ಚಿನತ್ತೆಸಲಿಂದೋ ತು
ಸ್ತಿಂ| ನಿರುತಂ ಕೇಳಿಸು ನಾಳೆಯೆಂದು ನುಡಿದಾ ಮಾಹೇಶ ಸಂದೋಹ
ಮಂ, ಭರದಿಂದಂ ಕಡವೂರ ಕಾರಿ ನಗಿಸುತ್ತಿರ್ದಂ ಮಹೋತ್ಸಾಹದಿಂ|

ವ| ಅಂತೀಪರಿಯೊಳ್ ಶರಣಜನಮುಂ ನಗಿಸುತ್ತಾ ನಗೆಯ ಸೊಬ
ಗಂ ಶಿವಂಗರ್ಪಿಸುತಂ ಕಡವೂರ ಕಾರಿ ಮಾಹೇಶ್ವರಂ ಸದ್ಭಕ್ತಿಯಿಂದಿ
ರುತಿರಲ್ಕಿವಂ ಕೈಕೊಂಡಾನಂದದಿಂ ತಚ್ಛಿವೆಗೆ ಕೈಲಾಸಸ್ಥಾನದೊಳಿಂ
ತೆಂದಂ|

ಕಂ| ಜಗದೊಳ್ನಗೆನೆಂಬ ಪರಂ| ನಗಿಪಂ ಗಡ ಭಕ್ತನೊರ್ಬನವನಂ
ನೋಡ| ಲ್ಕಗರಾಜತನೂಭವೆ ನೀ| ಟ್ಟಗೆ ಪೋಪಂ ನಾವೆನುತ್ತು ಮಿರ್ದಂ
ಗಿರಿಶಂ| ೮|

ವ| ಅಂತೆರ್ದ ನಗಜೆವೆರಸು ಕೈಲಾಸಾದ್ರಿಯಂ ಪೊರಮಟ್ಟು ಚೋಳ
ಮಂಡಳಮಂ ನಿರೀಕ್ಷಿಸುತ್ತಂ ಬಂದು ಕಡವೂರಂ ಪೊಕ್ಕಾಗಳ್|

ಕಂ| ಶರಣಸಭಾಜನವತ್ಯಾ| ದರದಿಂ ಕಡವೂರ ಕಾರಿ ನಗಿಸುವ ಬಿನ
ದ| ಕ್ಕೆರುಚಿತ್ತವಿತ್ತು ಮುದದಿಂ| ದಿರಲಿತ್ತಲ್ಲಾಲಿ ಕುಹಕವೇಷದೆ
ಬಂದಂ|| ೯|

ಭಸಿತದಿರುದ್ರಾಕ್ಷೆಗಳಿಂ| ಪೊಸಕಾಷಾಂಬರದಿ ಮಿಸುಪಜಡೆಯಿಂದೊ
ಪ್ಪಿ| ತ್ತುಸವಾಕ್ಷ ನಗಜೆವೆರಸು| ಲ್ಲಸದಿಂ ಪರಜಂಗಮಾಕೃತಿಯೆ ಹೊಳೆಳ್ತಿಂ
ದಂ| ೧೦|

ವ|| ಅಂತು ಶಿವಂ ಗಿರಿಜೆ ವೆರಸು ಕುಹಕವೇಷದಿಂ ಜಂಗಮವಾಗಿಬಂ
ದು ನೋಡುತ್ತಿರಲ್ಕಲ್ಲಿರ್ದ ಶರಣರ್ಕಂಡು ಶರಣ ರ್ಥಿಯೆನುತ್ತೆದ್ದಿರ್
ಪೋಗಿ ಕೈಗೊಟ್ಟು ತಮ್ಮ ನಡುವೆ ಕುಳ್ಳಿರಿಸಿ ಸನ್ಮಾನಿಸುತ್ತಿರ್ಪಾಗಳ್

ಕಂ|| ಸುರಲತೆ ಪೊರೆಯೊಳ್ಸೊಗಯಿಪ ಹರಿಚಂದನದಂತೆ ರಮಣಿವೆರ
ಸೊಪ್ಪುವಭಾ| ಸುರಜಂಗಮ ಲಿಂಗಕ್ಕಾದರದಿಂ ಕಡವೂರ ಕಾರಿ ಯಾ
ನತನಾದಂ||

ವ. ಅಂತಾ ದಂಪತಿಗಳಪ್ಪ ಜಂಗಮಂಗಳೆ ಶರಣಾರ್ಥಿಯೆಂದೆನುತ್ತಂ

ಕೈಮುಗಿದು ಪಿಂಮೆಟ್ಟಿ ನಿಂದಿರ್ದು ತಚ್ಛರಣಸಭಾಜನಮಂ ನಾಸಾಪ ಠಿಯಿಂ ನಗಿಸುತ್ತಾ ನಗೆಯ ಸೋಗಸಂ ಕಡಪೂರಕಾರಿ ಶಿವಂಗರ್ಪಿಸು ತಿರ್ಪಾಗಳ್।

ಕಂ। ಪರಿಹಾಸಚರ್ಚೆಗೆಲ್ಲಾ। ಶರಣರ್ನಗುತಿರ್ದ ರವರೊಳಾವಂಪತ್ತಿ ಗಳ್ನಿರುತಂ ನಗದಿರ್ಪನುವಂ। ಪರಿಕಿಸಿ ಕಡಪೂರಕಾರಿ ಮನದೊಳ್ನೆ ನೆದಂ॥ ೧೨

ವ। ಎಂದುಮನದೊಳೊಂದು ಪಾಯಮಂ ನೆನೆದಾಗಳ್।

ಮ। ಭರದಿಂ ಪರ್ದಿದಿರಾಗಿಪೋಗಿ ನಗೆನೆಂದಿರ್ದಿರ್ಬರಂ ನೋಡುತ್ತ। ಚ್ಛರಿಯಿಂದೇಂ ಶರಣಾರ್ಥಿ- ಯೆಂದು ನಿಮಗಿಂತೀಯುಪ್ಪೆಯರ್ತಂಗಿಯ ಪ್ಪರೆಪೇಳ್ದೀವಯಿನಲ್ಕೆನಾಣ್ಚುತಭವಂ ಗೌರೀಶಮೇತಂನಗು। ತ್ತಿರಲಾ ಗಳ್ಕಡಪೂರಕಾರಿನಗೆಯಂ ಲಿಂಗಾರ್ಪಣಂಮಾಡಿದಂ॥ ೧೩

ಕಂ॥ ಅಂತೆಸಿವಹಾಸ್ಯರಸಮಂ। ಸಂತಸದಿಂಭಕ್ತನರ್ಪಿಸಲ್ಕೈಕೊಂ ಡಾ। ಕಂತುಹರನೋತುಶರಣರ। ಸಂತತಿಬೆರಗಾಗೆ ರೂಪುದೋರಿದ ನಾಗಳ್॥ ೧೪

ಉತ್ಸಾಹವೃತ್ತಂ॥ ತರುಣಕಿರಣರೆಸೆವನಿಳಪ ಜೇಜೆಜೇಗಳೊಳ್ಕ ರಂ। ಪರಮಸುಖದಿನಿರ್ಪ ದಿವಿಜಗಂಗೆ ಬಾಲಚಂದ್ರಮಂ ಮರುತಮಿ ತ್ರನಹಿವಿಷಂ ವಿಭೂತಿಗೌರಿರಂಜಿಸಲ್। ಗಿರಿಕನ್ನೆದು ಮೊಗದಿಪತ್ತು ತೋಳ್ಗಳಂದಮೊಪ್ಪಿದಂ॥ ೧೫

ವ॥ ಅಂತಾಸಭಾಮಧ್ಯದೊಳ್ಮರ್ತ್ಯರೂಪಮನುಳಿದುನಿಜದಿವ್ಯಮೂ ರ್ತಿಗಳಂ ತೋರಿಸಿದ ಗೌರೀಪರಮೇಶ್ವರರಂಕಂಡು ಭಯಚಕಿತಹೃ ದಯನಾಗಿ ಪರಮಭಕ್ತಿಯಿಂ ಚರಣಂಗಳೊಳ್ಪೊರಳ್ದು ನಲಿವುತ್ತಿರ್ಪ ಕಡಪೂರಕಾರಿಗೋತು ಭೃಂಗಿನಾಥಪ್ರಿಯನಪ್ಪ ಗಂಗಾಧರಂ ಪಿಡಿದೆ ತ್ತಿ ಕುಳ್ಳಿರಿಸಿ ಮೆಯ್ದಡವಿ ಬೋಳೈಸುತ್ತಂ ನಂದಿನಾಥಂಗಂದಿಂತೆಂ ದಂ॥

ನಗೆನೆಂಬಫಲವನಾಂಪಿಡಿ। ದಗಜೇಂದ್ರತನೂಜೆ ವೆರಸಿಬಂದಿರ ಲಿನ್ನೆಂ। ಮಿಗೆನಗಿಸಿದ ನಿವನೆನೆಮೂ। ಜಗದೊಳ್ಕಡ ಪೂರಕಾರಿಗಾದೊರೆಥ ರೆಯೊಳ್॥ ೧೬

ವ॥ ಎಂದುಕೊಂಡಾಡುತ್ತಂ ತಾಂಬಳಿಸಿದ ದಿವ್ಯವಿಮಾನದೊಳ್ಕ,

ಸಿ ಕಡವೂರಕಾರಿಮಾಹೇಶ್ವರನಂ ಗಿರಿಜೇಶಂ ನಿಮಿಷಾವಿಸಲ್ಕಾಗಳ್
ಕಂ॥ ಬೋರೆಂಡುಕರೆವಕುಸುಮಾ। ಸಾರದಿ ಕಡವೂರಕಾರಿವೆತ ಸಂತಾಗಳ್। ಚಾರುತರಮಣಿವಿಮಾನಂ। ತಾರಾದ್ರಿಗೆಬಂದುದಮರದುಂದುಭಿರವದೊಳ್॥ ೯೩।
ವ॥ ಕಡವೂರಕಾರಿಸಮೇತಂ ಸಕಲಗಣಂಗಳ್ವೆರಸು ಗೌರೀರಮಣನೊಡ್ಡೋಗಂಗೊಟ್ಟು ಕುಳ್ಳಿರ್ದಾಗಳ್॥
ಕಂ॥ ಕಡವೂರಕಾರಿಗಾಗ। ಳ್ಕಡುನೇಹಂಮಿಕ್ಕು ದಿವಿಜನುತಗಣಪದಮಂ। ಸಡಗರದಿನಿತ್ತು ಮೆರೆದಾವೃಡನೊಲವಿಂದೊಪ್ಪುತಿರ್ದನಾಸ್ಥಾಯಿಕೆಯೊಳ್॥
ಗದ್ಯ ಇದು ಸಕಲಸುರನಿಕರ ಮಕುಟಮಹಾಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಸುಲಿಗೆರೆಯ ಪುರಾಧಿಪ ಶ್ರೀ ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳ್ಕಡುವೂರಕಾರಿ ಮಾಹೇಶ್ವರಕಥಾವೃತ್ತಾಂತಂ ಏಕೋನಪಂಚಾಶದಾಶ್ವಾಸಂ

—ಶ್ರೀ—

## ಐವತ್ತನೆಯ ಆಶ್ವಾಸಂ

### ತಿರುನೀಲಕ್ಕರ ಕಥಾವೃತ್ತಾಂತಂ

ತಿರುನಿಲನಕ್ಕ ಶಿವೈಕ್ಯಂ। ಗುರುಕೃಪೆಯಿಂ ದೇವವಿನುತಗಣಪದಮಂಕೊ। ಟ್ಟರವಿಂದಭವವಿನುತಪುರ। ಗಿರಿವರ ಸೋಮೇಶನೊಲ್ದುಪಾಲಿಕೆನಮ್ಮಂ॥ ೧।
ಚಂ॥ ವಿಲಸಿತಲಿಂಗಭಕ್ತಿಯುತವರ್ಮನೆಯೆಂದೆನಿಸಿರ್ಪಚೋಳಮಂಡಲದೊಳನೇಕ ದೀರ್ಘಿಕೆ ತಟಾಕಚಯಂ ಧವಳೇ। ಕ್ಷುವಾಟಸಂ। ಕುಲಮುರು ನಂದನಾವಳಿ ನೆಗಳ್ತೆಯುಶಾಲಿ ಯುಗಧರ್ಮಗಳ್ತನಂ। ಗೊಳಿವರಶಾಂತಿಮಂಗಳಮೆನಿಪ್ಪ ಪುರಂ ಸಮೆದೊಪ್ಪಿತೋರ್ಪುದು॥ ೨।

ಕಂ॥ ಪಿರಿದೆಸೆವಶಾಂತಿಮಂಗಳ। ಪುರವರದೊಳ್ಸಲ್ಲೀಲೆಯೊಂಪ್ಪುವೆಂಧಿತ್ತಿರ್ಪ
ನಾ, ದರದಿತಿರ್ದನೀಲನಕ್ಕಂ।ಗಿರಿಶನನರ್ಚಿಸುತನಿರ್ಪ್ಪನತಿಮುದದಿಂದಂ।

ವ॥ ಅಂತು ನಿಜಪತ್ನಿ ವೆರಸುತಿರ್ಪನೀಲನಕ್ಕಮಾಹೇಶ್ವರಂ ದಿನದಿನದೊಳ್ನಾನಾಪುಷ್ಪನಿಕರದಿಂ ಶಾಂತಿಮಂಗಳಪುರಾಧೀಶನಪ್ಪ ಶಿವಲಿಂಗಮಂ ಭಕ್ತಿಭಾವದಿಂದರ್ಚಿಸುತ ಮಿರ್ಪನಂತುಮಲ್ಲದೆಯುಂ॥

ಕಂ॥ ಒಂದುದಿನದುದಯದೊಳ್ಸಾ। ನಂದದಿನಾಭಕ್ತನೊಸೆದುತ್ತಂ
ದಂನಲವಿಂ। ಕೆಂದಾವರೆಬೆಳ್ದಾವರೆ ಪೊಂದಾವರೆಯೆಂಬ ಪಲವು ಕುಸು
ಮಾವಳಿಯಂ ೪

ವ॥ ಅಂತುನಾನಾಪರಿಯ ಕುಸುಮಂಗಳಂ ನಿಜಗೃಹಕ್ಕೆ ತಂದಿತ್ತಂ ಕೊಂಡು ತನ್ನ ಸತಿಯಪ್ಪಸಲ್ಲೀಲೆ ವೆರಸುತಿರ್ಪನೀಲನಕ್ಕಮಾಹೇಶ್ವರಂ ಶಾಂತಿಮಂಗಳ ಪುರಾಧೀಶನಪ್ಪ ಶಿವಲಿಂಗವೆಡೆಗೆಯ್ತಂದು ಸವಿನಯದೊಳ್ಪದ್ಮಾಸನದೊಳ್ಕುಳ್ಳಿರ್ದಾರ್ಘ್ಯ ಪ್ರೋಕ್ಷಣೆಯಿಂ ವಿಭೂತಿರುದ್ರಾಕ್ಷೆಗಳಂ ತಾಳ್ದಾಗಳ್॥

ಕಂ॥ ಪಿರಿದುಂಸಂಭ್ರಮದಿಂದಂ। ಶರಣಂನಲವಿಂದೆ ಮಜ್ಜನಕ್ಕೆರೆವು
ಲ್ಕಾ। ಪರಲಿಂಗದಮೇಲಣಬಂ, ಧುರಕುಸುಮದ ಪೂಜೆಯಂ ವಿಸರ್ಜಿ
ಸಿದಾಗಳ್॥ ೫

ವಿಲಸಿತಲಿಂಗದಮೆಯ್ಯೊ। ಳ್ಸಲಂಡಿಪರಿವುತ್ತಿರ್ಪಲ್ಕೆ ಸಲ್ಲೀಲೆಮಹಾಕು
ಳಚಿತ್ತೆಯಾಗಿನೋಡು। ತ್ತೆಲೆಲೇತೆಗೆತೆಗೆಯೆನುತ್ತ ಬಾಯ್ವಿಡುತಿರ್ದ
ಳ್॥ ೬

ಚಂ॥ ನೆರೆಲಲಿತಾಂಗನಪ್ಪ ಶಿವಲಿಂಗದಮೇಲೆ ಸೆಲಂದಿಬಿರ್ದ ದಾಕ್ಕ
ರೊಳಿಡರಿಂ ಪುಗಲ್ಕಳೊಗೆ ಧಳ್ಕದೆಮಾಣವೆನುತ್ತೆ ಚಿತ್ತದೊಳ್ಮರುಗಿಕ
ರಾಗ್ರದಿಂ ಪೊರಸಿಕಣ್ಬನಿಗಳ್ಸುರಿವುತ್ತೆ ಸುಯ್ದುತೂ। ಪಿರಿವುತೆಮಂತ್ರಿ
ಸುತ್ತಳಲುತಿರ್ದ ಉಮಾಪತಿಭಕ್ತೆ ದುಃಖದಿಂ॥ ೭

ಕಂ॥ ಕಡುನೇಹದಿ ತೂಪಿರಿವು। ತ್ತೊಡಲಂ ಪೊಸೆದೀಲಿಬಿರ್ದ ಪೊ
ರಳುತ್ತಿರ್ಪ।ಮಡದಿಯನಂತಾನಿಜಪತಿ, ಪ್ಯಡಭವನದೆ ಕೋಪದಿಂ
ದೆ ನೋಂಕಿದನಾಗಳ್। ೮

ವ॥ ಅಂತಃ ಶಿವಲಿಂಗದಮೇಲು ಗುಳ್ಳಿಡಿಯುಲಾತ್ತ ಪಿರಿದಳೆಂದು ನಿಜಸತಿಯಂ ಪೊರಮಡಿಸಿ [illegible]ದಕದಿಂದ ಭಿಷೇಕಮಂಮಾಡಿತಾಂತಂ

ದನಾನಾ ಪರಿಯ ಪುಷ್ಪಂಗಳಿಂ ಶಿವಲಿಂಗಕ್ಕರ್ಚನೆಯುಂಮಾಡಿಪೊಡವಟ್ಟು ನಲಿದಾಡಿಪಾಡಿ ತಲ್ಲಿಂಗಗೇಹದಿಂ ಪೊರಮಟ್ಟುಬರ್ಪಾಗಳಲ್ಲಿ ನೆರೆದಿರ್ದಶಿವಭಕ್ತರ್ಗೆ ಸಲ್ಲೀಲೆಯುಂದಿಂತೆಂದಳ್||

ಕಂ|| ಮೃದುತನುವಪ್ಪಿನ್ನಯಲಿಂ| ಗದಮೇಲೆ ಸೆಲಂದಿನೀರಿಡೇಪ್ಪಗುಳ್ಗಳ್ತಾ| ಮುದಮಿಪುವೆಂದಾಂ ಮಂತ್ರಿಸು| ಪುದನೀಪತಿಕಂಡು ತೆವರಿದಂಗೃಹದೀದಂ||

ವ|| ಎಂದುಶಿವಭಕ್ತರ್ಗೆ ದೂರುತ್ತಿರ್ಪಸಲ್ಲೀಲೆಯೆಂಬ ಸತಿಯುಂಪರಿಭಾವಿಸುತ್ತುಂ ನಿಜಗೃಹಕ್ಕೆ ತಿರುನೀಲ್ನಕ್ಕ ಮಾಹೇಶ್ವರಂಬಂದು ಶಿವಧ್ಯಾನದಿಂದಂ ತಾನಿರುಳೊಳ್ಕಣ್ಮುಚ್ಚೆ ರಲ್ಕನಸಿನೊಳ್ ಶಿವಂಬಂದಿಂತೆಂದಂ||

ಚಂ|| ಪರಮಶಿವೈಕ್ಯ ಕೇಳ್ಸೆಲದಿಯೆನ್ನಯ ಮೇಲದುನೀರಿಡಲ್ಕೆ ತೂ| ಪಿರಿಸುತೆನಿನ್ನ ಪತ್ನಿ ಎಗೆನೇಹದಿಮಂತ್ರಿಸೆನೀಂತೆರಳ್ದು ಮಾ. ಸುರದೊಳೆತಚ್ಛಿವಾಲಯದಿ ನೂಂಕಿದೆಯಕ್ಕಟ ಎನ್ನದೇಹದೊ| ಳ್ಪರಿದುಪುಗುಳ್ಗಳುದ್ಭವಿಸಿದಪ್ಪುವು ನಿಟ್ಟಪುದೆಂದನಾಶಿವಂ|| ೧೦|

ವ|| ಎಂದುಸ್ವಪ್ನಮುಖದೊಳ್ ಶಿವಂಪೇಳಲ್ಕಾತಿರುನೀಲ್ನಕ್ಕಮಾಹೇಶ್ವರಂ ಬೆಚ್ಚಿದಂತೆರ್ದು ಬೆಳಗಪ್ಪಾಗಳ್ನಿಜಪತ್ನಿಯಂ ಕರೆದೊಡಗೊಂಡು ಶಿವನಿಳಯಕ್ಕೆಯ್ತಂದೊಳಪೊಕ್ಕು ಶಿವಲಿಂಗದ ಸಮೀಪದೊಳಿರ್ದದುಂಕುಳ್ಳಿರ್ದು ನಿರ್ಮಾಲ್ಯಮುಂ ವಿಸರ್ಜಿಸಿ

ಕಂ|| ಕೈಯೊಳ್ದೀಪಿಕೆಯಂಪಿಡಿ| ದಯ್ಯೋಶಿವಮೂರ್ತಿ ನೊಂದಿತೆಂದಾಳೋಕಂ| ಗೆಯ್ವಲ್ತುಬಿಂಪುಗುಳ್ಗಳ್| ಮೆಯ್ಯೊಳಿರಲ್ಕಂಡು ಭಕ್ತೆಥೊಪ್ಪೆನೆಬಿರ್ದಳ್|| ೧೧

ವ|| ಅಂತುಬಿರ್ದ ನಿಜಪತ್ನಿಯಂಕಂಡು ಮನದೊಳ್ಬೆಚ್ಚಿ ಶಿವನೆನಗೆ ಕನಸಿನೊಳ್ಪೇಳ್ದ ಮಾತೇದಿಟಮಾದುದೆನುತ್ತುಂತಿರುನೀಲ್ನಕ್ಕಮಾಹೇಶ್ವರಂ ನಾನೇತರ್ಕೀಕೆಯಂ ಶಿವನಿಳಯದಿಂ ನೂಂಕಿದೆ ನಕ್ಕಟೆನುತ್ತುಂ ತನ್ನ ಬುದ್ಧಿಗೆ ತಾಂಖತಿಗೊಳುತಿರ್ಪಾಗಳ್ ಶಿವಂ ತದ್ದಂಪತಿಗಳ ಮೇಲೆಕರುಣವಂಮಾಡಿ ನಿಜಮೂರ್ತಿಯಂ ತೋರಲ್ಕಾಗಳ್||

ವನಮಯೂರವೃತ್ತಂ|| ಪಿಂಗಳಜಟಾಮಕುಟಚಾಪಗೆ ನೆಗಲ್ದಾ| ತಿಂಗಳನಲಂ ಫಣಿವಿಷಂ ಘಟಿತರತ್ನ| ತ್ರಿ...ದಶಭಾಹು ಪಂಚಮು

ಖವೊಪ್ಪ। ಲ್ಮಂಗಳೆಯಗಂಡನೊಲವಿಂ ದೆಸೆವುತಿರ್ದ೯ಂ॥ ೧೨।

ವ॥ ಅಂತೆಸೆವಸರ್ವಮಂಗಳಾಪತಿಯ ದಿವ್ಯಮೂರ್ತಿಯಂ ತದ್ದಂಪತಿಗಳ್ಕಂಡು ಭಯಭಕ್ತಿಯಿಂ ಪರಮಾನಂದರಸದೊಳೋಲಾಡಿ ಪದದೊಳ್ಪೊರಳ್ದು ಮೆಯ್ಮರೆದಿರ್ಪಾಗಳ್॥

ಕಂ॥ ಆಮುಗ್ಧಭಕ್ತರಂ ಸತ್ಪ್ರೇಮದಿಪಿಡಿದೆತ್ತಿ ಕುಳ್ಳಿರಿಸಿಬೋಳೈಸು। ತ್ತಾಮಹಿತಕರುಣ ವಾರಿಧಿ। ಸೋಮೇಶಂಮೆಚ್ಚಿ ನಂದಿನಾಥಂಗೆಂದಂ॥ ೧೩।

ಸೆಲದಿಯಪೆಸೆಯಿಂದೆನ್ನಯ। ಲಲಿತಾಂಗಂನೊಂದುದೆಂದು ನೋಡದಿನೆನ್ನಂ। ಸಲೆಮಂತ್ರಿಸಿದೀಭಕ್ತ। ಗೀಳೆಯೊಳಗಾರ್ಸದೃಶರೆಂದನಾಗಿರಿಜೇಶಂ॥ ೧೪

ವ॥ ಎಂದಾಮುಗ್ಧ ಭಕ್ತರಪ್ಪ ತದ್ದಂಪತಿಗಳಂ ಸಪಾಶಿವಂ ಕೊಂಡಾಡುತಿರ್ಪಾಗಳ್॥

ಕಂ॥ ಧರೆಯಂಬೆಳಗುತ್ತಂಬಂ।ದುರುಮಣಿಪುಷ್ಪಕದೊಳಾ ಶಿವೈಕ್ಯರನತ್ಯಾ। ದರದಿಂಕುಳ್ಳಿರಿಸಿ ಮಹೇ। ಶ್ವರನಾಗಳ್ನಿಯ ಮಿಸಲ್ಕೆ ಚೆಗಿದುತ್ತಾಗಳ್॥ ೧೫।

ಪೊಳಗುವದುಂದುಭಿಘೋಷಿನ। ಮಳಿಮೆಳೆಯಲ್ಮುಗ್ಧಭಕ್ತರಂ ತಳೆದಿರ್ಪ। ತೊಳಗುವಮಣಿಪುಷ್ಪಕವದು। ಕಳಧೌತಾಚಳಕೆ ಬಂದುದುತ್ಸವದಿಂದಂ॥

ವ॥ ಅಂತುನಿಜಸತಿವೆರಸುಬಂದತಿರುನೀಲ್ಕಕ್ಕ ಮಾಹೇಶ್ವರಂಗೂಡಿ ಪ್ರಮಥಗಣಸಮೇತಂ ಧೂರ್ಜಟಿಹರುಷದಿಂ ದೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಪರಮಗುಣನಿಧಿಯೆನಿಪ್ಪಾ! ತಿರುನೀಲ್ಕಕ್ಕರ್ಗೆರಮಣಿವೆರಸೊಲವಿಂದಂ। ನಿರುಪಮಗಣಪದಮಂಶಂ। ಕರನೊಲವಿಂದಿತ್ತು ಮೆರೆದನಾನಾಯಿಕೆಯೊಳ್॥ ೧೭।

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿ ಪುರಾತನರ ಚಾರಿತ್ರದೊಳ್ ತಿರುನೀಲ್ಕಕ್ಕ ಮಾಹೇಶ್ವರರ

ಥಾವೃತ್ತಾಂತಂ ಪಂಚಾಶದಾಶ್ವಾಸಂ||

...ಶ್ರೀ...

ಐವತ್ತೊಂದನೆಯಆಶ್ವಾಸಂ

ನೈಶಭಕ್ತರಕಥಾವೃತಾಂತಂ

ಘನಮಹಿಮನೈಶಭಕ್ತ। ರ್ಗನುಪಮಗಣಪದಮನಿತ್ತು ಮೆರೆದೊಪ್ಪುವ ಪಾ| ವನಮೂರ್ತಿಸತ್ಯನಿಧಿವರ| ಮುನಿನುತಸೋಮೇಶನೊಲ್ದು ಪಾಲಿಕನಮ್ಮಂ|| ೧

ಪೆಸರ್ವೆತ್ತಚೋಳಧರೆಯೊ| ಳ್ಮಸುನಿಯಕಳಸಂಗಳೀಶಭವನದಿಭಕ್ತ| ಪ್ರಸರದವರ ನಿಳಯಂಗಳ| ನೆಸೆದಿರ್ಪುದುತಿರುವನಂದಪುರಮದು ಪೆಂಪಿಂ|| ೨

ಅತಿರುವನಂದಪುರದೊಳ್| ಪ್ರೀತಿಮಿಗಲ್ನೆಯ್ದು ನವ್ಯ ದಿವ್ಯಾಂಬರಮಂ| ಭೂತೇಶನಭಕ್ತರ್ಗೆ| ತ್ತೊತ್ತೀತಿರ್ಪಂ ನೈಶಭಕ್ತನತಿಮುದದಿಂದಂ|| ೩

ಮತ್ತಮಾತಂಗೆ

ಪರಿಪೂರ್ಣಶಶಿಗೆ ಚಂದ್ರಿಕೆ| ಪಿರಿದೆಸೆವಂತೊಲ್ದುನೈಶ ಭಕ್ತರ್ಗತಿಸಚ್ಚರಿತೆ ಪತಿಹಿತವೆಯೆಂಬಾ| ವರನಾಮದಪತ್ನಿ ಯಿರ್ಪಳುತ್ಸವದಿಂದಂ|| ೪

ವ|| ಅಂತೆಸೆವಕಾಂತೆವೆರಸು ಸಂತಸದಿಂದಿರುತಂ ನೈಶಭಕ್ತಂ ತಾಂ ನೆಯ್ದು ದೇವಾಂಗವಸ್ತ್ರಂಗಳಂ ಕಂತುಹರಭಕ್ತಸಂತತಿ ಗಿತ್ತವರೇನಂ ಕುಡಿಸಿಕೊಟ್ಟಧನಮಂ ತಂದುಲಿಂಗಮೂರ್ತಿಗಳಪ್ಪ ಜಂಗಮಂಗಳ್ಗೆ ಪಿಂಗದೆ ಮನೋಭಾವದಿಂ ಬೆಸಕೆಯ್ವುತ್ತಿರ್ಪ ಸಂತುಮಲ್ಲದೆಯುಂ||

ಕಂ|| ಇಂತೀತೆರದಿಂ ಜಂಗಮ| ಸಂತತಿಗಂ ಕಾಂತೆವೆರಸು ಬೆಸಕೆಯ್ವುತ್ತಂ| ಸಂತಸದಿನೈಶಭಕ್ತಂ| ಕಂತುಹರಾರ್ಚನೆ ಯೊಳಿರುತ ಸೊಂದಂನೆಗಳ್ದಂ|| ೫

ವ॥ ಧರೆಯೊಳ್ಮನ್ನಾಪವಂನೆಯ್ದಪೊಸತೆನಿಪತ್ಯಂತಸೌಂದರ್ಯ ದಿವ್ಯಾಂ| ಬರಮಂನೆಯ್ದುಟ್ಟಮತ್ತ್ವಿಪಡತೊವೆ ನೀಡಾಡಿಪೆಂಲೋಕ ವೆಲ್ಲಂಪಿರಿದಾಶ್ಚರ್ಯಂಬಡುತ್ತಿರ್ಪನೆಗಮುಡಿಸುವೆಂ ತಾನೆನ[illegible] ಕ್ಕಾ|ದರದಿಂದಂನೈಶಭಕ್ತಂವಿಲಸಿತಗು[illegible]ದಿಂನೆಯ್ವುದ್ಯುಕ್ತನಾದಂ॥

ವ॥ ಅಂತುದ್ಯುಕ್ತನಾಗಿ ವಿಮುಳವಪ್ಪಪಟ್ಟುನೂಲಂತೆಗೆದು ಪರಿಪರಿ ಯಚಿತ್ರಪತ್ರಂಗಳ ನಾಣೆಯಂಗಳಂಕಟ್ಟಿಶ್ವೇತಪೀತಹರಿತಕೃಷ್ಣಮಾಂ ಜಿಷ್ಠಮೆಂಬಬಣ್ಣಂಗಳಂಮಾಡಿ ನ ಣ್ಪುಗೆಯ್ದಾಗಳ್॥

ಚಂ॥ ಸುರುಚಿರ ಸದ್ಗುಣಾವಳಿಗಳಿಂಪೆಮಹೋನ್ನತಚಿತ್ರಪತ್ರಪೊ
ಳ್ಕಿರಮೆಸೆಯುಲ್ಕೆ ತನ್ನ ಮನಮುತ್ಸವಮಂ ತದುಪೆರ್ಚಲೊಂದುವ| ತ್ಸರ
ಮೊಲವಿಂದೆ ನೆಯ್ದಿರದೆ ಘಟ್ಟಿಸಿನುಂಪಿಸಿ ನೈಶಭಕ್ತನೀ| ಶ್ವರನಪದಕ್ಕೆ
ವಸ್ತ್ರವರಮಾಯ್ತೆನುತಿರ್ದ ಸತೀವಹರ್ಷದಿಂ॥ ೭

ವ॥ ಅಂತೊಂದುವತ್ಸರಂ ನೆಯ್ದು ರಮ್ಯವಪ್ಪದೇವಾಂಗವಸ್ತ್ರದೊಳ್ಪಂ ನೋಡಿ ನಿಜಸತಿವೆರಸು ನೈಶಭಕ್ತಂ ಹಾರೈಸುತ್ತಿ ಭಕ್ತಿಮಿಗೆ ಮನಂ ಮುಟ್ಟೆ ಶಿವಂಗೆತಕ್ಕುದೆಂದುಸಮರ್ಪಿಸಲ್ಕಾತ್ಮಜ್ಯೋತಿನಿದರ್ಶನಮಂ ಬುದಂ ಪ್ರತಿಷ್ಠಿಸುವಾಗಳ್॥

ಕಂ॥ ಕಿರುಗೆಜ್ಜೆಗಳೊತ್ತರಧಿಂ| ಮಿರುಗುವಪುಲಿಪೊವಲ ಚೆಲ್ಲಣಂಭೆ
ಸಿತಂ ಕಣ್ಮೆರೆಯಲ್ಸೊಂಪಿನ ಜಡೆಗಳ್| ನೆರೆಬೋಳೆಯ ರಾಯತನ
ದಿ ಬಂದಂಗಿರಿಶಂ ೮

ವ॥ ಅಂತುಕುಟಿಲತ್ವದಿಂ ಧೂರ್ಜಟಿ ನಾಡದೂತಂ ಬೋಳೆಯರಾ ಯತನದಿಂ ದಡಬಡಿಸುತ್ತಂ ಮನೆಯಬಾಗಿಲೆಳ್ನಿಂದಿರಲ್ನೈಶಭಕ್ತಂ ಕಂಡಾಗಳ್॥

ಕಂ॥ ಪರಸತಿವೆರಸಾನೈಶಂ; ಹರಹರಮನದಲ್ಲಿ ಬಯಸುತಿರ್ದಾ ಶಶಿ
ಶೇ| ಖರನೇಜಂಗಮರೂಪಿಂ| ಧರದೊಲವಿಂ ಬಂದನೆನುತಮಾನತನಾ
ದಂ॥ ೯

ವ॥ ಅಂತಾಗಳ್ನೈಶಭಕ್ತಂ ನಿಜಸತಿವೆರಸು ಪಡೆಕಮಳಕ್ಕೆರಗಿ ಕೈ ಗೊಟ್ಟೊಳಯಿಂಕೆ ಕರೆದೊಯ್ದು ಭಯಭಕ್ತಿಯಿಂ ಪೀಠಮನಿಕ್ಕಿ ಕು ಳ್ಳಿರಿಸಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡು ನೀರಾಜ ನಮನೆತ್ತಿ [illegible]॥

ಕಂ॥ ನರಸುರಲೋಕದೊಳಿಂತೀ। ವರವಸ್ತ್ರವಪೂರ್ವವೆನುತೆ ಸೀಳ್ದಿ
ರ್ಕ್ಕಡಿಯಂ। ವರಜಟೆಯುಂ ನಡುವಂಸಾ। ದರದಿಂದಂಸುತ್ತೆ ಮೆಚ್ಚೆತ
ನ್ನಮನಿಯಾಗಳ್॥ ೧೦

ತಾರಮಹೀಧರನಾಥಂ। ತಾರೇಶಕಿರೀಟನೆಂಬುದಂ ಪ್ರಕಟಿಸುತಂ
ತಾರಮನೊಂದಂ ತೆಗೆದತಿ ಕಾರುಣ್ಯದಿ ನೈಶಭಕ್ತ ಹಸ್ತದೊಳಿತ್ತಂ।

ವ॥ ಅಂತಾಬೋಳೆಯ ರಾಯನತಿಸಂಭ್ರಮದಿ ನೊಂದುತಾರಮಂ
ನೈಶಭಕ್ತಂಗೆ ಮನಮುಂನೋಡಲ್ಕೆಂದು ಕುಡಲ್ಕಾಗಳ್॥

ಕಂ॥ ಸತಿಯುವ ನಾ ತನ್ನವ ನಂ। ಮತಿಮಿಗಿಲೊಂದಾಗಿನೈಶಭಕ್ತಂ
ನಲಿದು। ಬರ್ಗತೆಮಿಗೆಮೆಚ್ಚುತ್ತಿರಲಾ। ಶಿತಿಕಂಠಂಮೆಚ್ಚಿ ರೂಪುದೋ
ರಿದನಾಗಳ್॥ ೧೧

ತರಣಿಸುಧಾಕರಹುತವಹ। ಮರುದಂಬರಭೂಜಲಾತ್ಮಕಂ ತಾನೆ
ನಿಸೀ। ಶ್ವರನಯ್ದು ಮೊಗದಿನತಿಬಂ। ಧುರತರ ದಶಭುಜದಿನೆಸೆದವಂ
ದೊಲವಿಂದಂ॥

ವ॥ ಅಂತುತಾಂಪಿಡಿವಿರ್ದ ಬೋಳೆಯರಾಯತನದವೇಷಮನುಳಿದು
ಮೆಚ್ಚಿ ನಿಜಸ್ವರೂಪಮಂತೋರಿದ ಶಿವನಚರಣಕಮಲಂಗಳ್ಗೆ ಸತಿವೆರ
ಸು ನೈಶಭಕ್ತಂ ಪೊರಳ್ದು ಪರಮಾನಂದಾಶ್ರುಗಳುಣ್ಮುತಂಪರವಶದಿಂದಿ
ರ್ಪಾಗಳ್॥

ಕಂ॥ ಪದಕೆರಗಿದದಂಪತಿಗಳ। ನೊದವಿದಕೃಪೆಯಿಂದಮೆತ್ತಿ ಕಾಳ್ಗ
ಸಿಸಿವುಹಾ। ಮುದದಿಂಮೆಯ್ದುಡವುತ್ತಂ। ಸದಮಳಶಿವನೋತು ನಂದಿ
ಗಂದಿಂತೆಂದಂ॥ ೧೪

ಹರಿದಂಬರನೆನಿಪೆನ್ನಂ ವರವಸ್ತ್ರಮನುಡಿಸಿದಮರ್ಗದಂ ಮಿಗಲದ
ಕಾ। ನಿರದೊಂದು ತಾರಮಿಾಯ। ಲ್ವಿತಿದೊಳ್ಪಂಪಡೆದವರಿವರ್ಗದಾದೋರ್
ದೆಧರೆಯೊಳ್॥ ೧೫

ವ॥ ಎಂದಾನೈಶಭಕ್ತನಂ ಸತಿಸಹಿತಂಪೊಗಳ್ದು ಕೊಂಡಾಡುತ್ತಂ ಶಿ
ವಂ ತಾಂಬರಿಸಿದ ದಿವ್ಯವಿಮಾನದೊಳ್ ಕಾರುಣ್ಯದಿಂದವರಂಕುಳ್ಳಿರಿಸಿ
ಸಿಯಾಮಿಸಿದಾಗಳ್॥

ಕಂ॥ ಸುರರಲತಾಂತಾಸಾರದೊ। ಳುರುತರಮಣಿ ಖಚಿತಪುಷ್ಪಕಂ
ದಂಪತಿಗ। ಳ್ವೆರಸಾಗ ಸಕ್ಕಿಜಗಿದು। ತ್ರಿರದೇಳ್ತರಮುತ್ತ ರಜತಭೂ

ಧರಶಕ್ಯಾಗಳ್॥ ೧೬।

ವ॥ ಅಂತುಸತಿವೆರಸುಬಂಡನೈಕಭಕ್ತಾನ್ವಿತಂ ಸಕಲಗಣೋಪೇತಂ ಭೂತನಾಥ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್

ಕಂ॥ ಸತ್ಯನಿಧಿನೈಕಭಕ್ತ। ರ್ಗತ್ಯಂತಪ್ರೇಮದಿಂದೆ ಗಣಪದಮುಮ ನಾ। ದಿತ್ಯರ್ಪೊರ್ಗಳಲ್ಕೊಟ್ಟಾ ಮೃತ್ಯುಂಜಯು ನೆಸೆವುತಿರ್ದನಾ ಸ್ಥಾ ಯಿಕೆಯೊಳ್॥ ೧೭

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಮತ್ಪ್ಪರಿ…ರೆಯ ಪುರಾಧಿಪಶ್ರೀಸೋ ಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿ ಷಷ್ಠಿಪುರಾತನರ ಚಾರಿತ್ರದೊಳ್ನೈಕಭಕ್ತ ಮಾಹೇಶ್ವರ ಕಥಾ ವೃತ್ತಾಂತಮೇಕ ಪಂಚಾಶ ದಾಶ್ವಾಸಂ॥

—ಶ್ರೀ—

## ಐವತ್ತೆರಡನೆಯಆಶ್ವಾಸಂ

### ಸಾಂಖ್ಯನಾರರಕಥಾವೃತ್ತಾಂತಂ

ಅಖಿಲಗಣಮುಖೌಯೆನಲ್ಕತ । ಮಖಮುಖ್ಯರ್ಪೊರ್ಗಳೆ ಸಾಂಖ್ಯನಾ ರರ್ಗಾಂಷ ॥ಣ್ಮಖನುತಗಣಪದವಿತ್ತತಿ। ಸುಖಮಯಸೋಮೇಶನೊ ಲ್ದುಪಾಲಿಕೆನಮ್ಮಂ ॥೧

ಇಂದ್ರವಜ್ರವೃತ್ತಂ॥ ಪುರಾರಿಯಾವಾಸವೆನಿಪ್ಪಚೋಳೋ। ರ್ವರಾಂ ತದೊಳ್ಪೇರ್ಮೆಯನಾಂತು ಭಕ್ತೋ ।ತ್ಕರಾ ಲಯಾನೀಕದಚೆಲ್ವಿನಿಂ ದಂ ।ನಿರಂತರಾರೂರೆಸೆವುತ್ತಮಿರ್ಕುಂ ।೨॥

ಕಂ। ಪುರದಪೊರವೊಳ್ಸೊಳತಿಬಂ। ಧುರನಂದನ ಮಿಕ್ಷು ವಾಟಕೇ ದಾರಂಸ ॥ತ್ಸರಸಿ ತಟಾಕಂದೀರ್ಘಿಕೆ । ಪಿರಿದೊತ್ತರದಿಂದೆ ಪೆಂಪುವಡ ದೆಸೆದಿರ್ಕುಂ ।೩॥



ಆವೆಡೆಯಂನೋಳ್ಪೊಡೆಲಿಂ.ಗಾವಾಸಂಗಳ ಸುವರ್ಣ ಕಳಶಪ್ರಭೆಗ

ಳ್ | ತೀವಿರೆತತ್ಪುರದೊಳ್ದವ | ಮೇವರ್ತಿಸುತಿರ್ಪುದದರೊಳದನೇ ಪೊಗಳ್ವೆಂ| ||೪||

ನಿರುತದಿನಿಂತೆಸೆವಾತ|ತ್ಪುರದೊಳ್ಶಿವಭಕ್ತ ಜನದಕರುಣಾವೃತ್ತೀ| ಶ್ವರಪದಕಿಂಕರ ನೆನಿಸು |ತ್ತಿರುತಿರ್ಪಂ ಸಾಂಖ್ಯನಾರನೆಂಬಾಭಕ್ತಂ ೫

ಪುರವೆಳೆಗರುಗಳ ನೋಯ್ದು | ದರದಿಂದಂ ಕಾಯ್ದುಗಳಿಸಿದೊಡವೆ| ಯನದನೀ | ಶ್ವರಭಕ್ತರ್ಗೀವುತ್ತೀ| ಪರಿಯಿಂದಂ ಸಾಂಖ್ಯನಾರನೊಲ್ದಿರುತಿರ್ಪಂ| ೬

ರಸೆಯೊಳ್ಮನ್ನಾವಂಪೂ ಜಿಸಲಿಲ್ಲೀಪರಿಯೊಳೆಂಬ ಪೊಸ ನಿಯಮವನಾ| ಲಸದಮಳಭಕ್ತಿಯಿಂದ| ರ್ಚಿಸುತಿರ್ಪಂ ಸಾಂಖ್ಯನಾರನಗಜಾಪತಿಯಂ| ೭

ಉದಯದೊಳೆರ್ದ್ದ ರದೆತಟಾ | ಕದಜಳದೊಳ್ಮಿಂದು ಮಿಸುಪರುದ್ರಾಕ್ಷೆಗಳಂ |ಸದಮಳಭಸಿತಮನಾಂತತಿ ಮುದದಿಂದಾ ಸಾಂಖ್ಯನಾರನಂತೆಯೆಗೆಯ್ದಂ ೮

ಅತಿಭಕ್ತಿಯ ಸದ್ಭಾವೋ |ನ್ನತಿಯಿಂಸಲ್ಲಲಿತಮಪ್ಪ ಕಲ್ಲಿಂದಂಭೂ | ನುತಲಿಂಗಮನೋತರ್ಚಿಸಿ ಮತಿಮಿಕ್ಕಿಂಸಾಂಖ್ಯನಾರನಾನತನಾದಂ ೯|| ಅಂತಾನತನಾಗಿ ಪರಮಾನಂದಾಶ್ರುವಾರಿಗಳ್ತುಳ್ಕಾಡೆ ಭಕ್ತಿರಸದೊಳೋಲಾಡಿ ಕೊಂಡಾಡಿ ತಲ್ಲಿಂಗಮಂ ಬಿಡ ಲಾರದೆತಾ ನುಬ್ಬೆಗದಿಂ ಸಾಂಖ್ಯನಾರಂ ಬೀಳ್ಕೊಂಡು ತನ್ನಮನೆಗೇಳ್ತಂದು ಮಾಹೇಶ್ವರರ್ಗೆರ ಸುಲಿಂಗಪ್ರಸಾದಮಂ ಕೊಂಡೀಪರಿ ಯನೇಮದಿಂ ದಿರು ತಿರ್ದನಂತು ಮಲ್ಲದೆಯುಂ|

ಕಂ|| ದಿನದಿನದೊಳರ್ಚಿಸಿವಕ| ಲ್ಲಿನಿತುಂನಿರ್ಮಾಲ್ಯಮೆಂದು ಬೀಸಾಡುತನೆ| ಟ್ಟನೆಪೊಸಕಲ್ಲಂತಂದ| ರ್ಚನೆಗಳನಾ ಸಾಂಖ್ಯನಾರ ನೊಲವಿಂಮಾಳ್ಪಂ|| ೧೦

ಚಳಿಯೆನ್ನದೆಬಿಸಿಲೆನ್ನದೆ| ಮಳೆಯೆನ್ನದೆ ಸರಿದುಪೋಗಿ ಪೊಸತೆನಿಸುವಕ ಲ್ಗಳನರಸಿತಂದುಸಲೆಸದ|ಮಳಲಿಂಗಮನರ್ಚಿಸುತ ಮಿರ್ಪಂ ಭಕ್ತಂ|| ೧೧

ಈತೆರದಿಪಲವುದಿವಸಂ| ಭೂತೇಶನನರ್ಚಿಪಲ್ಲಿಕಲ್ಗಳ್ಜೋಳೋ ರ್ವೀತಳದೊಳ್ಗಗಿಸ್ಲಿಸುತೆ| ಪ್ರೀತಿಯುನಿಯಮಮನನೆ ಬಿಡದೆನಡೆಯಿಸು

ತಿರ್ದ೯ಂ॥ ೧೨

ವ॥ ಅಂತೀಪರಿಯೊಳ್ಸದ್ಭಕ್ತಿ ಯುಕ್ತನಪ್ಪ ಸಾಂಖ್ಯನಾರಂ ಮನೋಭಾವದಿಂ ತಲ್ಲಿಂಗಮನರ್ಚಿಸುತ್ತಿರ್ದ ನಂತುಮಲ್ಲದೆಯುಂ॥

ಉ॥ ಒಂದುದಿನಂ ಕರಂಪಸಿದುಃಲ್ಕಿಸುತಂ ಶಿವಮಂದಿರಕ್ಕೆತಾಂ। ಬಂದಗಲಲ್ಲಿ ಕಾಲ್ಗಿರುತೆ ಬೆಚ್ಚಿಪವ್ರೊ ಕ್ಕಿನೆದೆದ್ದು ಸುಯ್ದುದೇ ನಿಂದಕಟ್ಟೀಘನಂದೊರಕಿತೀಶ್ವರನರ್ಚನೆ ಯಿಲ್ಲದೆಂದುಕೋ। ಪಿಂದಮೆಸಾಂಖ್ಯನಾರ ನಿರದೆಯ್ದಿದ ನಶ್ಮಲತಾಂತ ಕಲ್ಕರಿಂ॥ ೧೪

ವ॥ ಅಂತುನಾಲ್ದೆಸೆಗೆ ಪರಿದುಪರಿದು ಕೋವ-ಳಾಶ್ಮ ಮನರಸುತ್ತಿರ್ಪಗಳ್।

ಕಂ॥ ಹರನಾತನನುನಡನುವಂ। ಪರಿಕಿಪೊಡಾದೇಶದೊಳಗೆಕಿರು ಕಲ್ಲುಗಳುಂ। ದೊರಕದತೆರನಂವಾಡ, ಲ್ಪರಿಪರಿದೀಕ್ಷಿಸುತಮಿರ್ದನದನೇವೊಗಂಪ್ಪೆ ೧೫

ಪತ್ತೆ ಡು ಸೋಜನಮನರ। ಸುತ್ತಲ್ಕಂತಲ್ಲಿ ಕಲ್ಲುಕಾಣದೆ ತನಗಿ। ರ್ಪತ್ತುಪವಾಸಮದಾಗಲ್। ಚಿತ್ತದೊಳಂದಳ್ಕದ ರಸುತಿರ್ದ ಭಕ್ತಂ

ಮ॥ ಘನಲಿಂಗಾರ್ಚನೆಯಿಲ್ಲದೋಕರ್ಬುಡುತೆ ನೀರಂಕೊಳ್ಳದೀವಾಳ್ಕೆಯಿಂ। ತನಗಿರ್ಪತ್ತುಪವಾಸ ಮಾಗಲೊಲವಿಂ ನೋಡುತ್ತೆಬರ್ಪಲ್ಲಿಲೋಚನಕತ್ಯದ್ಭುತ ಮಿಾವೃತಿರ್ಪ ಪೊಸಪೆರ್ಗಲೊಂದು ಸಿಕ್ಕಲ್ಕೆಭೋಂಕನೆ ಪೊತ್ತುಬರ್ಪತೆ ಸಾಂಖ್ಯನಾರನಿರದೇಲ್ತಂದಂ ಮಹೋತ್ಸಾಹದಿಂ॥

ವ॥ ಅಂತುಸಾಂಖ್ಯನಾರುಂಬಂದು ಶಿವಭವನಮಂ ಪೊಕ್ಕುರ್ಬಿಕೊರ್ಬುತ್ತಾನಂದ ಮಯನಾಗಿಭಯಭಕ್ತಿಯಿಂದಾಗಳೀತೆಂದಂ॥

ಕಂ॥ ಗಿರಿವರತನಯಾಪತಿಯವ। ಧರಿಯಿಪುದಿಪತ್ತು ದಿನದನಿನುಪುದೇಪಕಲ್ಲಂ। ಭರದಿನೆನುತೆತ್ತಿಪೊಯ್ಕಲ್। ಕರ ಪಿಡಿಜೋತುರಾಪುದೋರಿದನಾಗಳ್।

ಇಂದ್ರವಜ್ರವೃತ್ತಂ॥ ಗಂಗಾಂಬುಚಂದ್ರಂ ವಿಷಮಾಕ್ಷ ... ಗಳ್ಳಣೀಂದ್ರಂ ದಶಬಾಹುಗಳ್ಮಾ। ತಂಗಾಜಿನ ಭ... ಕಂಗೊಪ್ಪೆಗೌರೀಶ ರನೊಪ್ಪು ತಿರ್ದಂ।

ವ॥ ಅಂತುಸದಾಶಿವಂ ನಿಜಮೂರ್ತಿಯಂ ತೋರೆ ... ಸಾಂಖ್ಯನಾರಂ ಕಂಡು ಗದ್ಗದಕಂಠನಾಗಿಮುಯ್ಮರದು ಪದಕ... ಬಳ್ಪೊರಳ್ವನಿತೆ

ಮಿಗೆಸದ್ಭಾವದಿಂದೀಕ್ಷಿಸುತಿರ್ಪಾಗಳ್॥
ಕಂ॥ಮನವೊಲ್ದೀಶ್ವರನಾಸಾಂ|ಖ್ಯನಾರರಂಕರುಣದಿಂದೆಪಿಡಿ ದೆತ್ತಿ ಕರಂ| ತನುದಡವಿಬೋಳಯಿಸಿ ಬಳಿ| ಕನುರಾಗದಿನಪ್ರಿಜಾತೆ ಗಂದಿಂತೆಂದಂ॥ ೧೯|
ಘನನಿಷ್ಠೆಯಿಲ್ಲದಲರ| ರ್ಚನೆಯಲರ್ಗಳ್ಕಲ್ಲುನಿಷ್ಠೆಯಿಂ ಪೂಜಿಸಿದೀ| ತನಕಲ್ಲೀರಿಂ ಮಿಗಿಲೆನ| ಗೆನುತಿರ್ದಂ ಗಿರಿಜೆಯೊಡನೆ ಗಿರಿಜಾನಾಥಂ॥
ವ॥ ಎಂದಾಸಾಂಖ್ಯನಾರರ ಮಹಾಭಕ್ತ್ಯುದ್ರೇಕದ ನಿಷ್ಠೆಯುಂಖಂಡೇಂದು ಶೇಖರಂಕೊಂಡಾಡುತ್ತ ಮಿರ್ಪಾಗಳ್॥
ಕಂ॥ ಇಳೆಗಲರಮಳೆಗಳಲ್ದಗೆ| ಮಿಳಿರ್ವವೃಷಧ್ವಜ ಸಮೇತಮಣಿಪುಷ್ಪಕವಾ| ಗಳೆಬರೆಕುಳ್ಳಿರಿಸಿದನೊಳ್|ಗೊಲವಿಂದಂಸಾಂಖ್ಯನಾರರಂಪ್ರಮಥೇಶಂ॥ ೨೧
ವ॥ ಅಂತಾಪುಷ್ಪಕದೊಳ್ಸಾಂಖ್ಯನಾರರಂ ಕುಳ್ಳಿರಿಸಿಭಕ್ತವತ್ಸಲನಪ್ಪ ಶಿವಂನಿಬಾಮಿಸಲ್ಕಾಗಳ್॥
ಕಂ॥ ಸುರದುಂದುಭಿಗಳ್ಮೊಳಗು| ತ್ತಿರಲಾಕಾಶಮನೆಬೆಳಗುತಂ ಶಿವಭಕ್ತಂ| ಬೆರಸಾಮಣಿಮಯಪುಷ್ಪಕ| ವಿರದೇಳ್ತಂದುತ್ತು ರಜತಗಿರಿಗುತ್ಸವವಿಂ॥ ೨೨
ವ॥ ಅಂತೇಳ್ತಂದಾಸಾಂಖ್ಯನಾರವಮಾಹೇಶ್ವರಂ ಬೆರಸುಗಿರಿಶಂತತ್ಕೈಲಾಸ ಸಭಾಮಂಟಪದೊಳೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥
ಕಂ॥ ನಿಷ್ಠೆಬಿಡದೋತುಕಲ್ಲಿಂ ದಿಟ್ಟೊಲಿಸಿದ ಸಾಂಖ್ಯನಾರವಮಾಹೇಶಂಗಂ| ಪಟ್ಟದಗಣಪ ದಮಂಸಲೆ|ಕೊಟ್ಟೊಲವಿ ಂದೀಶನೆಸೆದನಾಸ್ಥಾಯಿಕೆಯೊಳ್॥

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮತ್ಕಲಿಗೆರೆಯ ಪುರಾಧಿಪ ಶ್ರೀಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಠಿಪುರಾತನರ ಚಾರಿತ್ರದೊಳ್ಸಾಂಖ್ಯನಾರ ಮಾಹೇಶ್ವರಕಥಾವೃತ್ತಾಂತಂದ್ವಿಪಂಚಾಶದಾಶ್ವಾಸಂ

—ಶ್ರೀ—

## ಐವತ್ತುಮೂರನೆಯಆಶ್ವಾಸಂ

## ಚೆರುಪುಲಿಯಾಂಡರಕಥಾವೃತ್ತಾಂತಂ

ಬಲರಿಪುಪೊಗಳುತ್ತಿರೆಚೆರು ಪುಲಿಯಾಂಡಂಗಮರವಿನುತಗಣಪದಮಂ ಕೊ|ಟ್ಟೊಲವಿಂದಂ ಮೆರೆದಘಹರ |ಪುಲಿಗೆರೆಸೋಮೇಶನೊಲ್ದುಪಾಲಿ ಕೆನಮ್ಮಂ ||೧

ನೆರೆಮೆರೆವಚೋಳಧರೆಯೊ | ಳ್ಮಿರುಗುವಕಳವೆಗಳ ಗರ್ದೆವನಸಲದೋರ್ಲಂಟಂ||ಕರೆಗಳೆನಿಪ್ಪಪಳೆಸವಿಂ,ಚೆರಪುತ್ತೂರುಂ ಕರಂವಿರಾಜಿಸುತಿರ್ಕುಂ|| ೨

ಉತ್ತಮಭಕ್ತರಮನೆಗಳ| ವೊತ್ತದಿಪೊಂಗಳಸದಭವಭವನ ಪ್ರಸರಂ|| ಬಿತ್ತರದಿತುಂಬಿದಾಚೆರು| ಪುತ್ತೂರದು ಪೆಂಪುವೆತ್ತು ಕರಮೆಸದಿರ್ಕುಂ|| ೩

ವ|| ಅಂತಾಚೆರುಪುತ್ತೂರೊಳ್ಚಿರು ಪುಲಿಯಾಂಡಂ ಸದ್ಗುರು ಕಾರುಣ್ಯದಿಂದಂತನಗತಿಭಕ್ತಿಯಂಕುರಿಸಿ (ಜಂ) ಜನನಂನಾಸ್ತಿ(ಗ) ಗಮನಂನಾಸ್ತಿ (ಮ) ಮರಣಂ ನಾಸ್ತಿ ಯೆನಿಪ್ಪ ಶಿವಮೂರ್ತಿಗಳಪ್ಪ ಜಂಗಮಂಗಳಮೇಲಿನೇಹಮತಿಶಯಂಪೆರ್ಚೆ ಪರಮೋತ್ಸವದಿಂದಿರು ತಿರ್ದನಂತುಮಲ್ಲದೆಯುಂ|

ಕಂ|| ಚೆರಪುತ್ತೂರೊಳ್ಭಕ್ತಿಯ| ನೆರವಣಿಗೆಯ ನಿಳೆಗೆತೋರುತಂ ಜಂಗಮಮಂ| ಕರೆಗೊರಲನೆಂದು ಭಾವಿಸಿ | ಚೆರುಪುಲಿಯಾಂಡಾಖ್ಯಭಕ್ತನೆಸೆವುತ್ತಿರ್ದಂ| |೪|

ವರವಸ್ತ್ರಂಸತ್ಕನಕಾ| ಭರಣಂರುದ್ರಾಕ್ಷೆ ನವಕಮಂಡಲು ಕೊಡೆ ಬಂ|ಧುರಪಾದುಕೆಯೆಂಬವನೀಶ್ವರಭಕ್ತಗಿತ್ತುವುತಿರ್ಪನಾಮಹೇಶಂ ೫

ವ|| ಅಂತಾಚೆರುಪುಲಿ ಯಾಂಡಂ ನಿಚ್ಚ ನಿಚ್ಚಂ ಶಿವಲಿಂಗಪೂಜೆಯಂ ಮಾಡಿಬಂದಲಿಂಗವಂತಜಂಗಮಂಗಳ ಪಾದತೀರ್ಥಮಂಕೊಂಡೊಕ್ಕುದನುಂಡೀಪರಿಯಿಂಪಲವುವತ್ಸರ ಮಿರುತ್ತಿರ್ದ ನಂತುಮಲ್ಲದೆಯುಂ|

ಕಂ| ಘನಭಕ್ತರಪಾದಜಳಂ| ತನಗಧಿಕನನ್ನಾನವಾನಮುಪರೋಕ್ಷ್ಮದೆಭೋ|ಜನವಾಗಿಜಂಗಮವೆಜೀ|ವನಮೆನಿಸುತ್ತಿರ್ಪನೋತುಚೆರುಪುಲಿಯಾಂಡಂ| ೬

ವ|| ಅಂತೀಪರಿಯೊಳ್ಮಹಾಜಂಗಮ ಪ್ರಾಣಲಿಂಗವಾಗಿ ಬಾಳುತ್ತಿರ್ಪ

ಚೆರುಪುಲಿಯೊಂಡರ ಮಹಾಭಕ್ತಿಯನುವಂ ನೋಡಲ್ಕೆಂದು ವಿನೋದಶೀ
ಲನಪ್ಪ ಸದಾಶಿವನಾ ಚೆರುಪುತ್ತೂರಿಂಗೆ ಶಿವಭಕ್ತರಾ ರುಂಬಾರದಂತೆ ಮಾ
ಡಿ ಪರಿಭಾವಿಸುತ್ತಿರ್ದನ್ನೆಗಂ||

ಚೌ| ಧರದಿಕ್ಕೋರಿಜೊನ್ನ ಪೊದವಂ ಕವುಳಂರವಿತೇಜದೇಳ್ಗೆಯಂ
ಪರಭೃತಮುದ್ಘ ಚೈತ್ರರುತು ಪಂಜಿಡವಂ ನಿಧಿಯಂ ಪುದಾಳಭಾ|ಸುರ
ಕುಸುಮಂಗಳಂ ಬಯಸುವಂತಿರಲುತ್ತಮ ಜಂಗಮಂಗಳಂ| ಪಿರಿದರಸು
ತ್ತ ಬಾರದಿರೆ ಬಾಯ್ವಿಡುತಿರ್ದನುಮೇಶಕಿಂಕರಂ ೭

ಕಂ| ಅವಗುಣವನೇನನೆನ್ನೊಳ್| ಶಿವಭಕ್ತರ್ಕಂಡರ ಕಟ ಬಾರರೆನು
ತ್ತುತ್ಸವವಳಿದಳಲುತ್ತಾ ಹಾ| ರವನುರೆ ತೊರೆದಿರ್ದನವಂ ಚೆರುಪುಲಿ
ಯೊಂಡಂ ೮

ಮಾರಾರಿಯ ಜಂಗಮ ಸುತತಿ| ಬಾರದಿರಲ್ಕು ಮತ್ತೆ ಂಟುಮುಪವಾಸದಿಗೌ|
ರಿರಮಣಧ್ಯಾನಮನಾಂ| ತೋರಂತಿರುತಿರ್ದನಮುಮ ಚೆರುಪುಲಿಯೊಂ
ಡಂ| ೯|

ವ|| ಅಂತೀ ಪರಿಯೊಳಾ ಚೆರುಪುಲಿಯೊಂಡಂ ನಿಜಪ್ರಾಣಮಪ್ಪ ಲಿಂಗ
ಜಂಗಮಂಗಳ್ಬಾರದಿರೆ ಮೂವತ್ತೆಂಟುಪವಾಸಮಾಗಿ ತನ್ನಾತ್ಮಮಂ ನಿವೇ
ದಿಸುವೆನೆಂದು ಬಗೆವ ಸಮಯದೊಳ್ಪಂಡಂತೆ ರಿಷ್ಟದೊಳ್ನಿಂದು ನೋಡು
ಪಶಿವಂಗೆ ಪಾರ್ವತಿಯಿಂತೆಂದಳ್|

ಕಂ| ಭಾವಿಪೊಡೀ ಭಕ್ತಂ ತ| ಜ್ಜೀವವ ನೊಪ್ಪಿಸಿದ ಬಳಿಕ ನೀನೊಲಿ
ದುಬೆಕ್ಕೇಳ್| ನತ್ರಿವನ್ನ ಒರಂ ಸರಸವೆ| ಪೇಪಯೆನುತ್ತೊತು ಗಿರಿಜೆ ನುಡಿ
ದುಳ್ಕಾಗಳ್|| ೧೦

ವ|| ಅಂತು ಗಿರಿಜೆ ನುಡಿಯಲ್ಸದಾಶಿವಂ ಕೇಳ್ದು ತದ್ಭಕ್ತನ ಮೇಲಿ ಕರುಣ
ಸಂಮಾಡಿ ಪೊರವಟ್ಟಾಗಳ್||

ಕಂ|| ಪುಲಿದೊವಲುಡೆ ಭಸಿತಂ ಕುಂ| ಡಲಮುರುರುದ್ರಾಕ್ಷಲಾಕು
ಲಂ ಕೆಂಜಡೆಗಳ್| ಸಲಿಮೆರೆಯಲೀಶನಾಗ |ನ್ನಲವಿಂ ಪಂಜಂಗಮಾಕೃತಿ
ಯೊಳೇಳ್ತಂದಂ|| ೧೧

ವ|| ಅಂತು ಜಂಗಮಾಕೃತಿಯೊಳೇಳ್ತಂದಾ ಸದಾಶಿವನಂ ಚೆರುಪುಲಿ
ಯೊಂಡಂ ಕಂಡು ಜೀವಂ ಬಂದಂತಿದಿರೆದ್ದು ಸಾಷ್ಟಾಂಗವೆರಗಿ ಪೊಡಮ
ಟ್ಟಿರ್ದನಕ್ಕೆ ನೊಪ್ಪಿತಂದು ನಿಜಮಂದಿರದೊಳ್ಪೀಠದ ಮೇಲಿಕ್ಕೊಳ್ಳಿರಿಸಿ ಮ

ತ್ತಮಾಗಳ್‌॥
ಕಂ॥ ಚರಣಪ್ರಕ್ಷಾಳಂಗೆ। ಯ್ದಿರದೊಲವಿಂಭಕ್ತಿಯಿಂದೆಪಾದೋದಕಮಂ।ಧರಿಯಿಸಿಸುರುಚಿರಕಾಸುಪವೋತ್ಕರವಿಂದರ್ಚಿಸಿದನಂದುಚಿರುಪುಲಿಯಾಂಡಂ॥ ೧೨॥
ವ॥ ಅಂತರ್ಚಿಸಿದಚಿರುಪುಲಿಯಾಂಡನಭಕ್ತಿಯ ನಿಷ್ಠೆಗೆಮೆಚ್ಚಿ॥
ಕಂ॥ ಅನುಪಮಶಿವಸಂತಾಗ। ಳ್ಗನಕ್ರುಪೆಯಿಂ ತಚ್ಚಿವೈಕ್ಯನಾಂತಭಲಕ್ಕಂ। ದನುನಯದಿಂದಂತಾಗಳ್‌। ಮುನಿನಿಕರಂ ಪೊಗಳೆತೋರಿದಂ ನಿಜರೂಪಂ॥ ೧೩॥
ಕೆಂಜಡೆಬಾಂದೊರೆಯಿಂದೆಥ। ನಂಜಯುನಹಿಪಂ ವಿಷಂವಿಭೂತಿಕಪಾಲಂ। ಕುಂಜರಚರ್ಮಾಂಶೂಲಂ। ರಂಜಿಸಲಭವಂ ಸ್ವರೂಪದಿಂದೆಸೆದಿರ್ದಂ॥ ೧೪
ವ॥ ಅಂತೆಸೆದಿರ್ದಗಿರಿಜೇಶನ ದಿವ್ಯರೂಪಮಂಕಂಡು ಭಯಚಕಿತಹೃದಯನಾಗಿ ಪದಕಮಲದೊಳ್ಪೈಗೆಡೆದುಪರವಶೀಭೂತನಾಗಿರ್ಪಚಿರುಪುಲಿಯಾಂಡರಂ ಶಿವಂಪಿಡಿದೆತ್ತಿ ಕುಳ್ಳಿರಿಸಿ ಕರುಣದಿಂಬೋಳೈಸುತ್ತಾಗಳ್‌ ೧೫
ಕಂ॥ ಕರೆಗೊರಲಂ ಕ್ರುಪೆಯಿಂದಂ।ಚಿರುಪುಲಿಯಾಂಡನ ಮಹೋಗ್ರಭಕ್ತಿಗೆಮನದೊಳ್‌। ನೆರೆಮೆಚ್ಚಿ ಪಂಚಮುಖದಿಂ। ನೆರವಣಿಗೆಯಭಲದಬಲ್ಪನುಮೊಗಂದುಸಿರ್ದಂ॥
ಜಂಗಮವೆತನ್ನ ಭಾಗದ।ಲಿಂಗವೆನುತ್ತಿರ್ದಭಲಕೆಬಾರದಿರಲ್ಕೆಂ।ನಂಗವನರ್ಪಿಪೆನೆನಲೀ ತಂಗಾದೊರೆ ಯೆಂದನುಮೊಗೆ ವೃಷಭಪತಾಕಂ
ವ॥ಎಂದಾಭಕ್ತಿಯಭಲಮಂಕೊಂಡಾಡುತ್ತಂ ತಾಂಬರಿಸಿದ ದಿವ್ಯಪುಷ್ಪಕದೊಳ್‌ ಚಿರುಪುಲಿಯಾಂಡನಂ ಕುಳ್ಳಿರಿಸಿಗಿರಿಶಂನಿಯಾಮಿಸಲಾಗಳ್‌
ಕಂ॥ ಸುಲಲಿತಪುಷ್ಪಕಮದುಚಿರುಪುಲಿಯಾಂಡಂ ಬೆರಸುಗಗನಮಂಬೆಳಗುತ್ತಂ। ಕಳಧೌತಾಚಳದರಮನೆ। ಗೊಲವಿಂದಂ ಬಂದುದಮರದುಂದುಭಿರವದಿಂ॥
ವ॥ ಅಂತಾನಂದದಿಂಬಂದ ಚಿರುಪುಲಿಯಾಂಡಾನ್ವಿತಂಖಂಡೇಂದುಶೇಖರಂ ಪ್ರಮಥಗಣಂಗಳ್ವೆರಸೋಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್‌।
ಕಂ॥ ಅನುನಯದಿಂ ಚಿರುಪುಲಿಯಾಂ। ಡನಭಕ್ತಿಯ ಭಲಕೆ ಮೆಚ್ಚಿಗ

ಣಪದಮಂಕೊ| ಟ್ಟನವಪ್ಯನನಘನದ್ವಯ|ನನುಪಮಶಿವನೆಸೆವುತಿರ್ದ
ನಾಸ್ಥಾಯಿಕೆಯೊಳ್|| ೧೮

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ ಪುಂಜರಂಜಿತಪಾದಪಂಕಜಶ್ರೀ ಪುತ್ತೂಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ್ರದೊಳ್ತಿರುಪುಲಿಯಾಂಡಭಕ್ತ ಮಾಹೇಶ್ವರ ಕಥಾವೃತ್ತಾಂತಂತ್ರಿಪಂಚಾಶದಾಶ್ವಾಸಂ||

—ಶ್ರೀ—

## ಐವತ್ನಾಲ್ಕನೆಯ ಆಶ್ವಾಸಂ

### ಅಚ್ಯುತರಕಥಾವೃತ್ತಾಂತಂ

ಆಶ್ಚರ್ಯದಸದ್ಭಕ್ತಿಯ| ನಿಶ್ಚಯಮುಳ್ಳಚ್ಯುತರ್ಗೆ ಗಣಪದವಿತ್ತಂ|ಭ
ಕ್ತಿರಪತಾಕಪಿತನುತ ನಿಶ್ಚಳನೋಮೇಶನೊಲ್ದು ಪಾಲಿಕೆನಮ್ಮಂ||೧

ಪರನನೆಲೆವನೆಯೆನಿಪ್ಪಾ| ವರಚೋಳಾವನಿ ಯೊಳುದ್ಘಕೇದಾರದಿ
ನೀ| ಸ್ವರಗೃಹಸಂತತಿಯಿಂದಂ| ತಿರುಚೆನ್ನಾಡೆಂಬ ಸತ್ಪುರಂರಂಜಿಸು
ಗುಂ|| ೨

ಪರವೈಶ್ವರ್ಯದಿನೆಸೆದಾ| ಪುರದೊಳ್ಶಿವಭಕ್ತತತಿಗೆ ಬೇಡಿತನೀ
ವುತ್ತುರು ತತ್ಕೀರ್ತಿಯನಾಂತಾ| ಪರದಿಂದಚ್ಯುತಸಮಾಖ್ಯಭಕ್ತಂ
ಮೆರೆವಂ|| ೩

ಸುರಮಣಿಯುಂ ಸುರತರುವುಂ| ಪರಿಶ್ರಮಂಗಳನುಮೆರೆಯ ದೀವೆನೆ
ನುತ್ತಂ| ಹರಭಕ್ತರೆರೆವಧನಮಂ| ಪಿರಿದೀವುತ್ತಿರ್ದ ನಚ್ಯುತಾಹ್ವಯ
ಭಕ್ತಂ|| ೪

ಚಂ|| ಘನಬಳವಂತನೆಂದೆನಿಸುವ ಚ್ಯುತನಾಪುರದೊಳ್ಕಡಂಗಿಜಾ|
ಜಿನಮುಖದಿಂದನೇಕಧನಮಂ ಬಿಡದಾರ್ಜಿಸಿ ಲಿಂಗಜಂಗಮ |ಕ್ಕನವ
ರತಂ ಸಮು[illegible] ನಿತ್ಯನೆಶಿವಭಕ್ತ

ರೊಳ್ಪು/ಯದೆ ಕೂಡಿರುತಿರ್ಪನುದಾರವೃತ್ತಿಯೊಳ್‌। ೫

ವ॥ ಅಂತಾಪುರದೊಳಂತೀನಿಯಮಮಂ ಪಿಡಿದುಪಲವುಕಾಲ ವಿರು
ತ್ತೊಂದುದಿವಸದೊಳಚ್ಯುತ ಮಾಹೇಶ್ವರಂ ಬಿಸದದಿಂ ದ್ಯೂತಶಾಲೆ
ಯೊಳ್ಪೊಕ್ಕು ನೋಳ್ಪಾಗಳ್‌॥

ಚಂ॥ ಕುರುಧರಣೀಶನುಗ್ರ ಸಮರಾಂತ್ಯದ ಪೊಲ್ಕಿರೆ ಕರ್ಣಹೀನ
ರುಂ। ಸಿರಿಪಿರಸಾರ್ದ ಪಾಂಡವರ ಪೋಲ್ಪದವಿಲ್ಲ ದರುಂಮಹೇಶನಂ।ಸ್ಮ
ರಿಯಿಸದಿರ್ಪ ಪೋಲ್‌ ಹೃದಯಶೂನ್ಯರುಮುನ್ನತಮಾನ್ಯರುರ್ಬಿಯಂ
ತಿರೆ ಕರಮಿಲ್ಲದರ್ನೆರದು ಜೂಜಿನಶಾಲೆಯೊಳಿರ್ದುದಲ್ಕರಿಂ॥ ೬

ವ॥ ಅಂತೆಸೆವಜೂಜುಗಾರರಮಧ್ಯಪ್ರದೇಶದೊಳ್ಕುಳ್ಳಿರ್ದರವಣಿಯು
ಳ್ಳ ಜೂಜುಗಾರರೊಳ್ಕೈಯಿಕ್ಕಲ್‌ ಜೂಜಿನ ತವದಾಯಂಪರಪಿದಾಗಳ್‌

ಚಂ॥ ಪರವಕಪರ್ದವಂದಿಭಗಣಂಗಳ ಪೋಲ್ತೊಪ್ಪಿರಲುತ್ತಿರಲ್ಕೆಶಂ।ಕ
ಕರಶರಣಾಬ್ಧಿಯಂಬಿಡದೆಪೆರ್ಚಿಸುತಂ ಜಸಮೆಂಬಜೊನ್ನಮಂಪಶವು
ತೆ ಪೆಂಪುವೆತ್ತು ಪರಿಪೂರ್ಣಸುಧಾಕರನಂ ತಿರಚ್ಯುತ। ಪಿರಿದೆಸೆವು
ತ್ತೆಜೂಜನೊಸೆದಾಡುತ ಮಿರ್ದನುದಗ್ರವೃತ್ತಿಯೊಳ್‌॥ ೭

ಕಂ॥ ತಿಗಖಿಳಜಾಗರವೆಂಬ ಚಟ್ಟುಗಳಂ ಪಿಡಿದೆರ್ದ ಜೂಜುಗಾರರನನಿ
ತಂ। ಸೊಗಯಿಸುವನಂದಿಯುಚ್ಚಟ್ಟಂ। ಮಿಗೆಗೆಲ್ದುಬ್ಬರಿಸುತಿರ್ದನಚ್ಯುತ
ನಾಗಳ್‌॥ ೮

ಒಂಪೇಮುಷ್ಟಿಯೊಳಾಡ ವ। ಮಂದಿಯನುರೆಗೆಲ್ದು ತಂದವಿತ್ತಮನ
ನಿತಂ। ಬಂದಶರಣರ್ಗೆ ಕುಡುತಾ। ನಂದದಿನಚ್ಯುತ ಸಮಾಖ್ಯನಿಪ್ಪಂ
ಜಗದೊಳ್‌॥ ೯

ವ॥ ಅಂತೀಪರಿಯೊಳ್ಜೂಜಿನೊಳ್ಗೆಲ್ದ ಧನಮನನಿತಂಶಿವಭಕ್ತರ್ಗೀ
ವುತ್ತುಂ। ಪರಮಸುಖದಿಂದಚ್ಯುತ ಮಾಹೇಶ್ವರನಿರುತಿರ್ದ ನಂತುಮಲ್ಲ
ದೆಯುಂ।

ಕಂ॥ ಒಂದುದಿನಮಚ್ಯುತಂನಾ। ನಂದಂಮಿಗೆಬಂದು ದ್ಯೂತಶಾಲೆ
ಯೊಳಪಾರ। ಮಂದಿಯೊಡನತುಳಸಂಭ್ರಮದಿಂದಂ ಜೂಜಿನವಿನೋದ
ದಿಂದಿರಲಾಗಳ್‌।

ಚಂ॥ ಪರಮಣಿಪ್ರಭಾಪ್ರಕಾಶಾವಳಿಗಳಂ ತೆರೆತ್ತೊಟ್ಟುದು ಕೂಲಮುಟ್ಟೆ

ವಿಸ್ತರಿತವಿಭೂತಿಯಿಟ್ಟು ವೀರವೃತ್ತ ಮಹಾವ್ಯವಹಾರಿಯೊಬ್ಬನಾದ

ಠವೊಳಿಜಾ ಜನರ್ಥಿವಿಗಲಾಡಲೆನುತ್ತ ವೆಬಂದನೆಂಬವೊಲ್| ಪರಮ
ಮಹೇಶನಚ್ಯುತನ ಜೂಜಿನಶಾಲೆಗೆ ಬಂದನಲ್ಕರಿಂ|

ವ| ಅಂತುಜಟಾಸ್ಥಿ ಮಾಲಾಭರಣವುಂ ಬೈತಿಟ್ಟುಮರ್ತ್ಯವೇಷ ದಿಂ
ಬಂದೀಶ್ವರಂಗಚ್ಯುತಂ ಭಕ್ತಿಭಾವದಿಂಪೊಡಮಟ್ಟುಕೈಗಳಂಮುಗಿದು
ಬಿಜಯಂಗೆಯ್ವುದೆಂದು ಕರೆದುಕುಳ್ಳರಿಸಿದಾಗಳ್|

ಕಂ| ಎಲೆಭಕ್ತ ನಿನ್ನಜೂಜಿನ| ಗೆಲದೆಸವಂಕೇಳ್ದು ದೂರ ದಿಂದಂಬಂ
ದೆಂ| ಚಲದಿಂ ಪಾಂನಿನ್ನಂಭೂ| ತಳಕರಿಯಲ್ಗಿಲ್ವೆ ನೆಂದುಪಶುಪತಿನುಡಿ
ದಂ| ೧೨

ವ| ಎಂದುನುಡಿದ ವಿನೋದೈಕಶೀಲನ ಪ್ಪ ಕುಟಿಲವೇಷದೀಶನೊಳ
ಚ್ಯುತಂಭಕ್ತಿಭಾವದಿಂ ನಗುತ್ತಿಂತೆಂದಂ|

ಕಂ| ಮದನಹರನಲ್ಮೆಯಿಂಸೋ| ಲದಾಟವಿಾಕ್ಷಿಸು ವೊಡೆನ್ನನೆಂ
ದುಂ ನೆರೆಗೆ| ಲ್ಲದಪೆರ್ಚೆನಾಟನಿಮ್ಮದು| ವಿದಿತವೆನುತ್ತ ಚ್ಯುತಂಬೆ
ಡಂಗಿಂ ನುಡಿದಂ| ೧೩

ಛಲದಿಂದಗೆಲ್ದು ನಿಮ್ಮಾ| ವಿಲಸಿತಮಣಿಭೂಷಣಂಗಳಂ ಕೊಂಡಾ
ನಿಂ| ದೊಲವಿಂದೆನ್ನಯಭಕ್ತಾ| ವಳಗೀವೆನೆನುತ್ತೆ ನುಡಿದನಚ್ಯುತ
ನಾಗಳ್| ೧೪

ವ| ಅಂತಿದಿರ್ಕೊಳ್ನುಡಿದಚ್ಯುತನಗೆಲವಿನಛಲಕಂ ಶಿವಭಕ್ತಿಗಂಡಾಭ
ಗಸಂ ಮೆಚ್ಚಿತುರ ವಣಮಂ ತೋರಿಕವಡೆಯಂ ಪರಪಿಜೂಜಂ ಕೈ
ಕೊಂಡಿರ್ಪಾಗಳ್|

ಕಂ| ಎಂದುಂಗೆಲವಂಮಾಡುವ| ನಂದಿಯಪೊಸತಚ್ಚುವಿಡಿದು ಶಿವಶ
ರಣನುತಾ| ನಂದಂಮಿಗೆಜೂಜಿನೊಳಂ| ದಿಂದುಕಳಾಧರನ ನಚ್ಯುತಂ
ನೆರೆಗೆಲ್ದಂ| ೧೫

ವ|| ಅಂತುಕೌತುಕಂಮಿಗೆ ಭೂತೇಶನಂ ದ್ಯೂತಕೇಳಿಯೊಳ ಚ್ಯು
ತಗೆಲ್ದಬ್ಬರಿಸುತಿರ್ಪಾಗಳ್

ಕಂ|| ಜಗವುಂಗೆಲ್ವೆನ್ನಂನೆಟ್ಟಗೆಗೆಲ್ದನುದಾರಶೀಲನಚ್ಯುತನೆನುತಂ|
ಮಿಗೆಮೆಚ್ಚಿ ಕರುಣದಿಂದಂ| ಮೃಗಧರಧರನೊಲ್ದು ರೂಪುದೋರಿದನಾ
ಗಳ್| ೧೬

ಪೃಥ್ವೀವೃತ್ತಂ| ಘನಾಪಗೆಯಿನಿಂದು ವಿಂದನಲನಿಂಭುಜಂಗಂಗ

೪೦| ಕನಕ್ಕೃಷದ್ದಿನಸ್ಥಿಯಿಂ ಭಸಿತದಿಂ ಮಹಾಸಿಂಧುರಾ|ಜಿನಾಂಬರದಿ ಪತ್ತುತ್ತೋಲ್ಗಳನುದಾರ ಪಂಚಾಸ್ಯದಿಂ| ಮನೋಹರತೆವೆತ್ತು ರಾಜಿಸಿ ಪಸದಿ/ಜಾವಲ್ಲಭಂ| ೧೭

ವ| ಅಂತುರಾಜಿಸುವಶಿವನ ಮೂರ್ತಿಯಂ ಕಂಡಚ್ಯುತನಚ್ಚರಿಯಿಂ ಬೆಚ್ಚಿದಂತಾಗಿ ಪದದೊಳ್ಪೊರಳ್ದು ಗದ್ಗದಿಪಕೊರಳಿಂದ ಪ್ರತಿಮನಿಗೆ ದೊರೆಯೆನಿಸಿ ಜಾಜನಾಡಿದ ಪರಾಧಿಯೆನಿಪೆನ್ನಂ ಪೊಲ್ಲೆಯಂ ಕೊಳ್ಳದೆ ನಿನ್ನ ಮಹಾತ್ಮ್ಯೆಯಂ ಮೆರೆದುದ್ಧರಿಪುದೆನುತ್ತಂ ಭಯಭಕ್ತಿಯಿಂ ಬಾಷ್ಪವಾರಿಗಳಂ ಸುರಿಸುತ್ತಂ ಪರಾಶೀಭೂತನಾಗಿರ್ಪಾಗಳ್|

ಕಂ| ಕಡುಗರುಣದಿನಡಿಯೊಳ್ಪೈ| ಗೆಡೆದಿರ್ಪಚ್ಯುತನ ನೆತ್ತಿ ಸುಳ್ಳಿರಿಸಿಮುದಂ | ಬಡೆವಿಂದುಹಾಡ ನಸುನಗು ತೊಡನತ್ಯಾನಂಪದಿಂದಲಿಂದಿಂತೆಂದಂ| ೧೮

ವಿತತಪ್ರೂತದಮುಖದಿಂ| ಕೃತಿಯರಿಯದಜೇಯನೆನಿಸುವೆನ್ನಂಗೆಲ್ದು |ಪ್ರತಿಮಗುಣಗಚ್ಯುತಂಗೀ| ಕ್ಷಿತಿಯೊಳಗಾದೊರ್ದರೆಯೆನುತ್ತೆ ಪೊಗಳ್ದಂಗಿರಿಶಂ| ೧೯

ವ| ಏಂದಿಂದುಧರನಾನಂದದಿಂ ಕೊಂಡಾಡುತ್ತಂ ತಾಂಬರಿಸಿದದಿವ್ಯವಿಮಾನದೊಳಚ್ಯುತ ಮಾಹೇಶ್ವರಾನ್ವಿತಂ ಪಶುಪತಿಪ್ರಮಥಗಣಂಗಳ್ವೆರಸೊಡ್ಡೋಲಗಂಗೊಟ್ಟು ಸುಳ್ಳಿದಾಗಳ್|

ಕಂ| ಶ್ರುತಿಗಳ್ಪೊಗಳುತ್ತಿರಲ| ಚ್ಯುತರ್ಗೆಗಣಪದಮನಿತ್ತು ಮೆರೆದಕ್ಷಯನೂ| ರ್ಜಿತಮಹಿಮನೆನಿಪಗಿರಿಜಾ| ಪತಿನಲವಿಂದೊಪ್ಪಿ ತಿರ್ದನಾಸ್ಥಾಯಿಕೆಯೊಳ್| ೨೦|

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀಮತ್ಪಾಲಿಗೆರೆಯ ಪುರಾಧಿಪಶ್ರೀಸೋಮನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳಚ್ಯುತ ಮಾಹೇಶ್ವರಕಥಾವೃತ್ತಾಂತಂ ಚತುಃಪಂಚಾಶದಾಶ್ವಾಸಂ||

...ಶ್ರೀ...

## ಐವತ್ತೈದನೆಯ ಆಶ್ವಾಸಂ

### ತಿರುಕುರುಪಿತೊಂಡರ ಕಥಾವೃತ್ತಾಂತಂ

ತಿರುಕುರುಪಿತೊಂಡಮಾಹೇಶ್ವರಂಗೆ ಗಣಪದಮನಿತ್ತು ಮೆರೆದೊಪ್ಪು ವಶಂ| ಕರಶಿಖರ ಕರುಣಾಕರ| ನಿರುಪಮ ಸೋಮೇಶನೊಲ್ದು ಪಾಲಿಕನಮ್ಮಂ|| ೧

ಚಂಪ್ರಾವರ್ತಕವೃತ್ತಂ|| ಇಂದುಶೇಖರನಸೆಜ್ಜೆಯುಮನೆತಾ| ನೆಂದೆನಿಪ್ಪವರ ತೊಂತಧರೆಯೊಳಾ। ನಂದದಿಂಸುರಪುರಕ್ಕೆ ಣೆಯೆನಿಸು| ತ್ತಿಂಪು ಕಂಚಿಯಪೊಳಲ್ಕರಮೆಸೆಗುಂ|| ೨

ಕಂ|| ಒಪುಳತಟಾಕಾವಳಿಯಿಂ|ಸಹಕಾರಂಗಳನನೇಕಥಾನ್ಯದಬೆಳೆಯಿಂ| ಮಹಿಮೆಬಿಡದೆಸೆವುತಿರ್ಪುದು| ಮಹೇಶನಿಳಯಂಗಳಿಂದೆ ಕಾಂಚೀನಗರಂ|| ೩

ವರಶಿವಭಕ್ತರಭವನೋ| ತ್ಕರದಿಂಪಿರಿದೆಸೆವುತಿರ್ಪ ಕಾಂಚಿಯಪುರದೊಳ್| ತಿರುಕುರುಪಿತೊಂಡನೆಂಬಂ| ಪರಭಕ್ತಿಯನಿಷ್ಠೆವಿಡಿದುಬಾಳುತ್ತಿರ್ಪಂ|| ೪

ಇಳೆಯುಮಳಿನತೆಯುನನಿತಂ| ತೊಳೆಯಲ್ಕಾಂ ರಜಕಕುಳ ದೊಳೊಗೆದುಮಹಾನಿ| ರ್ಮಳಭಕ್ತನೆನಿಸು ತಂಕಂ| ಗೊಳಿಪ ಂತಿರುಕರುಪಿ ತೊಂಡನೆಂಬಶಿವೈಕ್ಯಂ|| ೫

ಹರಭಕ್ತರವರವಸ್ತ್ರೋ| ತ್ಕರಮಲ್ಲದೆ ಭವಿಗಳಂಬರವನೊಗೆಯದ ನಿಚ್ಚರಿತಂಜಂಗಮಭಕ್ತಿಯ| ಮರುಳಾತಿರುಕುರುಪಿ ತೊಂಡನತುಳೋದ್ದಂಡಂ|| ೬

ಹರಿಣೀವೃತ್ತಂ|| ತಿರುಕುರುಪಿತೊಂಡನಿಚ್ಚಂ ಭಕ್ತಿಭಾವದಿನೆದ್ದುಭಾ| ಸ್ಕರನುದಯದೊಳ್ಸ್ನಾನಾಪುಷ್ಪಂಗಳಿಂ ನೆರೆಕೈಮನಂ ಪರಮಮುದವೊಂದಾ ಗಲ್ಕಾಂಚೀಶನ ನರ್ಚನೆಗೆಯ್ದುಮಂ, ದಿರದೆ ಕುಣಿದಾಡುತ್ತಿಂ ಪಾಡುತ್ತಿರ್ಪನಲಂಪಿನಿಂ|| ೭

ವ|| ಅಂತೀಪರಿಯ ಲಿಂಗಾರ್ಚನೆಯಂಮಾಡಿ ಬಳಿಕನಂತರಂ ತಿರುಕುರಪಿತೊಂಡಂ ತನ್ನ ಮಡಿವಳಕಾಯಕಕ್ಕೆ ಚಿತ್ತವಿತ್ತಿರ್ಪ ನಂತುಮಲ್ಲದೆಯುಂ||

ಕಂ|| ಪಿರಿದೊಳ್ಳಿತನಿಸಿ ಶಿವಭ, ಕ್ತರವಸ್ತ್ರಮನೊಗೆದು ಕೊಟ್ಟುಕೊಳ್ಳಿ

ಸಿವಘನಮುಂ| ಶರಣರ್ಗೀವುತ್ತಿರ್ಪಾ । ದರದಿಂತಿರುಕುರುಪಿತೊಂಡನಿರ್ವಾಜಸವದೊಳ್|| ೮

ಕರಚರಣಂಗಳಂಕಾಯುಕದೊಳ್ । ವರಚಿತ್ತಂಲಿಂಗದಂಘ್ರಿಪಂಕೇರುಹದೊಳ್| ಬೆರಸಿತೆರಪಿಲ್ಲದಿಂತಸ| ವರತಂ ತಿರುಕುರುಪಿ ತೊಂಡನಿರ್ವಪಸರದೊಳ್|| ೯

ವ|| ಮತ್ತವಿಂತ್ತಿರ್ಪಸದಾಶಿವನೋಲಿಂ ಮನಮಂನೋಡಲ್ಕೈಲಾಸದಿಂಪ್ರಮಥಸಂಕುಳಮಂ ಕಳಿಪಲವರ್ಮರ್ತ್ಯರಭಕ್ತರ ವೇಷದಿಂದಸಗನೊಳಿಗೆಬಂದು ತಮ್ಮತಮ್ಮಸೀರೆಗಳಂಪಾಯ್ಕಲ್ಕಾತಿರುಕುರುಪಿತೊಂಡಂ ಹಸಾದವೆನುತ್ತವಂ ನಿರ್ಮಳಮಪ್ಪಂತೊಗೆಯಲುದ್ಯತನಾದನಂತಾಗಳ್

ಚಂ|| ಗಿರಿಗೆಸಮಾನಮಾಗಿ ಮಳಸೋತ್ಕರಮೊಟ್ಟಿರೆಕಂಡು ಭಕ್ತಿಯಿಂ| ಹರಶರಣೆಂದೆನುತ್ತ ಮವಮಾರಿಯೊಳದ್ದಿ ಶಿಲಾತಲಾಗ್ರದೊಳ್| ಪಿಂದೊಗೆದೊಲ್ದು ನೋಡಲವುಶೀಳದೆ ಪತ್ತುಪಮಾಗಮಾಗಲಾ| ಸುರದೊಳೆ| ಮತ್ತೆಮತೆ ತ್ತಗೆವುತೊಟ್ಟುತ ಮಿರ್ದನುಮೇಶ ಕಿಂಕರಂ|| ೧೦

ವ|| ಅಂತುಮೇಶಕಿಂಕರನವಂ ಕಂಡಂಜೆನಂಜೆನೆನುತ್ತಂತು ಸೀರೆಗಳ್ ಘನಮಾಗಲ್ಕಂತಂತೆ ಸಂತೋಷಂಬೆರ್ಚೆ ನಿರ್ಮಳಮಪ್ಪಂತವನೊಗೆದು ಘಳಿಗೆಯಂಮಾಡಿ ಘಟ್ಟಿಸಿನುಂಪುಗೆಯ್ದು ತದ್ಗಣಂಗಳಗೊಪ್ಪಿಸಿ ಕೊಟ್ಟವರೊಕ್ಕುದಂ ಸದ್ಭಕ್ತಿರಸಾವೇಶ ಬಾನಂದದಿಂದಿರುತಿರ್ದನಂತುಮಲ್ಲದೆಯುಂ||

ಕಂ|| ಪರಭಕ್ತನಜಸದೆಸೆವಂ| ಭರದಿಂತೋರ್ಪಂತಿರುಟ್ಟತಮ್ಮಯಧವಳಾಂ| ಬರತತಿಮೆರೆಯಲ್ ಪ್ರಮಥರ್| ಹರನಲ್ಲಿಗೆಬಂದು ಕೈಗಳಂಮುಗಿದೆಂದರ್|| ೧೧

ಪಿರಿದುಮವಾಸಂಪತ್ತು! ತ್ತಿರಲಂಜವೆಪಲವುಸೀರೆಗಳನೊಗೆದೆಮಗಾದರದಿಂಲೇಸೆನಿಸಿದತ, ಚ್ಚರಣಂಗೆಣೆಯಿಲ್ಲಧರೆಯೊಳೆಂದ ಪ್ರಮಥರ್||

ವ|| ಅಂತಾತಿರುಪಿತೊಂಡನಭಕ್ತಿಯುಂ । ಪ್ರಮಥಕೋರ್ಪಂಡಾಡಲ್ಕೇಳ್ದು ಮೆಚ್ಚಿಭಕ್ತವತ್ಸಳನಪ್ಪ ಶಂಭುತಾಂ ನೋಡಲ್ಕೆಂದು ಕೈಲಾಸದಿಂ ಪೊರಮಟ್ಟು ಮಾನವತಪಸಿಯಾಗಿಕಾಂಚೀಪುರಕ್ಕೆಯ್ತಂದಾಗಳ್||

ಕಂ|| ಕರದಕಪ್ಪರ ಮೆರೆವಾ... ದಮು... ಂಗಮದುಪೆಶಾ

ಕುಳಮೆ ಸೆವಾ। ಕರಿಚರ್ಮಕಂಥೆಯುದಾ। ಗಿರಿಪಶುಪತಿ ಭಿಕ್ಷುವೇಷ
ದಿಂದಂಬಂದಂ॥ ೧೨

ವ॥ ಅಂತುಲೀಲೆಯಿಂದಸಗ ವೊಳಿಗೆಬಂದಮುನಿ ವೇಷದೀಶನಂ
ದೂರದೊಳ್ಕಂಡಾ ನಂದವಮನೆಯಿದ್ದು ಭಕ್ತಿರಸಾವೇಶದಿಂ ಪರಿತಂದುಚರ
ಣಯುಗದೊಳ್ಪೂರಳ್ದು ಪರವಶನಾಗಿರಲ್ಕರುಣದಿಂ ಪಿಡಿದೆತ್ತಿಪರಸುತ್ತೆ
ಲಿವುಗನೆ ತಿರುಕುರುಪಿ ತೊಂಡನೆಂಬಪೆಸರಭಕ್ತಂ ನೀನೆನಿರ್ಮಲಾತ್ಮ
ಕನೆಂಬುದಂ ಕೇಳ್ದುಬಂದೆನೆನುತ್ತಿಂತೆಂದಂ॥

ಕಂ॥ ಪೊಪದೆವ್ಮ್ಮ ಕರಿಯಕಂಥೆಯು। ನಿದನಿಂದಿರದೊಗೆದು ಬಿಳದ
ನೊಲವಿಂಪಾಡುವು ದದುನವುಗಥಿ‑ಯೆನುತ್ತಂ। ಮುದದಿಂತಿರುಕು
ರುಪಿ ತೊಂಡಗೀಶಂನ.ಡಿದಂ॥ ೧೪

ವಾದೇವಂಬೆಳಸಿದೊಡೆಪ ಸಾದವೆನುತ್ತೀಸಿಕೊಂಡು ಕಂಥೆಯುನ
ದನ। ತ್ತಾದರದಿಂದಂಪೊತ್ತುಗು। ಶೋದಧಿ ತಿರುಕುರುಪಿತೊಂಡ ನೆರೆ
ತಾಂಮಗುಳ್ದಂ॥ ೧೫

ವ॥ ಅಂತಾಗಳಾವ ನಿಯಂಕಳುಪಿಕಂಥೆಯಂಪೊತ್ತುಕೊಂಡುಬಂದ
ಸಗವೊಳೆಯು ಕಲ್ಲಮೇಲಿರಿಸಿ ಶಿವಭಕ್ತಿಯುಮುರುಳಪ್ಪತಿರುಕುರುಪಿತೊಂ
ಡನಪಂ ನಿರ್ಮಳಜಲದೊಳದ್ದಿ ಹರುಷದಿಂ ಜಳ್ಪಿಸಿ ಮೊಗೆವುತಿರ್ದ ನಾ
ಗಳ್॥

ಕಂ॥ ಉದಯಂವೊದಲಾಗಿರೆನಿ। ಲ್ಲದೆಜಾವಂಮೂರು ಮುಟ್ಟಲೊಗೆ
ದೊಗೆದೊರಸು। ತ್ತುದಕದೊಳದ್ದಿ ಸಿರೀಕ್ಷಿಸು। ತಘಟುದಂಬೀಸಿಮು
ತ್ತವೊಗೆವುತ್ತಿರ್ದಂ॥ ೧೬

ಕರದತೊವಲ್ಪಿಡಿಬತ್ತ್ಯಾ। ಸುರದಿಂಪೊಗೆ ದ. ಗೆಮನೋಡಲಾಕಂ
ಥೆಕರಂ। ಕರಿವನಿಸುತಿರ್ಮದಲ್ಲದೆ। ನಿರುತಂಬಿಳಿದಪ್ಪ ಪೊಲಬದಿಲ್ಲಾ
ಯ್ತಾಗಳ್॥ ೧೭

ಅನಿತಕ್ಕೊರೆಳಗಿಂದಂ। ಮುನಿಬರುತಿರೆಕಂಡು ನೊಂದುವುಸಿಪೊ
ರ್ದಿತ್ತಿಂ। ದೆನಗಕಟೀಕಂಥೆಯುಬಿಳಿದೆನಿಸದೆ ಪೋಯ್ತೆನುತೆವಱುಗಿ
ದಂತದ್ಭಕ್ತಂ॥ ೧೮

ವ॥ ಅಂತುಮರಗುತ್ತಾಮುಗ್ಧನಪ್ಪ ತಿರುಕುರುಪಿತೊಂಡಂ ಕಂಥೆಬಿ
ಳಿದಾಗದೆನುತ್ತಂತನ್ನಂ ಪರಿಚ್ಛೇದಿಸಲ್ಬಗೆದಂತಾಗಳ್

ಕಂ॥ ಬಿಳಿದಾಗದೆ ಕಂಥೆಗೆತ। ತ್ಕಳೇವರವನೊಗೆದು ಕೊಡುವೆನೆನು ತಾ ಕಲ್ಲೊಳ್॥ ಘಳಿಲನೆ ತನ್ನಂ ತಾನ, ಪ್ಪಳಿಸುತ್ತಿರೆ ಭಕ್ತನಂ ಮಹೇಶಂ ಪಿಡಿದಂ॥ ೧೯

ಕರುಣದಿನ ಭವನಂಪಿಡಿದಾ। ದರದಿಂ ತಿರುಕುರುಪಿತೊಂಡ ನಿನ್ನಯ ಥಲದಾ। ಸುರಭಕ್ತಿಗೊಲಿದೆನೆನುತಂ। ಪಿರಿದೋವುತೆ ತನ್ನ ರೂಪುದೋರಿದನಾಗಳ್॥ ೨೦

ಭುಜಂಗಪ್ರಯಾತವೃತ್ತಂ॥ ನದೀ ವಾರಿ ಚಂದ್ರಂ ಹುತಾಶಂ ಭುಜಂಗಂ। ಪೊದಳ್ದಸ್ಥಿ ಭಸ್ಮಂ ವಿಷಂ ದುರ್ಗಿ ಶೂಲಂ। ಮಹೇಭಾಜಿನಂ ಪತ್ತು ತೋಳ್ಪಂಚವಕ್ತ್ರಂ ಮುದಂಬೆತ್ತು ಕಣ್ಗೊಪ್ಪಪ್ಪಲೊಪ್ಪಿರ್ದನೀಶಂ॥

ವ॥ ಅಂತೊಪ್ಪುವ ದಿವ್ಯಮೂರ್ತಿಯುಮಂ ಕಂಡು ತಿರುಕುರುಪಿತೊಂಡಂ ಬಿಡವಂಕಡೆವಗಮುಂ ಕಂಡಂತಾನಂದಮನೆಯ್ದಿ ಪರ್ಚಿ ಪೆಗ್ಗತ್ತಡಿದಾವರೆಯೊಳ್ಸ್ರಗಡೆದು ಪರವಶನಾಗಿರ್ದಾಗಳ್॥

ಕಂ॥ ಪಿಡಿದೆತ್ತಿ ಕುಳ್ಳಿರಿಸಿ ಪೆ। ರ್ಚಿಡವುತೆ ತಿರುಕುರುಪಿ ತೊಂಡಶೂನ ಲಿದಾಗಳ್। ಕರಾಭಕ್ತಿಯ ಛಲದೊಲವಂ। ವೃಷಭನಾಗಳ್ನಂದಿನಾಥ ನೋಡನಿಂತೆಂದಂ॥ ೨೨

ಎನ್ನಯ ಕಂಥೆಗೆ ಕಡುಪಿಂ। ತನ್ನಂ ತಾಂ ಶಿಲೆಯೊಳೊಗೆದು ಕೊಂಡನೆನುತ್ತಂ। ಪನ್ನಗಭೂಷಣನೊಲ್ಮೆಯಿಂ। ದುನ್ನತ ತಿರುಕುರುಪಿತೊಂತರ ಸವಂಪೊಗಳ್ದಂ॥ ೨೩

ವ॥ ಅಂತು ಕೊಂಡಾಡುತ್ತಂ ತಾಂ ಬರಿಸಿದ ದಿವ್ಯವಿಮಾನದೊಳ್ ತಿರುಕುರುಪಿತೊಂಡರಂ ಕರುಣದಿಂ ಕುಳ್ಳಿರಿಸಿ ನಿಯಾಮಿಸಲಾಗಳ್॥

ಕಂ॥ ತಿರುಕುರುಪಿತೊಂಡಭಕ್ತಂ। ಬೆರಸಾಕಾಶಮನೆ ಬೆಳಗುತಂ ಮಣಿಮುಕುಟಂ। ಸುರಪುಷ್ಪವರ್ಷಸ್ರವದಿಂ। ದಿಶದೇಳ್ತಂದುತ್ತ ರಜತಗಿರಿಗಂತಾಗಳ್॥ ೨೪

ವ॥ ಅಂತೇಳ್ತಂದು ತಿರುಕುರುಪಿ ತೊಂಡಂ ತಾಂ ಬೆರಸು ಗಿರಿಜೆಯರಸಂ ಮಹಾಗಣಸಮೇತನತಿಪರುಷದಿಂ ಬೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ಘನಕಾರುಣ್ಯಂ ಬಿಗಲತಿ। ವಿನಯದಿ ತಿರುಕುರುಪಿತೊಂಡ ಮಾಹೇಶಂಗ ... ದನಘ ಶಿವಂ ... ವುತಿರ್ದನಾ

ಸ್ಥಾಯಿಕೆಯೊಳ್॥ ೬೫

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಪುಷ್ಪತ್ರಿಷಷ್ಟಿಪುರಾತನರ ಚಾರಿತ್ರದೊಳ್ತಿರುಕುರುಪಿತೊಂಡಭಕ್ತ ಮಾಹೇಶ್ವರ ಕಥಾವೃತ್ತಾಂತಂ ಪಂಚೋತ್ತರಪಂಚಾಶ ದಾಶ್ವಾಸಂ॥

— ೫೫ —

ಐವತ್ತಾರನೆಯಆಶ್ವಾಸಂ

ತಿರುನಾಳ್ಪೋವರ ಕಥಾವೃತ್ತಾಂತಂ

ಧರೆಯಜನಮದ್ಭುತಂಬಡೆ। ತಿರುನಾಳ್ಪೋವರ್ಗೆಮೆಚ್ಚಿ ಗಣಪದಮುಂ ಸ। ತ್ಕರುಣದಿನಿತ್ತೊಲವಿಂ॥ ಜರನುತಸೋಮೇಶನೊಲ್ದು ಪಾಲಿಕೆನಮ್ಮಂ॥ ೧

ಘನಚೋಳೋರ್ವರೆಯೊಳ್ಸ। ದ್ವನದಿಂನವಗಂಧಶಾಲಿಗಳಗರ್ವಗಳಿಂ। ತನುಗಂಪಿನಪೂಮೋಂಬದಿ, ನನವರತಂವಾದನೂರುನೆರೆರಂಜಿಸುಗುಂ॥

ನಳನಳಿಸಿಪ್ರೊಳೆವ ಪೊಸಪೊ।ಗಳಸಂಗಳನುಳ್ಳಚೆಲ್ವಲಿಂಗಾವಸಥಂ। ಗಳನಭವಭಕ್ತಗೃಹಸಂ ಕುಲದಿಂದಾವಾದನೂರ್ಕರಂರಂಜಿಸುಗುಂ॥ ೩

ವ॥ ಮತ್ತಮಾವಾದ ನೂರಬಹಿರ್ವಳಿಯದೊಳೊಂದು ಮನೆಯಂ ಮಾಡಿಕೊಂಡು ಭವಿಗಳ್ಪೊಲಂಕಮಂತೆಪಿರಿಯ ಭಕ್ತನೆನಿಸಿಕೊಳ್ಳುತ್ತಂ ತಿರುನಾಳ್ಪೋವನೆಂಬ ಪೆಸರುಳ್ಳ ಮಾಹೇಶ್ವರಂ ಗುಪ್ತದೊಳ್ ಜಂಗಮಲಿಂಗಕ್ಕೆ ಬೆಸಕೆಯ್ವುತ್ತಿರ್ದನಂತುಮಲ್ಲದೆಯುಂ॥

ಕಂ॥ ಭವಿಗಳಕ್ಕೈಯಂಪೊರ್ದಂ ಶಿವಭಕ್ತಕೊಟ್ಟ ಕೂಲಿಕೊಂಡ

ನವರತಂ| ತವರ್ಗಳಕ್ಕೈಕೆಲಸಮನು ತ್ಸವದಿಂದಂ ಮಾಳ್ಪನಲ್ಲಿತಿರುನಾಳ್ಪೋವಂ|| ೪

ವ|| ಅಂತೀಪರಿಯ ಕೃಷಿಯಂ ಮಾಡುತ್ತಿರ್ಪನ್ನೆಗ ಮೊಂದುದಿವಸಂ ಬೆಳೆಸಿರಿವಂತನಪ್ಪೊರ್ಬ ಶಿವ ಬ್ರಾಹ್ಮಣನೊಂದು ತಿಂಗಳ ಕೂಲಿಯನೊಮ್ಮೆಗೆಕೊಟ್ಟು ತನ್ನ ಕಳವೆಯ ಗರ್ದೆಯಂ ಕೊಯ್ದೊಟ್ಟಿ ಕೊಡಲ್ವೇಳ್ಕೆಂದೊಡದಂ ಕೈಕೊಂಡು ತಿರುನಾಳ್ಪೋವಂ ಕೂಲಿಗೆಯ್ಯುತ್ತಿರ್ದನಂತುಮಲ್ಲದೆಯುಂ||

ಕಂ|| ತಿರುನಾಳ್ಪೋವಂ ತಾನೀಪರಿಯೊಳ್ಕೂಲಿಯನೆ ಮಾಡುತಿರುತೊಂದುದಿನಂ| ಭರದಿಂಪೊನ್ನಾಂಬಲದಾ| ತಿರುನಾಳ್ಗಂಪೋಪೆನೆಂದು ಮನಮಂತಾಳ್ದಂ|| ೫

ವ|| ಪಿರಿದುಂ ಕಾಯಕವೆಂಬುದುಷ್ಕಳಮಪ್ಪೀ ತಿಂಗಳೊಳ್ವೃಕ್ಷಯಂ ತಿರುನಾಳಂ ನಲವಿಂದೆ ಪೋಪೆನೆನಿಪೊಂದುದ್ಯೋಗ ದೊಳಾತ್ಮನಂ| ವರಪೊನ್ನಾಂಬಲ ನಾಥನಪ್ಪ ಶಿವಲಿಂಗಧ್ಯಾನದೊಳ್ಸಂತತಂ ತಿರುನಾಳ್ಪೋವನತೀವ್ರಭಕ್ತಿಯೊದವಿಂದಿರ್ಪಂ ಮಹಾನಂದದಿಂ|| ೬

ಕಂ|| ತಿರುನಾಳೆಂಬುದುತನಗಂ| ನಿರುತಂ ತಾಯ್ತಂದೆ ಬಂಧುಗತಿಮತಿಯೆ ನುತಂ| ತಿರುನಾಳ್ಪೋವಂ ತಾನೀಪರಿಯೊಳ್ಪೊ ನ್ನಾಂಬಲಮನೆ ಜಾನಿಸುತಿರ್ಪಂ|| ೭

ವ|| ಅಂತೀಪರಿಯೊಳಿರುಳುಂಪಗಲುಂಪೊನ್ನಾಂಬಲೇಶನತಿರುನಾಳ್ಗೆ ಪೋಪೆನೆಂಬುದ್ಯೋಗದಿಂ ಪಸಿವುನೀರಡಕೆಯುಂ ಮರೆದುಮನೆಗೆಬಂದು ಪೋಪನುವಂ ಕಾಣದೆಸುಯ್ದುಳಲ್ದು ಇನ್ನೆಂತುದಿನಂ ಪೊನ್ನಾಂಬಲೇಶನಿನ್ನಂ ಕಾಣದೆಂತುಬರ್ದುಂಕುವೆನೆನುತಂ ತಿರುನಾಳ್ಪೋವನೆನೆವುತ್ತೆಂತಾನುಂಬೆಳಗಂಮಾಡಿ| ನಿಚ್ಚಕಿನಂದದಿಂ ಗರ್ದೆಗೆಪೋಪಾಗಳ್ಪೊನ್ನಾಂಬಲಕ್ಕೆ ಪೋಗುತ್ತಿರ್ಪಜಾತ್ರೆಯವರಂ ಕಂಡುಹರ್ಷಂಬಂದಂತೆಹಾರೈಸಿಪಿರ್ಕಿ ಪಿಗ್ಗುತ್ತಿರ್ಪಾಗಳ್ಮುನ್ನೆ ಕೂಲಿಯಂಕೊಟ್ಟಿರ್ದ ಶಿವಬ್ರಾಹ್ಮಣಂ ಕರೆಯಲ್ಬಂದೊಡಾ ತಿರನಾಳ್ಪೋವನಿಂತೆಂದಂ||

ಕಂ|| ಮುನ್ನೆಂದುಂಪೊನ್ನಾಂಬಲ ಕಾಂನಿರುತಂಪೋದುದಿಲ್ಲವದು ಕಾರಣದಿಂ| ದಂನಾಳ್ಪೋಪನೊಲವಿಂ ದೆನ್ನಂ ಕಳುಪುವುದೆನಲ್ಕೆ ವಿಪ್ರಂನುಡಿದಂ|| ೮

ತಿಂಗಳಕೆಲಸವಮುನೀಗಲ್ ಪಿಂಗದೆಮಾಡಿ ದೊಡೆನಾಳೆಕಳುಪುವೆನಾಂ
ನಿ ನ್ನಂಗುಣನೆಂಬಾತದ್ವಿಜ ಪುಂಗೊಲವಿಂಪೆಂದನಂದುತಿರುನಾಳ್ಪೋ
ವಂ॥ ೯

ಇಂದೆಲ್ಲಾ ಕೆಲಸವುನಾಂ| ಕುಂದಿಲ್ಲದೆಮಾಳ್ಪೆನೆಂದು ಶರಣಂಕೈ
ಕೊಂಡಂದಾವಿಪ್ರನಗದೆಂಗೆ| ಬಂದೊಲವಿಂಕೊಯ್ಯುತ್ತಿರ್ದ ನತು
ಳೋತ್ಸವದಿಂ॥ ೧೧

ಪ॥ ಅಂತುತ್ಸಾಹದಿಂ ತಿರುನಾಳ್ಪೋವಂ ತಿರುನಾಳ್ಗೆಪೋಪ ಭಕ್ತ್ಯು
ದ್ರೇಕದಿಂ ಮೆಯ್ಮರೆದು ಕಡೆಯಿಲ್ಲದೆಬೆಳೆದಗದೆಯುನನಿತನೊರ್ವನೆ
ಕೊಯ್ಯುತ್ತಿರಲ್ಜಗದ್ವ್ಯಾಪಕನಪ್ಪಶಿವಂಕರುಣದಿಂನಿಜಭೂತಗಣಂ
ಗಳ್ಗೆ ಕೊಯ್ದು ಕೊಡುವುದೆಂದು ನಿರೂಪಿಸಲ್ಕನಿಬರೆಲ್ಲಂ ಬಂದುನಿಮಿ
ಷದೊಳದೃಶ್ಯಾಕಾರದಿಂ ಕೊಯ್ದುಬ್ಬಳಿಕ್ಕಲದಂ ವಿಪ್ರಂಕಂಡು ಮನ
ದೊಳದ್ಭುತಂ ಬಟ್ಟೀಕೊಯ್ದ ನೆಲ್ಲ ಪುಲ್ಲವನೆಲ್ಲವನೆನ್ನ ಕಳದೊಳ್ಪೊತ್ತು
ತಂದೊಟ್ಟ ಪೋಪುದೆನಲ್ಕಾಗಳ್॥

ಮ॥ ತಿರುನಾಳೆಪ್ಪೋವನುಮೇಶ ಭಕ್ತಿರಸದುದ್ರೇಕಂ ಮಿಗಲ್ಕಾಗ
ಳಾ| ಸುರದಿಂಭೂತಗಣಾನ್ವಿತಂ ಪಿಡಿದುಮುನ್ನಂ ಕೊಯ್ದಪುಲ್ಲೆಲ್ಲ
ವಂ| ಭರದಿಂಪೆರ್ಬೊರೆಗಟ್ಟಿ ನೋಳ್ಪಜನಮುಂದಂದದ್ಭುತಂ ಬೆತ್ತಿರಲ್
ಶಿರದೊಳೆಪ್ಪೊತ್ತು ಕಳಕ್ಕೆತಂದು ನಲಿದೊಂದೇಬಾರಿಯಿಂದೊಟ್ಟಿದಂ॥

ಕಂ॥ ಪಿರಿದಪ್ಪನೆಲ್ಲುಪುಲ್ಲಂ| ಹರಕೃಪೆಯಿಂದೊಮ್ಮನಲ್ಲಿ ತಂದೊಟ್ಟಿ
ಕೊಡಲ್| ತಿರುನಾಳ್ಪೋವಂಗಂದ| ಚ್ಚರಿಪಟ್ಟಾಃ ಪ್ರನೋತು ಪೋಗೆ
ನುತಿರ್ದಂ॥ ೧೨

ವ॥ ಅಂತಪೂರ್ವನಾಶ್ಚರ್ಯಂ ಬಟ್ಟುಕಾರಣ ದೇಹಿಯಪ್ಪನೆಂದರಿದು
ಕೈಗಳಂಮುಗಿದು ಕಳುಪಲ್ಕಾಗಳಾಸವ. ಯದೊಳ್ಬಾರಿ ಶಾರರ್ಬಂದು
ಪೊನ್ನಾಂಬಲಕ್ಕಕ್ಕಿ ಗಳಂಕಳುಪುವುದೆಂದು ಸದ್ವಿಪ್ರಂಗೆ ಪೇಳಲ್ಕೇಳ್ದು
ಬಿಟ್ಟಸೂಳ್ಗಳಂ ಪರಿಕಿಸಲ್ಪೋಗುತ್ತಿರಲ್ಕದಂ ಕಂಡುತಿರುನಾಳ್ಪೋವಂ
ಭಕ್ತ್ಯುದ್ರೇಕದಿಂ ಪಲವುಕೆಲವುನೆಲ್ಲಕ್ಕಿಯುಮೂಡೆಗಳಂತಾಂಪೊತ್ತು
ಕೊಂಡು ಪೇರಮಟ್ಟಾಗಳ್॥

ಕಂ॥ ನೆರೆದತುಳಪ್ರಮೋದದಿ ನುಘೀಯೆನುತಂ ತಿರುನಾಳ್ಗೆ ಪೋಪ
ನ ಚ್ಚರಣಸಮೂಹದೆತ್ತರಮುನೀಕ್ಷಿಸಿ ಹರ್ಷಮನೆಯ್ದಿ ಪರ್ಚುತ|

ಜ್ಜರಿಸಿಗಳುಬಿ- ಪಾಡುತೊಲವಿಂ ನಲಿದಾಡುತೆಬಂದು ಕೂಡಿಕೊಂ|
ಡಿರಲಪ್ಪರೊಳ್ಮಹೋತ್ಸ| ವದೆತಾಂತಳೆರ್ದ ಂಗಿರಿಜೇಶಕಿಂಕರಂ|| ೧೩

ಕಂ| ಕೇರಲಿಗಳ್ತಂಪನವಕ್ಷಿಯೊ| ಳರದುದಯಿಸುವ ಶುತನುವಿನೊಳ್ಪುಳಕಂತೋ| ರಿರೆಭಕ್ತಿಯಿಂದೆನಡೆದಂ ತಿರುನಾಳ್ತಿರುನಾಳೆನುತ್ತೆ ತಿರುನಾಳ್ಪೋವಂ|| ೧೪

ಪೊನ್ನಾಂಬಲವದುಮನದೊ| ಳ್ಪಾಂನೆಲಸಿರೆಭಕ್ತಿರಸದಪರವಶದಿಂದಂ| ಪೊನ್ನಾಂಬಲಪೊನ್ನಾಂಬಲ ಪೊನ್ನಾಂಬಲಶರಣೆನುತ್ತೆ ಭಕ್ತಂ ಬಂದಂ|| ೧೫

ಆಹಾಪೊನ್ನಾಂಬಲಪತಿ| ಹೋ ಹೋಪೊನ್ನಾಂಬಲೇಶ ಶರಣೆಂದೆನುತು| ತ್ಸಹವಿ ಬರೆಬರೆಕಂಡಂ| ಮೋಹನತೆಯನೀವ್ರುತಿರ್ಪ ಪೊನ್ನಾಂಬಲಮಂ|| ೧೬

ವ|| ಅಂತಾಪೊನ್ನಾಂಬಲಮಂಕಂಡು ತನ್ನಮನದೊಳುಬ್ಬಿ ಕೊಬ್ಬುತ್ತಿಂತೆಂದಂ||

ಕಂ|| ವರವಾರಣಾಸಿಯೊಳ್ಶ್ರೀ| ಗಿರಿಯೊಳ್ಸುತ್ತೀಕ್ಷಿಸಲ್ಕೆ ಮುಕ್ತಿಗಳೆಂಬಾ| ಪರಿಯಿಂಪೊನ್ನಾಂಬಲವಾ| ದರದಿಂನೆನೆವರ್ಗೆ ಮೋಕ್ಷಮಪ್ಪುದುನಿರುತಂ|| ೧೭

ವ|| ಅಂತಾಮಹಿಮೆವಡೆದೆಸೆವ ಪೊನ್ನಾಂಬಲದತಿರುನಾಳ್ವಂದೊಡಂ ಬನೇಕಭೇರಿಗಳದಿಂಧಿಮಿಕೆಂಬ ಮುರಜೆಗಳ ಖಿರಖಿರಟೆಂಬಕರಡೆಗಳ ಝುಗುರ್ಝುಗುಗೆಂಬ ಪಾವುಜೆಗಳ ಛಗಕಣಕಣೆಂಬ ಕಹಳೆಗಳ ಭುಂಭುಂಯೆಂಬಶಂಖಂಗಳ ಘಣಂಘಣಮೆಂಬ ಘಂಟೆಗಳನಾನಂದದಿಂದುಘೆಯುಘೆಯೆಂಬ ಭಕ್ತಜನದಸಂಘಮುದೊಳ್||

ಚಂ| ವರನವರತ್ನಮಂಟಪದ ನಾಡ್ಸೆಯೊಳ್ರನೆದಾಡುತಿರ್ಪಸೀ|
ಗುರಿಪೊಸಚಾಮರಂ ಪೊಳೆವಕನ್ನಡಿಪೊಂಗಳ ಸಂಪೃಷಧ್ವಜಂ| ಸುರುಚಿರ ತೋರಣಂ ಕೆಲದೊಳೊಪ್ಪು| ವಪೆಗ್ಗಡಿಗಳ್ವಿರಾಜಿಸ| ಲ್ಗಿರೀನತೇರ್ಚಿಶರಂ ಮೆಸೆವುತೇಳ್ತರುತಿರ್ದುದು ತತ್ಪುರಾಂತಪೊಳ್| ೧೮

ವ|| ಅಂತಾಬೀದಿಯೊಳ್ಮೆರೆವುತ್ತಂಬಪ್ಪ ಪೊನ್ನಾಂಬಲೇಶನಪೊಂತೇರಂಸುತ್ತಿ ನಿಂದಾನೆಗಳನೇರಿ ನೋಳ್ಪರಾಜಕುಮಾರವರ್ಗಂಗಳಿಂ| ಸಿಂಗರದ ತುರಂಗಂಗಳ ನೇರಿ ನೋಳ್ಪಸಚೆವೇಂದ್ರ ಸಂದೋಹಂಗಳಿಂ ಕ

ಶುಮಾಡಂಗಳನೇರಿನೋಲ್ಪ ಕಮನೀಯಾಕಾಂತಾ ಸಂತಾನಂಗಳಿಂಮ
ಗಿಲಂಪುಟ್ಟನೋಲ್ಪ ಪಿರಿದಪ್ಪನೆರವಿಗಳಿಂದಾನಂದದಿಂದಿದಿರೊಳ ರುಪಾ
ಡಂಪಾಡುವ ಗಾಯಕನಿಕಾಯಂಗಳಿಂ ದುಬಿನಲವಿನಿಂನರ್ತಿಪ ನ
ರ್ತಕನಿಕರಂಗಳಿಂ ಬೊಬ್ಬಿರಿದಬ್ಬರಿಸಿ ಕಠಾರದಿಂ ಕೊರಳ್ಗಳಂ ಕಡಿದಿ
ಡುಕುವಕ್ಕೈಕೊಳರಬಳಗಂಗಳಿಂ ಕಣ್ಣುಗಳಂ ಕಳೆದು ನಿವಾಳಿಸುವ ವೀರ
ರ್ಕಳಿಂದತುಳ ಸಂಭ್ರಮಂಬೆತ್ತು ತಿರುನಾಳೆಸೆವುತಿರ್ಪಾಗಳ್॥

ಕಂ॥ ಹೃದಯಂಗಳಂದೆ ಪೊರಪೊ। ಣ್ಮಿದಕಮಳಾವಳಿಯೆನಲ್ಕೆ ಮುಗಿ
ದಕರಂಗ। ಳ್ಪದೆದೊಪ್ಪೆ ನೋಳ್ಪಭಕ್ತಾ। ಘದೊಳಭುವನ ತೇರ್ಕಸಂ ವಿ
ರಾಜಿಸಿತಾಗಳ್॥ ೧೯

ವ॥ ಆಸಮಯದೊಳ್

ಕಂ॥ ಎಡಹಿದೊಡರಿಯದೆವಿಗೆಕರೆ। ದೊಡೆಕೇಳದೆ ಪರವಶತ್ವದಿಂ
ಕುಣಿದಾಡು। ತ್ತಡಿಗಡಿಗೆಶಂಭುಶಂಕರ। ಮೃಡಜಯಎನುತಿರ್ದ ನುವಿನ
ತಿರುನಾಳ್ವೋವಂ। ೨೦

ಜಯಜಯಪೊನ್ನಾಂಬಲಪತಿ। ಜಯಜಯಪೊನ್ನಾಂಬಲೇಶ ಜಯ
ಜಯಸಚ್ಚಿ। ನ್ಮಯಪೊನ್ನಾಂಬಲದರಸನೆ। ಜಯಜಯಎನುತಿರ್ದನೊ
ಸೆದುತಿರ ನಾಳ್ವೋವಂ॥ ೨೧

ನೆರವಿನಿರೀಕ್ಷಿಸಿಪಾರುಳೆನು। ತಿರೆಕಣ್ಗಳಿ ನುಣ್ಮಿವಶುಧಾರೆಗಳಂ
ದಾ। ಸುರದೀಪಾಡುತ್ತಾಡುತೆ। ತಿರುನಾಳ್ವೋವಂ ಬರುತ್ತಿರಲ್ಕಂತಾ
ಗಳ್॥ ೨೨

ಪರವಶದಭಕ್ತಿಯಿಂದಂ। ತಿರುನಾಳ್ವೋವಂ ಕಡಂಗಿಮೆಯ್ಮರೆದಿರೆ
ಸ। ತ್ಕರಣದಿಪೊನ್ನಾಂಬಲಪತಿ। ಪರಿದೀಕ್ಷಿಸಿ ಕೂರ್ತುನಂಬಿಯೊಡ
ನಿಂತೆಂದಂ॥ ೨೩

ನೆರಪಿವುಗಲೀಯುದಿಪರ್ನ। ತಿರುನಾಳ್ವೋವಾಖ್ಯಪರಮ ಭಕ್ತನ
ನೊಯ್ದಾ। ದರದಿಂಕೂಪವಜಲದೊಳ್। ತ್ವರಿತದಿಪಿಡಿದದ್ದಿಕೊಂಡು
ಬಾಸೀನೆಂದಂ॥ ೨೪

ವ॥ ಎಂದುಸದಾಶಿವಂ ನಂದಿನಾಥಂಗೆ ನಿಯಾಮಿಸಲಕ್ಕಾತಂಪೋಗಿ॥

ಕಂ॥ ತ್ವರಿತದಿನಾತಿರುನಾಳ್ವೋ। ವರನೋಲವಿಂನಂದಿಕೇಶ್ವರಂಪಿಡಿ
ದಾಗಳ್। ವರದೇವಕೂಪಜಲದೊ। ಳ್ಪರಿಪರ್ದಿಲ್ವಿಪ್ರಕಾಜಪನಿಸುತ್ತ

ರ್ದ೦॥ ೨೫

ವ॥ ಅಂತೇಳಲ್ಕಾಗಳ್॥

ಕಂ॥ ಭರದಿಂನಂದೀಶಂಪೋ। ಗಿರಪೋವಿಂದೇಳ್ತರಲ್ಕೆ ನಲಿವುತ್ತಿ ರ್ಪಾ। ತಿರುನಾಳ್ಪೋಪರಭಕ್ತಿಗೆ। ಹರನಾಗಳ್ಮೆಚ್ಚಿರೂಪು ದೋರಿದ ನಾಗಳ್॥ ೨೬

ಲಲಿತಪದವೃತ್ತಂ॥ ವರಜಟೆಗಂಗೆಹಿಮಾಂಶುಹುತಾಶಂ। ಗರಳಗಳಂ ಭಸಿತಂಗಜಚರ್ಮಂ। ನಿರುಪಮಪಂಚಮುಖಂ ದಶದೋರ್ಗಳ್। ಪಿರಿದೆಸೆಯಲ್ ಶಿವನೊಪ್ಪಿದನಾಗಳ್॥ ೨೭

ವ॥ ಅಂತೊಪ್ಪುವಪೊನ್ನಂಬಲೇಶನದಿವ್ಯಮೂರ್ತಿಯಂಕಂಡಾನಂದಮುನೆಯ್ದಿ ಪರವಶದಿಂಪೊನ್ನಂಬಲೇಶನನುತಂ ಚರಣದೊಳ್ಪೊರಳುತ್ತಿರ್ಪ ತಿರುನಾಳ್ಪೋವರಂ ಕಾರುಣ್ಯದಿಂಪಿಡಿದೆತ್ತಿಕುಳ್ಳಿರಿಸಿ ಭಕ್ತವತ್ಸಳಂ ಗಿರಿಜೆಗಿಂತೆಂದಂ॥

ಕಂ॥ ಎನ್ನಯತಿರುನಾಳೆಂದೊಡೆ ತನ್ನಂತಾಂಮರೆದು ಸಕಲಕೃಷಿಯಂ ತೊರೆದ। ತ್ಯನ್ನತಭಕ್ತಿಯೊಳೇಳ್ತಂ। ದಂನಿಜದಿಂದಿವಗದಾರ್ಸಮಾನಂಧರೆಯೊಳ್॥

ವ॥ ಎಂದುಕೊಂಡಾಡಿ ಕಾರುಣ್ಯದಿಂಭಕ್ತವತ್ಸಳನಪ್ಪ ಶಿವಂತಾಂಬರಿಸಿದ ದಿವ್ಯವಿಮಾನ ದೊಳ್ತಿರುನಾಳ್ಪೋವರಂ ಕುಳ್ಳಿರಿಸಿನಿಯಾಮಿಸಿದಾಗಳ್॥

ಕಂ॥ ಸುರಿವಲರಮಳೆಯೊಳಿರದ। ಬ್ಬರಿಪಾನಕರಾವದೊಳಗೆತಭ್ರೆವಭಕಂ। ಬೆರಸವುರಪುಷ್ಪಕಂ ಸುರುಚಿರರಜತಾಚಳಕೆ ಭರದಿಬಂದುತ್ತಾಗಳ್॥ ೨೯

ವ॥ ಅಂತುಬಂದು ತಿರುನಾಳ್ಪೋವಮಾಹೇಶ್ವರಂ ಬೆರಸುಸಕಲಗಣಾನ್ವಿತಂ ಗಿರಿಜಾನಾಥನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್॥

ಕಂ॥ ತಿರುನಾಳ್ಪೋವರ್ಗಪುರೋ ತ್ಕರವಟ್ಟರಿವಡುತಿರಲ್ಕೆ ಗಣಪದಮಂಕೊ। ಟ್ಟುರುತರ ಗುಣಯುತನೆನಿಸುವ। ಗಿರಿಜಾವರನೆಸೆವುದರ್ಗನಾಸ್ಥಾಯಿಕೆಯೊಳ್॥ ೩೦

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತ ಪಾದಪಂಕಜಶ್ರೀ ಮುತ್ತುಲಿಗೆರೆಯ ಪುರಾಧಿಪ ಶ್ರೀ

ಸೋಮನಾಥಭಕ್ತಿ ಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತ ಮಪ್ಪ ತ್ರಿಷಷ್ಟಿಪುರಾತನರ ಚಾರಿತ್ರದೊಳ್ಗಿರುನಾಲ್ವೋವ ಮಾಹೇಶ್ವರಕಥಾವೃತ್ತಾಂತಂಷಡುತ್ತರಪಂಚಾಶದಾಶ್ವಾಸಂ

—ಶ್ರೀ—

ಐವತ್ತೇಳನೆಯಆಶ್ವಾಸಂ

ಅತಿಭಕ್ತಮಾಹೇಶ್ವರಕಥಾವೃತ್ತಾಂತಂ

ಚತುರಾಸ್ಯಂಪೊಗಳುತ್ತಿರ| ಲತಿಭಕ್ತಂಗೊಲ್ಮೆಯಿಂದೆ ಗಣಪದವಿತ್ತ| ಪ್ರತಿಮಂಸದ್ಗುಣನಿಳಯಂ| ಶ್ರುತಿನುತಸೋಮೇಶನೊಲ್ದು ಪಾಲಿಕೆ ನಮ್ಮಂ|| ೧

ಅತಿರಮ್ಯವೃತ್ತಂ|| ಗಿರಿಜೇಶನಾವಾಸಮೆನಿಪ್ಪಚೋಳೋ| ರ್ವರೆಯುಳ್ಳಿ ಲಿಂಗಾಲಯದಿಂದೊಪ್ಪುವಂತಾ|ಹರಭಕ್ತರಾಗಾರ್ರಚಯಂಗಳೊಳ್ಪಿಂ ತಿರುವೆಣ್ಣೆಯೆಂಬೂರೆಸೆವುತ್ತಮಿರ್ಕುಂ|| ೨

ಕಂ|| ಘನತರದಲಪರ್ಶೋಟಂಕ| ರ್ಬಿನಗರ್ದೆತಟಾಕ ಮಧಿಕಕ್ಷಳಮಕ್ಷೇತ್ರಂ| ತೊನೆವಫಲತತಿಯೊಳೊಪ್ಪುವ| ವನಮೆಂಬಿವರಿಂದಮಾಪುರಂ ಕರವೆಸೆಗುಂ|| ೩

ಧನಿಕರ್ಭಕ್ತರುಜನರ ಧನಿಕಪಿರಿದೊಪ್ಪುತಿರ್ಪ ತತ್ಪುರದೊಳ್ಪ| ವನಲಿಂಗಜಂಗಮಪ್ರಿಯ| ನೆನಿಸುತ್ತತಿಭಕ್ತ ನೆಂಬನೊರ್ವಂಮೆರೆವಂ|| ೪

ಧರೆಯೊಳ್ ಶಿವಂಗೆಮುನ್ನೀ| ಪರಿಯೊಳ್ತನ್ನಂತಿರರ್ಪಿಸಿ ದಿರಿಲ್ಲೆನಿಪ| ಚ್ಚರಿಯಪೊಸನಿಯಮಮಂತಾ| ಳ್ದಿರುತಿರ್ಪಂ ಪರಮಭಕ್ತಿಯಿಂದತಿಭಕ್ತಂ|| ೫

ವ|| ಅಂತತಿಭಕ್ತಂ ಪೊಸತಪ್ಪನಿಯಮಮ ನೊಂದಂಮನದೊಳಾಳ್ದು||

ಕಂ॥ ತಿರುವಣ್ಣೆಯೆಂಬತೊರೆಯೊಳ್| ಬೆರದಿಂಪೊಸಗಾಳಮಿಕ್ಕಿ ತೆಗೆದಾವಿಾನಂ| ಗಿರಿಶಂಗೆವೊದಲೊಳರ್ಪಿಸಿ| ವರನಿಯಮಮನೋತು ಸಲಿಸಿಬಳಿಕತಿಭಕ್ತಂ॥ ೬

ನಯದಿಂದತಿಭಕ್ತಂತ| ನ್ನಯನಿಯಮಮುದಾಗಲೊಡನೆ ಬಳಿಕಾತಿ ಶುವ| ಣ್ಣೆಯೊಳಾಸುರದಿಂದನಿಮಿಷ| ಚಯಂಗಳಂಗಾಳದಿಂವೆ ತೆಗೆವುತ್ತಿರ್ದಂ॥ ೭

ವ॥ ಕೊರವಂಗೋಜಳೆ ಸಣ್ಣಗ| ಣ್ಣನೊರವಂಕಾಗೆಂಡೆ ಹೆಗ್ಗಬುಗಹೆಂ| ಗರಿಗಂ ಸಕ್ಕರೆಗಂ ಸಿಸಿಲ್ಪವಳವಾಯುಂಹ್ಯೆದಲುಂಬಾಳೆಹೆಗ್ಗಿಲುಂ ಕಲ್ಲಡಿಶಂಖವಾಯು ನರಿಲುಂಬಂಸಾನೆಮೂಗುಂಹರಲ್| ಮುಡಿಲುಂ ಪಂದಿಗನೆಂಬವಿಾಕ್ಷ ದೆನೆದನಾಭಕ್ತಂ ಮಹಾಲೀಲೆಯಿಂ॥ ೮

ಕಂ॥ ಅಂತಾವಿಾನ್ಗಳನೊದಗಿಸಿ| ಸಂತೋಷದಿನೆಯ್ದೆ ಮಾರಿದಾಧನದಿಂವಂ| ಕಂತುಹರರ್ವದಭಕ್ತರ| ಪಂತಿಗಬೆಸಕೆಯ್ವುತಿರ್ದನೋತತಿಭಕ ॥ ೯

ಪಲವುದಿನವೀಪ್ರಕಾರದ| ಛಲದಿಂಜಂಗಮಕೆ ಮಾಡುವತಿಭಕ್ತನು ಷಂ| ಸಲೆಮೆರೆವೆನೆಂದು ಶಂಕರ| ನೊಲವಿಂದುಮೆಪೆರಸು ನಭದೊಳೋಲಗವಿತ್ತಂ॥ ೧೦

ವ॥ ಪುತ್ರಮಿತ್ರಕ್ಷಲದ ತೋಳ್ಕೆಣ್ಕೆತ್ತಲಿಂದಾವ ಲೇಸಪ್ಪುದೋ ಪನುತತಿ ಭಕ್ತಂ ನಿಚ್ಚ ಕಿನ ದದಿಂ ದೊಂದುದಿನಂ ಜಂಗಮಲಿಂಗದಪರಿಚೆಯಕ್ಕೆಂದು ತಿರುವಣ್ಣೆಯೆಂಬ ನದಿಯತ ಡಿಯೊಳ್ಕು ಳ್ಳಿರ್ದಾಗಾಗಟ್ಟಗೆಯೆಂಬೀಸಿಪಾಯ್ಕುಳ್ಕಾಗಳ್॥

ಕಂ॥ ಹರನನಿರೂಪದಿನವರ| ತ್ನರಚಿತರುಷವೊಂದು ಗಾಳದೊಳ್ಸಿಕೆಹರುಷಾ| ತ್ತುರದಿಶಿವಲಿಂಗಕರ್ಪಿಸಿ| ಮರಳ್ದಡಿಗಡಿಗದೆಬರಲ್ಸಮರ್ಪಿಸುತಿರ್ದಂ॥ ೧೧

ಎನ್ನಯಶಿವಂಗೆತಕ್ಕುದು ರನ್ನದವಿಾನಿಂತಿದೆನುತೆ ಮಡಿಗಡಿಗೆಬರಲ್| ಮನ್ನಿಸಿಕಮರ್ಪಿಸು ತಿ| ರ್ದಂನಗಜಾಪತಿಗೆ ಪಲವುಪೊಳ್ತತಿಭಕ್ತಂ॥ ೧೨

ಸಲೆಮುಗುಳ್ದು ಮುಗುಳ್ದು ಬರಲು| ಜ್ವಳದುಣಿಮಯರುಷ ಮದೊಂದೆ ಬರಲಿತ್ತಿರುತ್ತು| ಸಲೆಪತಿಭಕ್ತನ ನಿಯಮದಭಕ್ತ್ಯಾನೋತುರೂವು

ದೋರಿದನಾಗಳ್‌॥ ೧೩

ಪನವುಯುೂರವೃತ್ತ॥ ದೇವನದಿಚಂದ್ರನನಲಾಕ್ಷಿ ಭುಜಗೇಂ
ದ್ರಂ ಗ್ರೀವದವಿಷಂ ಭಸಿತವಸ್ತ್ರಗಜಚರ್ಮಂ। ಭೂವಿನುತಬಾಹುದಕ
ವೈದ್ಯುವೊಗವೊಪ್ಪಲ್। ಪಾವನಶಿವಾಪತಿನಿಜಾಕೃತಿಯೊಳಿರ್ದಂ॥ ೧೪
ವ॥ ಅಂತುದಿವ್ಯರೂಪಂತೋರಿದ ಶಿವನಪದಕಮಲ ದೊಳ್ಪೊಗಳಸ್ಯೆ
ಗೆಡೆದು ಕಣ್ಗಳಿಂದಶ್ರುವಾರಿ ಪೊಗರಿಡುತ್ತಿರಲತಿಭಕ್ತಂ ಪೆರ್ಚಿಪಿಗಿಳ
ಡುನೇಹವಿಂ ನೋಡುತ್ತಿರ್ಪಾಗಳ್‌॥

ಕಂ॥ ಪಿಡಿಪೆತ್ತಿಕುಳ್ಳಿರಿಸಿಪ॥ ಪ್ಪಡವಿಕರಂಮೆಚ್ಚಿ ತನ್ನನಿಯಮದ
ಥಲಮುಂ। ಬಿಡದತಿಭಕ್ತನಗುಣಮುಂ। ಮೃಡನೊಲವಿಂ ನಂದಿನಾಥನೊ
ಡನಿಂತೆಂದಂ॥

ಧರಣೀತಲದೊಳ್ಮನ್ನೀ। ಪರಿಯಮಹಾನಿಯಮದಿಂದ ಪೆನ್ನುವಮು
ನಿವನಂ। ತಿರೆಮೆಚ್ಚಿಸಿದ ಪರಾರೆನು। ತುರುಕರುಣದಿ ಶಂಭುಪೊಗಳು
ತಿರ್ಪವಸರದೊಳ್‌॥

ಜನವಿನುತಕುಸುಮವರ್ಷದೊ। ಳನಿಮಿಷದುಂದು ಭಿಯರವದೊ
ಳೆತ್ತಂದಮಹಾ। ಘನಪುಷ್ಪಕದೊಳಗತಿಭ। ಕ್ತನನಿರಿಸಿಶಿವಾಥವಂ ನಿ
ರೂಪಿಸಲಾಗಳ್‌॥ ೧೬

ಅತಿಭಕ್ತಂಬೆರಸುಮಹೋ। ಜ್ಜ್ವಲತದಿವ್ಯವಿಮಾನವಖಿಳ ದೆಸೆಯಂಬೆ
ಳಗ। ತ್ತತುಳಿತಸಂಭ್ರಮದಿಂಸುರ। ತತಿಪೊಗಳಲ್ರಾಗಿರಿಗೆ ಬಂದು
ತ್ತಾಗಳ್‌॥ ೧೭

ವ॥ ಅಂತುಬಂದತಿಭಕ್ತಂಬೆರಸುಗಿರಿಜೆಯುಕಸಂಕೈಲಾಸ ಸಭಾಮಂ
ಟಪದೊಳ್ಸಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್‌॥

ಕಂ॥ ವಾಚಸ್ಪತಿಪೊಗಳುತ್ತಿರೆ। ಖೇಚರರುಘೋಯೆಂದೆನುತ್ತಿರಲ್ಕತಿ ಭ
ಕ್ತಂ। ಗಾಚಂದ್ರಮೌಳಿಕೌತುಕ ಮು। ಹಾಚಳಪದವಿತ್ತು ಮೆರೆದನಾ
ನಾಯಿಕೆಯೊಳ್‌॥ ೧೮

ಗದ್ಯ ಇದುಸಕಲಸುರನಿಕರಮುಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪಲಿಗೆರೆಯ ಪುರಾಧಿಪಶ್ರೀಸೋ
ಮನಾಥ ಭಕ್ತಿಯುಕ್ತಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ
ತ್ರಿಷಷ್ಟಿಪುರಾತನರ ಚಾರಿತ್ರದೊಳತಿಭಕ್ತ ಮಾಹೇಶ್ವರಕಥಾವೃತ್ತಂ

ತ್ತೇಸಪ್ತೋತ್ತರಪಂಚಾಶದಾಶ್ವಾಸಂ॥

...ಶ್ರೀ...

ಐವತ್ತೆಂಟನೆಯ ಆಶ್ವಾಸಂ

ಐಯಡಿಗಳ ಕಥಾವೃತ್ತಾಂತಂ

ಪ॥ ವಶಿವಭಕ್ತಿಯಂತಾ॥ದ್ದಿರುತಿರ್ಪಯ್ಯಡಿಗೆ ಮೆಚ್ಚಿ ಗಣಪದವಂಸ॥ ತ್ಕರುಣದಿ ನಿತ್ತಮಹಾಮುನಿ॥ ಪರನುತಸೋಮೇಶನೊಲ್ದು ಪಾಲಿಕೆನಮ್ಮಂ॥ ೧

ಘನಮಹಿಮೆವಡೆದಚೋಳಾ॥ ವನಿಯೊಳ್ಸ್ವಪನಪುರವನೇಳಿಸುತಂತಾ॥ ವಿನುತತಿರುವಣ್ಣಕಂಬಾ ಘನಪುರಮತ್ಯಧಿಕ ಜಸಮನಾಂತೆಸೆದಿರ್ಕುಂ॥ ೨

ವ॥ ಛತ್ತ್ರಮಾಪುರದ ಪುರವಳಯದೊಳ್ಸಲಕ್ಕೈರವಾಬ್ಜಮತ್ತಾಳಿವೃಂದದಿಂದೆ ಕಲಿಕ್ಷ್ಲೀಲಜಾಲದಿಂ ತಟಾಕಾದಿಗಳ್ವಿರಾಜಿಸುತಿರ್ಪುದಂತುಮುಲ್ಲದೇಶುಂ॥

ಉದಾರವೃತ್ತಂ॥ ಬೆಳೆದೊರಗುತ್ತಂ॥ ಕಳವೆಯಕೈಗಳ್॥ ಬಳಸಿತಕಣಂಕಂ ಗೊಳಿಸುತಮಿರ್ಕುಂ॥ ೩

ಕಾಂಚನಮಾಲಾವೃತ್ತಂ॥ ತಂಪಿನಸೊಂಪಿಂ॥ ದಾಪುರದುದ್ಯಾ॥ ನಂಫಲದೊಪ್ಪಿಂ॥ ಪೆಂಪಿನೊಳಿರ್ಕುಂ॥ ೪

ಕಂ॥ ಪಿರಿದೊಳ್ಪುವೆತ್ತ ಕಂಬಾ॥ ಪುರದೊಳ್ಪಾರ್ಥಿವಕುಲೋದ್ಭವಂತಾನೆನಿಸು॥ ತ್ತಿರುವಿತ್ತದಿ ಸೈಸ್ವಯಂದಿ॥ ಹರವರಭಕ್ತಿಯನೆ ಧರೆಗೆಬೀರುತ್ತಿರ್ದಂ॥ ೫

ವ॥ ಅಂತತ್ಯುಗ್ರಭಕ್ತಿಯ ಜನದಿಂಭೂಪಾಳಂ ಸುಖದಿನಿರುತಿರ್ಪೊಂದು ದಿವಸಂ ತನ್ನ ಮನದೊಳೊಂದು ಉತ್ಕೃತಮಪ್ಪ ಕಾರ್ಯಮಂನೆನೆದು

ಕಂ॥ ಪಿರಿಯಂಪಡೆ ಸಾಧನಮಂ॥ ಪರಚೋಳೋರ್ವರದೆಯೊಳೀಶಜಿಹ್ವಾಲಯಮಂ॥ ಕರಮೊಪ್ಪಲ್ಮಾಡಿಸುವೆಂ॥ ನಿರುತಮೆನುತ್ತೋತು

ನುಡಿವನ್ನೈಯಡಿಭೂಪಂ|| ೬

ವ|| ಅಂತುನುಡಿದುಶಿಲ್ಪಶಾಸ್ತ್ರವಿಶಾರದರಪ್ಪಾಚಾರ್ಯರಂ ಬರಿಸಿಪರ ಮೋತ್ಸವದಿಂದೈಯಡಿಭೂಪಂ ಪ್ರೀರವಮಟ್ಟಾಗಳ್|

ಕಂ|| ಎಲ್ಲೆಲ್ಲಿಲಿಂಗಪೂಜೆಗ ಳಿಲ್ಲವಜೀರ್ಣಾಲಯಂಗಳಂ ಪೊಸತಪ್ಪಂ ತಲ್ಲಲ್ಲಮಾಡಿಪೂಜಿಸಿ| ಸಲ್ಲೀಲೆಯೊಳೊಪ್ಪಿರ್ದ ನಯ್ಯಡಿಜಸದೊಳ್|

ವ|| ಅಂತೀಪರಿಯೊಳ್ ಚೋಳದೇಶದೊಳೆಲ್ಲೆಲ್ಲಿ ಜೀರ್ಣಶಿವಾಲಯಂಗ ಳುಂಟಲ್ಲಲ್ಲಿಗೆ ಪೋಗಿಪೊಸತಪಂತೆ ಮಾಡಿಸುತತುಳಭಕ್ತಿಯಿಂದೈಯಡಿ ಭೂಪಾಳನಿರುತ್ತವೊಂದುದಿವಸಂ|

ಕಂ| ಸುರುಚಿರಕಾಂಚನತತಿಯಿಂ| ಪರಸ್ಫುಹಪೋಂದಂನಭೋಂತ ಮಂವುಟ್ಟಿರಲ್ಕೆ| ದರದಿಂಮಾಡಿಸಿಭಕ್ತಿಯ| ಪೆರಸುನಿರೀಕ್ಷಿಸುತಮಿರ್ದ ನ್ನೈಯಡಿಭೂಪಂ| ೮

ವ|| ಅಂತುನಿರೀಕ್ಷಿಸುತಯ್ಯಡಿ ಭೂಪಾಳಂ ತಚ್ಛಿವಾಲಯಮ ನೆಡೆ ದುರ್ದ ತನ್ನ ಕಂಗಳೆನಿತು ಕಾಣ್ಬನಿತೂರ್ಗಳಂ ಶಿವಭಕ್ತರ್ಗಿತ್ತೆಲ್ಲಿಂದಿಳಿ ದು ಶಿವಲಿಂಗದಸಮೀಪಕ್ಕೆಯ್ತಂದು ಪದ್ಮಾಸನವುನಲಂಕರಿಸಿ ಯೋಗ ಪ್ರೋಕ್ತಿಯಿಂ ವಿಭೂತಿರುದ್ರಾಕ್ಷೆಗಳಂತಾಳ್ದು ಜಲಗಂಧಾಕ್ಷತೆ ಪುಷ್ಪ ಧೂಪದೀಪನೈವೇದ್ಯ ತಾಂಬೂಲಮೆಂಬಷ್ಟ ವಿಧಾರ್ಚನೆಯಂಮಾಡಿಛ ತ್ರಚಾಮರ ದರ್ಪಣಪಾದುಕೆ ನೀರಾಜನದಕ್ಷಿಣಾ ಪುಷ್ಪಾಂಜಳಿಕ್ಷೆ ಮಾಪಣಪ್ರದಕ್ಷಿಣನಮಸ್ಕಾರಾತ್ಮಸಮರ್ಪಣ ವಿಸರ್ಜನವೆಂಬ ಷೋ ಡಶೋಪಚಾರಂಗಳೆಸೆಯಲ್ ಶಿವಲಿಂಗಾರ್ಚನೆಯಂಮಾಡಿ|

ಕಂ| ರಯ್ಯಡಿನಭವನನರ್ಚಿಸಿ| ಮೆಯ್ಯಿಕ್ಕಿನಮಃಶಿವಾಯ ಜಯಜಜ ಯವಿನುತಂ| ದಯ್ಯಡಿಭಕ್ತಿರಸಂಮಿಗೆ! ಕ್ಕೈಯಂಮುಗಿದಾಡಿ ಪಾಡಿನ ಲಿವುತ್ತಿರ್ದಂ| ೯

ವ|| ಅಂತುಭಕ್ತಿರಸದಿಂದಾನಂದಮಯನಾಗಿ ನಲಿದಾಡು ವಯ್ಯಡಿಯಂ ಸದಾಶಿವಂನೋಡಿ ಯೆನ್ನಜೀರ್ಣಾಲಯಮುಂಮಾಡಿಸುವಲ್ಲಿತನ್ನ ಸರ್ವ ಧನಮುಂ ಸಲಿಸಿದನೆಂದು ಕರುಣಮುಂಮಾಡಿ|

ಕಂಜಜಡೆಮಿಡು ತುರುಬಾಂದೊರೆನೊಸ| ಲಿಡೆಯೊಳ್ಮೆರೆವರ್ಧ ಚಂ ದ್ರನಂ ಗದಭಸಿತಂ| ನಿಡಿದೋಳೆ ಪತ್ತೈದುಮೋಗಂ| ಕಡುಮೆರೆಯ ಲ್ಪಾರ್ವತೀಶನೊಪ್ಪಿದನಾಗಳ್ ೧೦

ವ|| ಅಂತೊಪ್ಪಪದಿವ್ಯಮೂರ್ತಿಯಂ ಕಂಡಯ್ಯಡಿಭೂಪಾಳಂ ಪಲವು ಹರುಷಪುಳಕಿತನಾಗಿ ಚರಣಕಮಲದೊಳ್ಸೈಗೆಡೆದು ಪರವಶೀಭೂತನಾಗಿರಲ್ಕರುಣದಿಂಪಿಡಿದೆತ್ತಿ ಕುಳ್ಳಿರಿಸಿಪೆಯ್ದುಡಿವಿ ಕಡುನೇಹವಿಂಪ್ಪಾಡಂಪುಂದಿರ್ದನಂದಿನಾಥಂಗಿಂತೆಂದಂ!

ಕಂ|| ಪಿರಿದಪ್ಪ ಯಜೀರ್ಣಾಲಯ|ಕಿರದೊಲವಿಂತನ್ನವಿತ್ತಮಂಸಮೆಯಿಸದೀ| ಪರಮಶಿವೈಕ್ಯಂಗಾದರ್ರೆ,ಪರಿಕಿಪೊಡೀಧರೆಯೊಳೆಂದುನುಡಿದಂಗಿರಿಶಂ|

ವ|| ಎಂದುಶಿವಂಕೊಂಡಾಡುತ್ತಂ ತಾಂಬರಿಸಿದದಿವ್ಯವಿಮಾನದೊಳಯ್ಯಡಿಯಂ ಕುಳ್ಳಿರಿಸಿನಿಯಾಮಿಸಲ್ಕಾಗಳ್|

ಕಂ|| ಹರಭಕ್ತನೆನಿಸುವಯ್ಯಡಿ ಪೆರಸಮರರ ಭೇರಿವೊಳಗೆಮಣಿ ಪುಷ್ಪಕವಂ| ಬರತಳಮಂನೆರೆ ಬೆಳಗು, ತ್ತಿರೆ ಪೇಳ್ತಂಪುತ್ತು ರಜತಶೈಲಕ್ಕಾಗಳ್| ೧೩

ವ|| ಅಂತಯ್ಯಡಿಮಾಹೇಶ್ವರಂಗೂಡಿ ಸಕಲಪ್ರಮಥಗಣಂಬೆರಸುಗಿರಿಜಾರಮಣನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್|

ಕಂ|| ಜನನುತಭಕ್ತರಕಿಂಕರ, ನೆನಿಪಯ್ಯಡಿಗಳ್ಗೆ ಪರಮಾಣಪದಮಂನೆ|ಟ್ಟನೆಕೊಟ್ಟು ಮೆರೆದಭವನತ್ಯುದಾರದಿ ನೆಸೆವುತಿರ್ದನಾ ಸ್ಥಮಿಕೆಯೊಳ್| ೧೪

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿಪುಂಜರಂಜಿತಪಾದಪಂಕಜಶ್ರೀ ಮತ್ಪುಲಿಗರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಟಿಪುರಾತನರ ಚಾರಿತ್ರದೊಳಯ್ಯಡಿಮಾಹೇಶ್ವರಕಥಾವೃತ್ತಾಂತಂ ಅಷ್ಟೋತ್ತರ ಪಂಚಾಶದಾಶ್ವಾಸಂ||

—ಶ್ರೀ—

## ಐವತ್ತೊಂಭತ್ತನೆಯ ಆಶ್ವಾಸಂ

### ಅಡವಳೆಯ ಪೆರುಮಾಳರ ಕಥನಂ

ಪ್ರಿಯದಿನಡವಳೆಯಪೆರುಮಾ| ಳೆಯಭಕ್ತಿಗೆ ಮೆಚ್ಚಿ ಪರಮಗಣಪದವಿತ್ತ| ಕ್ಷಯಮೂರ್ತಿ ಭಕ್ತಜನಭವ| ಭಯಹರಸೋಮೇಶನೊಲ್ದು ಪಾಲಿಕೆನಮ್ಮಂ|| ೧

ಕಂಗೊಳಿಪ ಚೋಳಧರೆಯೊಳ್| ಲಿಂಗಾಯತರ್ಗಳಿಂ ಮಹಾಭಕ್ತರಿಗಾ| ರಂಗಳಿನನಿಶಂ ಪಂಪಿಂ| ಪಿಂಗದೆ ತಿರುನಾಗಪಟ್ಟಣಂ ಕರಮೆಸೆಗುಂ|| ೨

ಮತ್ತಮಲ್ಲಿ

ಪ್ರಿಯಮಂ ಭಕ್ತರ್ಗೀವುತೆ| ಜಯದಿಂ ತಿರುನಾಗಪಟ್ಟಣದೊಳೀಶ್ವರಭಕ್ತಿಯೊಳಿನಡವಳೆಯಪೆರುಮಾ| ಳೆಯೆನಿಪ್ಪವನೀಶ ನೆಸೆವುತಿರ್ಪಂ ಜನದೊಳ್|| ೩

ವ|| ಅಂತು ಸತ್ಕೀರ್ತಿಯಿಂದೆಸೆವುತಿರ್ದ ಅಡವಳೆಯ ಪೆರುಮಾಳೆ ಮಾಹೇಶ್ವರಂ ತ್ರಿಕಾಲದೊಳ್ಪರಮಭಕ್ತಿಯಿಂ ಶಿವಲಿಂಗಾರ್ಚನೆಯಂ ಮಾಡುತ್ತಂ ದಿನದಿನದೊಳ್ಬಂದ ಲಿಂಗವಂತಮಾಹೇಶ್ವರರ್ಗಿಷ್ಟಾರ್ಥಸಿದ್ಧಿಯಂ ಕೊಟ್ಟು ತುಷ್ಟಿವಡಿಸುತಂ ಹರುಷದಿಂದಿರ್ದನಂತುಮಲ್ಲದೆಯುಂ||

ಉ|| ಆನತಪಂಗೆ ಸಂಪದದ ಪೆರ್ಚುಗೆಯಿಂ ಶಿವಭಕ್ತಿಯೇಳ್ಗೆಯಿಂ| ಜ್ಞಾನದ ಪೆರ್ಮೆಯಿಂ ಸದೃಶಮಾಗಿಸಲಾಗದಿ ತತ್ಪುರಾಂತದೊಳ್ಖ್ಯಾತ ಕೀರ್ತಿವೆತ್ತ ಧನಪಾಲಸಮಾಖ್ಯೆಯ ವೈಶ್ಯನೊರ್ಬನಂ| ಭೋ ಸಿಧಿಪ್ರೋಲ್ಲಭೀರಗುಣಮಂ ನೆರೆಬೀರುತಮಿರ್ಪನಾವಗಂ|| ೪

ವ|| ಅಂತೀಪರಿಯೊಳ್ತಿರುನಾಗಪಟ್ಟಣದೊಳಡವಳೆಯ ಪೆರುಮಾಳೆಯೆಂಬ ರಾಜಂಗೆ ಮಿತ್ರನೆನಿಸುತ್ತಂ ಧನಪಾಲನೆಂಬ ವ್ಯವಹಾರಿ ಸದ್ಭಕ್ತಿಯಿಂ ಲಿಂಗಜಂಗಮಂಗಳ್ಗೆ ನಾನಾಪರಿಯಿಂ ಬೆಸಕೆಯ್ವುತಿರುತಿರ್ಪನ್ನೆಗಂ||

ಕಂ|| ಮಳೆಯುರತ ಚೋಳಧರೆಯೊಳ್| ಬೆಳೆಯಿಲ್ಲದೆ ಧಾನ್ಯಮಡಗಿ ಬಲನಾಗಿ ಜನಂ| ಬಳಬಳಿದು ಪೊಟ್ಟೆಗಿಲ್ಲದೆ| ಕಳವಳದಿಂ ಬಾಯಬಿಡುತಮಿರ್ಪವಸರದೊಳ್|| ೫

ಅದನೀಕ್ಷಿಸಿ ಧನಪಾಲಂ ಮದನಾರಿಯ ಭಕ್ತಜನಮನೀ ಬರನೋಳ್ಪೀ
ಡಿದಧಾನ್ಯವಿತ್ತು ಸಂತಸ। ದೊದವಿಂದಿರ್ಪಂತೆ ಮಾಳ್ಪೆನೆಂದೆನುತಿರ್ದಂ॥

ವ॥ ಅಂತಾ ಬರನೊಳಾ ಚೋಳಮಂಡಲದೊಳೆಲ್ಲಿಲ್ಲಿ ಬಡತನಂಪತ್ತಿರ್ದ ಶಿವಭಕ್ತಜನಮಂ ತಾನಿರ್ಪ ತಿರುನಾಗಪಟ್ಟಣಕ್ಕಂ ಬರಿಸಿ ಮುಂಗಳಂ ಕೊಟ್ಟ ಸದ್ಧಾನ್ಯದಿಂ ಮೂರುಸಾಸಿರ ಕಣಜದಭತ್ತಮನಿಕ್ಕಿ ಸಂತಸಂಬಡಿಸುತ್ತಿರ್ದನಂತುಮಲ್ಲದೆಯುಂ॥

ಕಂ॥ ಅನಿತಕ್ಕೆ ಚೋಳಧರೆಯೊಳ್। ಘನವೃಷ್ಟಿಯುದಾಗೆ ಬರನಡಂಗ
ಲ್ಭಕ್ತ। ರ್ಗನುನಯದಿಂದುಡಲಿತ್ತಾ ಧನಪಾಲಂ ಕಳುಪಲೆಂಬ ಬಗೆಯಿಂ
ದಿರ್ದಂ॥ ೭

ವ॥ ಅಂತಾ ಧನಪಾಲಂ ಬರದೊಳ್ ಭಕ್ತರಬಳಗಕ್ಕೆ ಮೂರುಸಾಸಿರಕಣಜದಭತ್ತಮನಿಕ್ಕಿ ಸಂತಸಂಬಡಿಸಿ ಕಳುಪುವ ಸುದ್ದಿಯಂ ಚರರಿಂ ಕೇಳ್ದು ಡಳುವೆಯ ಪೆರುಮಾಳೆರಾಜಂ ಸಂತಸಮನೆಯ್ದಿ ತಲೆದೂಗುತ್ತಂ ಹಾರೈಸಿ ತತ್ಪುಣ್ಯಮೆನಗೆ ದೊರಕದಾದುದೆನುತ್ತಂ ಖತಿಗೊಂಡು ಮನದೊಳ್ ನೆನೆವಾಗಳ್॥

ತರಳವೃತ್ತಂ॥ ಹರನಭಕ್ತಜನಕ್ಕೆ ತದ್ಧನಪಾಲಕಂ ನೆರೆಮೂರುಸಾ।
ಸಿರಕಣಂಜದಭತ್ತಮಂ ಬರದಲ್ಲಿ ಸಲ್ಮೆಯೊಳಿತ್ತನಿ। ರ್ಭರದಿ ಸಾಧಿಸಿ
ಕೊಂಡ ಪುಣ್ಯಮನೆನ್ನ ರಾಜ್ಯಮನೆಯ್ದೆ ಕೊ। ಟ್ಟರದೆ ಕೊಂಬೆನೆನುತ್ತೆ
ತಾಂ ಪೊರಮಟ್ಟನಾ ನೃಪನರ್ಥಿಯಿಂ॥ ೮

ವ॥ ಅಂತು ಪೊರಮಟ್ಟ ಡಳುವೆಯ ಪೆರುಮಾಳೆರಾಜಂ ಬರಲ್ ಧನಪಾಲನಾದರಿಸಿ ತನ್ನ ಮನೆಯೊಳಯಿಂ ಕೊಡಗೊಂಡೊಯ್ದು ಸದ್ಭಕ್ತತಿಂಥಿಣಿಯೊಳ್ ಕುಳ್ಳಿರಿಸಲಾಗಳಿಂತೆಂದಂ॥

ಕಂ॥ ಎಲೆ ಧನಪಾಲಕ ನಿನ್ನಯ। ನಿಳಯಕ್ಕಾಂ ಬಂದುದರ್ಕೆ ನೀನಾ
ನೇನಂ। ನಲವಿಂದೆ ಬೇಳ್ಪೆನದನೀ। ಯಲೆವೇಳ್ಕೆನಗೆಂದು ನೃಪತಿ ಕೈಮುಗಿ
ದಿರ್ದಂ॥ ೯

ವ॥ ಅಂತಾ ನೃಪತಿ ಕೈಮುಗಿಯಲ್ ದಾಕ್ಷಿಣ್ಯಕ್ಕೆ ಸಿಕ್ಕಿ ದೇವರೇನಂ ನಿರೂಪಿಸುವಿರದಕ್ಕೆ ಹಸಾದವೆನುತ್ತಂ ಕೈಕೊಂಡಾಗಳ್॥

ಚಂ॥ ಪಿರಿದಪುದೆನ್ನ ರಾಜ್ಯದೊದವಂ ನೆರೆಕೊಟ್ಟಪೆನೊಲ್ದು ನಿಚ್ಚ
ಮು। ಚ್ಚರವಿಗೆ ಮೂರುಸಾಸಿರ ಕಣಂಜದಭತ್ತಮನೆಯ್ದೆ ಲಿಂಗ। ಭ

ಕ್ತರಬಳಗಕ್ಕೆ ಕೊಟ್ಟಘನಪುಣ್ಯಮನೀವು| ದೆನಲ್ಕ್ನೃಪಂಗೆಭಾ| ಸುರ ಘನಪಾಳಕಂ ಘರವಿಥಾರೆಯ ನೋಳ್ದಿರದಿತ್ತನಲ್ಕರಿಂ||

ಕಂ|| ಘನಪಾಲನಪುಣ್ಯಮನೆ| ಯ್ದ ನುನಯದಿಂದಾರೆಗೊಂಡು ನಿಜ ರಾಜ್ಯಮನಿ| ತ್ತಾನೃಪಂಪುರಮಂ ಪೊರಮಡ| ಲನುಗೆಯ್ಯಲ್ ಶಂಭು ರೂಪುದೋರಿದನಾಗಳ್|| ೧೧

ಮಿರುಪಜಡೆಪೇವನದಿಶಿಖಿ| ಕರಭುಜಗೇಂದ್ರಂ ನಗೇಂದ್ರನಂದನೆ ಭಸಿತಂ| ಪೆರೆಪಂಚಮುಖಂ ದಶಭುಜ ಮೆರೆಯಲ್ಕಿಜಮೂರ್ತಿಯಿಂ ದವೊಪ್ಪಿದನೀಶಂ|| ೧೨

ವ|| ಅಂತಾದಿವ್ಯಮೂರ್ತಿಯಂಕಂಡು ಭಯಚಕಿತಹೃದಯನಾಗಿ ಪರಮಾನಂದದಿಂ ಭಕ್ತಿಮಿಗೆಚರಣದೊಳ್ಸ್ರಗೆಡೆದು ಪರವಶದೊಳಿರ್ಪ ಡಘವೆಯ ಪೆರುಮಾಳೆಯಂ ಕಾರುಣ್ಯದಿಂಪಿಡಿದೆತ್ತಿ ಕುಳ್ಳಿರಿಸಿಬೋಳೈಸು ತ್ತಂ ಗಿರಿಜೇಶಂನಂ ನಾಥಂಗಂದಿಂತೆಂದಂ||

ಕಂ|| ಜಪೆದಿವಸ್ನಿಯ ಭಕ್ತನೋವಿದಫಲಮಂ ಮಾರುಗೊಂಡುನಿ ಜರಾಜ್ಯಮನಿ| ತ್ತುದಿತಗುಣಾಂಬುಧಿಯ ನಿಪೀಸದಮಳಭಕ್ತಂಗದಾ ರ್ಸವಾನಂಘಠಯೊಳ್|| ೧೩

ವ|| ಎಂದುಕೊಂಡಾಡಿ ಖಂಡೇಂದುಧರಂ ತಾಂಬರಿಸಿದದಿವ್ಯ ವಿಮಾನ ದೊಳಡಘವೆಯ ಪೆರುಮಾಳೆಮಾಹೇಶ್ವರನಂ ಕುಳ್ಳಿರಿಸಿಪುಣ್ಯಮಂ ಮಾ ರುಗೊಟ್ಟ ಧನಪಾಲನುಮಲ್ಲಿರ್ದ ಶರಣಜನಮುಂನೋಡಿ ಬೆರಗುವಡೆ ದು ನಿರೀಕ್ಷಿಸುತಿರಲ್ಕಿಯಾಮಿಸಲ್ಕಾಗಳ್||

ಕಂ|| ಅಂತಾಭಕ್ತಂಬೆರಸುನ| ಭೋಂತಮನುರೆಬೆಳಪರಸ್ಸಪುಷ್ಪಕ ಮಮರ| ಸ್ವಂತಸದಿಂಪೊಗಳುತ್ತಿರೆ ಕಾಂತುಹರಾಚಳಕೆ ಬಂದುದಾನ ಕರವದಿಂ|| ೧೪

ವ|| ಅಂತುಬಂದಡಘವೆಯ ಪೆರುಮಾಳಿಯುರ್ವೆರಸು |ಸಕಲಗುಣಾ ನ್ವಿತಂ ಫಣಿಕುಂಡಲ ನೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್||

ಕಂ|| ನೆಗಳ್ದು ಡಘವೆಯಪೆರುಮಾ| ಳಿಗೆಗಣಪದಮಂ ಸಮಸ್ತ ದಿವಿಜ ಗಣಂನೆ| ಟ್ಟಗೆಪೊಗಳುತ್ತಿರೆಕೊಟ್ಟಾ| ಮೃಗಧರಧರ ನೆಸೆವುತಿರ್ದನಾ ಸ್ಥಾಯಿಕೆಯೊಳ್|| ೧೫

ಗದ್ಯ ಇದುಸಕಲಸುರನಿಕರ ಮಕುಟಮಾಣಿಕ್ಯಮಾಲಾಮರೀಚಿ

ಘುಂಜರಂಜಿತಪಾದಪಂಕಜಶ್ರೀ ಮತ್ಸ್ಪಲಿಗೆರೆಯ ಪುರಾಧಿಪಶ್ರೀಸೋಮನಾಥಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿವಿರಚಿತಮಪ್ಪತ್ರಿಷಷ್ಠಿಪುರಾತನರ ಚಾರಿತ್ರದೊಳಗಣ ಘೆವೆಯಪೆರುಮಾಳೆ ಮಾಹೇಶ್ವರಕಥಾವೃತ್ತಾಂತಮೇಕೋನಷಷ್ಠಿತಮಾಶ್ವಾಸಂ॥

—ಶ್ರೀ—

ಅರುವತ್ತನೆಯ ಆಶ್ವಾಸಂ

ನರಶಿಂಗಮೊನೆಯರ ಕಥಾವೃತ್ತಾಂತಂ

ಹರಿಧಾತಪೋಗಳುತ್ತಿರೆ| ಕರ್ರಾದಿನರಸಿಂಗ ಮೊನೆಯರಾಜಂಗೇಸಾದರದಿಂಗಣಪದವಿತ್ತಾ ನಿರುಪಮ ಸೋಮೇಶನೊಲ್ದು ಪಾಲಿಕೆನಮ್ಮಂ

ಪಿರಿದೆಸೆವಾತಿರುನಾವ| ಲ್ಪುರದೊಳ್ನರಸಿಂಗ ಮೊನೆಯರಾಜಂಸದ್ಭಕ್ತರನೊಲವಿಂ ಪಾಲಿಸ| ತಿರುತಿರ್ದಂ ಬಹುಳತರದಸಂಪದದಿಂ॥ ೨

ವರಜಂಗಮಮಿರೆದುದನಾ| ದರದಿಂದೀವುತ್ತೆ ಬಹುಳತರಯಶದಿಂದಂ| ನರಶಿಂಗಮೊನೆಯರಾಜಂ| ಪರಮೋತ್ಸವದಿಂದಮಿರ್ದನದನೇವೇಳ್ವೆಂ॥ ೩

ವ॥ ಅಂತೀಪರಿಯೊಳ್ಜಂಗಮಮುಮಂ ಲಿಂಗಮೂರ್ತಿಗಳೆಂಬ ಭಾವದಿಂ ತನುಮನಧನಮೆಂಬಿವರೊಳ್ವಂಚನೆಯಿಲ್ಲದೆಯವ ರ್ಬೇಡಿದುದನೀವುತ್ತಿರಲ್ಪುಣ್ಯದ ಬೆಳೆಗೆ ಕೈಲಾಸದೊಳ್ಪಸರಿಸಲ್ ಶಿವಂವಿಸ್ಮಿತನಾಗಿಮೆಕೆಯಲ್ಮನಂದಂದಾಗಳ್||

ಕಂ| ಹರಮರಿಕೌತುಕದಿಂದಂ| ಪರವಿಟವೇಷಮನೆತಾಳ್ದು ರಜತಾಚಳದಿಂ| ದಿರದೆತಿರುನಾವಲೂರಂ| ಹರುಷಂಮಿಗಪೊಕ್ಕು ವೀಥಿಯೊಳ್ಬರುತಿರ್ದಂ|| ೪

ಮ|| ನಸುಗರ್ಪಂತಳೆದಿಪ್ಪ ವಿಾಸೆಗಳಿನುದ್ಯತ್ಕೇಶಪಾಶಂಗಳಿಂ| ಪೊಸಕಾಶಾಂಬರದಿಂ ಲಸದ್ಭಸಿತದಿಂದೆ ಪೃತ್ತೆ ಸದ್ಗೀತಮಂ| ರಸವೆತ್ತೊಲ್ದರೆ ಪಾಡುತಂತಿ ಪುರಿಯಿಂದಂ ಬಾಜಿಸುತ್ತಂದು ತಾ| ನೀಸಮಾ

ಷ್ಷಂ ವರಜಂಗಮಮಾ ಕೃತಿಯೊಳೇಳ್ತಂದಂ ಘನೋತ್ಸಾಹದಿಂ॥ ೫

ವ॥ ಅಂತುವಿಟವೇಷದೀಶಂ ನರಸಿಂಗಮೊನೆಯ ರಾಜನರಮನೆಗೆ ಬರಲ್ಕಂಡಿದಿರೆದ್ದು ಸಾಷ್ಟಾಂಗವೆರಗಿಪೊಡಮಟ್ಟುತಂದುರತ್ನಪೀಠದೊಳ್ಕುಳ್ಳಿರಿಸಿ ಪಾದಪ್ರಕ್ಷಾಳನಂಗೆಯ್ದು ಪಾದತೀರ್ಥಮಂಕೊಂಡು ನಿಜಸತಿಯರ್ತಂದ ಮಂಗಳಾರತಿಗಳನೆತ್ತಿ ಸದ್ವಿನಯದಿಂದಿಂತೆಂದಂ॥

ಕಂ॥ ವರಮುನಿಪತಿ ನೀವಿಲ್ಲಿಗೆ। ಭರದಿಂದೇಳ್ತಂದಿರಾವುದಿಷ್ಟಮದಂ ಸಾ। ದರದಿಂಬೇಳ್ಪುದುಮಾಳ್ಪೆಂ। ನಿರುತಮೆನುತೆತ್ತು ನುಡಿದನಾ ಭೂಪಾಲಂ॥ ೬

ವ॥ ಎನಲಾಮಾತಂಕೇಳ್ದು ವಿಟರೂಪಿನಶಿವನಿಂತೆಂದಂ॥

ಕಂ॥ ಕ್ಷಿತಿನಾಥಂಕೇಳ್ವುದುನಾ। ವತಿವ್ಯಸನಿಗಳಂತದಕ್ಕೆಸಮುಯುದ ಪೊನ್ನಂ। ಮತಿಮಿಗೆನೀಸಿತ್ತಪೆಯಾ। ಕ್ಷಿತಿಯೊಳ್ನೀಂದಾನಿಯೆಂದುನುಡಿದಂಮುನಿಪಂ॥ ೭

ಕಂ॥ ಎನಲಾಮಾತಂಕೇಳ್ದಾ। ಜನಪತಿಸತ್ಪ್ರೀತಿಯಿಂದೆಕೈಕೊಂಡು ಮುಹಾ। ಘನತರಭಂಗಾರಮನಾ। ದನುನಯದಿಂ ಕುಹಕವೇಷದೀಶಂ ಗಿತ್ತಂ॥ ೮

ವ॥ ಅಂತೀಯಲ್ಕುಹಕವೇಷದೀಶಂ ಮನದೊಳ್ಮೆಚ್ಚಿ ನಿಜ ರೂಪುದೋರಿದನಾಗಳ್॥

ಕಂ॥ ಪರಜಡೆಶಿಖಿಶಶಿಬಾಂದೊರೆ ಸರುಚಿರಜಪಮಾಲಿಡಮುರುಗಂಗಜದಜಿನಂ। ಪಿರಿದೆಸೆವ ಪಂಚಮುಖದಿಂ। ಗಿರಿಶಂನಿಜದಿವ್ಯರೂಪಿನಿಂನಿಂದಿರ್ದಂ॥ ೯

ವ॥ ಅಂತಾದಿವ್ಯಮೂರ್ತಿಯಂಕಂಡುಭಯಚಕಿತಹೃದಯನಾಗಿ ಪದಕಮಲ ದೊಳ್ಪೊರಳುತ್ತಿರ್ಪ ನರಸಿಂಗಮೊನೆಯರಾಜನಂ ಪಿಡಿದೆತ್ತಿಕುಳ್ಳಿರಿಸಿ ಬೋಳೈಸುತಂ ಸದಾಶಿವಂನಂದಿನಾಥಂಗಂದಿಂತೆಂದಂ॥

ಕಂ॥ ಪಿರಿದುಂಜೀವಮೆನಿಪ್ಪುರು। ತರವಿತ್ತಮನೆನಗೆ ಭಕ್ತಿಮಿಗಲಿತ್ತ ।ವಾ॥ ಪ ರಿಕಿಪೊಡಿವನಲ್ಲದೆಮ। ತ್ತಿರದೆನುತಂ ನಂದಿಗೆಂದನಂದಗಣೇಶಂ॥ ೧೦

ವ॥ ಎಂದುಕೊಂಡಾಡುತ್ತಿರಲಿತ್ತಲ್

ಕಂ॥ ಪಿರಿದುಂಭಕ್ತಿಯೊಳೊಪ್ಪುವ। ವರಯುಸ್ಸೃಜ್ಞಾನಿ ಜಡೆಯನಾರ

ಗರ್ಗಂಸ| ತ್ಕರುಣದಿಗಣಪದವಿತ್ತಾ' ನಿರುಪಮಸೋಪಾನಶನೊಲ್ದುಪಾ
ಲಿಕೆನಮ್ಮಂ|| ೧೧

ನರಸಿಂಗವೊಡೆಯನೃಪಗಂ| ಗಿರಿಶಂನಿಜದಿವ್ಯಮೂರ್ತಿದೋರಿದು
ದಂಕೇ| ಲ್ದಿರದಾದಂಪತಿಗಳ್ಕಡು | ಭರದಿಂಪೆಯ್ತಂದರುತ್ಸವಂಮಿಗಲಾ
ಗಳ್|| ೧೨

ಪರವಶದಭಕ್ತಿಯಿಂದಂ ಪರಮಾನಂದಾಶ್ರುವಾರಿನಯನದಿನುಣ್ಮು
ತ್ತಿರೆ ತದ್ದಂಪತಿಗಳ್ಕಂ| ಕರನಂಕಂಡುಬೀರ್ಭರದಿಪಡೆಯೊಳ್ಪೊರಳ್ದರ್
ವ|| ಅಂತಡಿಯೊಳ್ಪೊರಳುತ್ತಿರ್ದ ತದ್ದಂಪತಿಗಳಂ ಸಾಂದರನಂಪೆತ್ತ
ತಾಯ್ತಂದೆಗಳೆಂಬ ಕರುಣದಿಂಪಿಡಿದೆತ್ತಿ ತಾಂಬರಿಸಿದ ದಿವ್ಯಪುಷ್ಪಕದೊ
ಳ್||

ಕಂ|| ನರಸಿಂಗವೊಡೆಯರಾಜಂ | ಬೆರಸಾದಂಪತಿಗಳಂಮಹಾನಕರ
ವೆದೊಳ್| ವರಮಣಿಪುಷ್ಪಕದೊಳ್ಕು ಳ್ಳಿರಿಸಿದನಗಜಾವರಂಮುದಂಮಿ
ಗಲಾಗಳ್||

ವ|| ಅಂತುಕುಳ್ಳಿರಿಸಿ ಪರಮಕರುಣದಿಂಗಿರಿಶಂ ನಿಯಾಮಿಸಲ್ಕಾಗಳ್
ಕಂ|| ಸುರರಲರಮಳೆಯನೊಲವಿಂ| ಸುರಿಯಲ್ ನವರತ್ನಖಚಿತದಿ
ವ್ಯವಿಮಾನಂ| ಹರಭಕ್ತವರ್ಗರಸಾಗ| ಳ್ವೆರರಜತಾಚಳಕೆಬಂದುದುತ್ಸವ
ದಿಂದಂ|| ೧೪

ವ|| ಅಂತುತದ್ಭಕ್ತವರ್ಗರಸಪ್ರಜಾಕಮುಣಂವೀರಭದ್ರಾದಿಗಣಾನ್ವಿತಂ
ಕೈಲಾಸಸಭಾಮಂಟಪದೊಳೊಡ್ಡೋಲಗಂಗೊಟ್ಟು ಕುಳ್ಳಿರ್ದಾಗಳ್
ಕಂ|| ಪರಮಾನಂದದಿಸುರಖೇ|ಚರತತಿಪೊಗಳಲ್ಕೆ ಕರುಣದಿಂದಂತಾ
ಗಳ್| ನರಸಿಂಗವೊಡೆಯನೃಪಗಂ | ಗಿರಿಶಂಗಣಪದವನಿತ್ತನತುಳೋ
ತ್ಸವದಿಂ|| ೧೫

ವ|| ಮತ್ತಮನಂತರಂ||
ಕಂ|| ನಗಧರನತಿಮುದದಿಂದಂ| ಪೊಗಳಲ್ಕಾಜಡೆಯನಾರಗಂ'ಯುಸ್ವ
ಜ್ಞಾ| ನಿಗೆಗಣಪದಮಂನಲವಿಂ| ದಗಜಾವರನಿತ್ತುಮೆರೆದನಾಸ್ಥಾಯಿಕೆ
ಯೊಳ್|| ೧೬

ಗದ್ಯ ಇದುಸಕಲಸುರನಿಕರಮಕುಟಮಾಣಿಕ್ಯಮಾಲಾಮರೀ
ಚಿಪುಂಜರಂಜಿತಪಾದಪಂಕಜಶ್ರೀಮತ್ಪುಲಿಗೆರೆಯ ಪುರಾಧಿಪಶ್ರೀಸೋ

ಮುನಾಥ ಭಕ್ತಿಯುಕ್ತ ಕರ್ಣಾಟಕ ಕವಿಚಕ್ರವರ್ತಿ ವಿರಚಿತಮಪ್ಪ
ತ್ರಿಷಷ್ಟಿಪುರಾತನರ ಚಾರಿತ್ರದೊಳ್ಕರಸಿಂಗಮನೆಯುಮಾಹೇಶ್ವರನಜಡೆ
ಯನಾರಯ್ಸ್ಯಜ್ಞಾನಿದೇವಿಯರ್ಕಳ ಕಥಾವೃತ್ತಾಂತಂ ಷಷ್ಟಿತಮಾ
ಶ್ವಾಸಂ ...ಶ್ರೀ...

## ಅರುವತ್ತೊಂದನೆಯ ಆಶ್ವಾಸಂ

### ಕಾರಿಕಾಲಿಮ್ಮೆಗಳವೃತ್ತಾಂತಂ

ವರಮುನಿನಿಕರಂಪೊಗಳಲ್। ಶಿವದಿಂನಡೆದೆಸೆವಕಾರಿಕಾಲಿಮ್ಮೆಗೆಯಾ।
ದರದಿಂಗಣಪದವಿತ್ತಾ। ನಿರುಪಮಸೋಮೇಶನೊಲ್ದು ಕಾಲಿಕೆನಮ್ಮಂ
ನೆಗಳ್ದೆ ಸೆವಚೋಳಧರೆಯೊಳ್। ಗಗಣಿತಭಕ್ತಾಲಯಂಗಳಂಶಿವಗೃಹ
ದಿಂ। ಬಗೆಯಂಗೆನೋಳ್ಪೊಡೆ ದೃಷ್ಟಿಗೆ। ಸೊಗಯಿಸುತಂ ಕಾರಿಕಾಲಿನಿ
ಪ್ಪೊರಿರ್ಕುಂ॥ ೨
ಶಿವಭಕ್ತಿಗಿಕ್ಕೆದಾಣಂ। ಶಿವಭಕ್ತರಜನ್ಮಭೂಮಿ ಶಿವಭಕ್ತರಸ್ಥಿದ್ಧ
ವನಂತಾನೆನಿಸುತ್ತೊ। ಪ್ಪುವಕಾರಿಯಕಾಲಿಗಾವ ಪುರವೆಣ್ಣೆಧರೆಯೊಳ್
ಮತ್ತಮಾಪುರದೊಳ್॥
ಪರಿಕಿಪೊಡೆಭಾಗ್ಯದೊಲವಿಂ। ಸಿರಿಯಂರೂಪಿಂಪೆರತಿಯ ನೂರ್ಜಿತ
ಕಳೆಯಿಂ। ಸರಸತಿಯಂ ಪಳಿವುತ್ತಂ। ಪಿರಿದೊಪ್ಪಿಂಕಾರಿಕಾಲಮ್ಮೆರತಿ
ರ್ಪಪ್ಪಳ್॥ ೪
ವ॥ ಅಂತಾಕಾರಿಕಾಲಿವ್ಮೆ ನಿಜಪತಿಭವಿಯಾಗಿರಲ್ತಾನತಿ ಭಕ್ತೆಯಪ್ಪಾ
ಗಿ ತನುಧನಮನಪ್ಪೋಪ್ಯಂಚನೆಯಿಲ್ಲವೆಬಂದ ಶಿವಭಕ್ತರ್ಗೆಗುಪ್ತದಿಂಬಿ
ಸಕೆಯ್ಯುತ್ತಂ ಕಾಲಮಂಕಳಿಸುತ್ತಿರಲೊಂದು ದಿವಸಂ ತನ್ನಪತಿಯೆರ
ಡು ಮಾವಿನಪಣ್ಗಳಂ ತಂದಿತ್ತಿರ್ದಂ॥
ಕಂ॥ ಪರಿಪೂತಫಲಂಗಳಬ್ಬೈತಿಲಸಲ್ ಶಿವನಂದುಕಾರಿಕಾಲಮ್ಮೆ
ಯುಮಂ, ದಿರಕೇಲ್ತರಲಂತಾಗ। ಭ್ಭರದಿಂದತಿಭಕ್ತಿಯಿಂದ ಮಾನಸದೆಯಾ
ದಳ್ ೫

ವ॥ ಅಂತಾನತೆಯಾಗಿ ಕೈಗೊಟ್ಟೊಳಯಿಂಕೆ ಬಿಜಯಂಗೆಯ್ಸಿತಂದು ಪೀಠಮನಿಕ್ಕಿ ಕುಳ್ಳಿರಿಸಿ ಮತ್ತಮಾಗಳ್॥

ಕಂ॥ ಚರಣಪ್ರಕ್ಷಾಳನೆಗೆ। ಯ್ದಿರದಾಗಳತಿಭಕ್ತಿಯಿಂದೆ ಪಾದೋದಕಮಂ। ಧರಿಯಿಸಿ ತತ್ಪ್ರತಿ ತಂದಾ। ವರಕನಕದ ಫಲನನೊಲವಿಂನಿದಂ ಕೊಟ್ಟೆಲ್॥ ೬

ವ॥ ಅಂತುಕೊಟ್ಟು ದೇವರಾರೋಗಿಪುದೆನಲ್ಕವರಾರೋಗಿಸಿಪೋಪುದಂ ತತ್ಪ್ರತಿ ಕಂಡು ಮನೆಯೊಳ್ಪೊಕ್ಕಮಂತಾಳ್ದು ಬಂದೊಳಗಂಪೊಕ್ಕು ಕುಳ್ಳಿರ್ದು ಕಾರಿಕಾಲಮ್ಮೆಗಿಂತೆಂದಂ॥

ಕಂ॥ ಪಿರಿದುಂ ನೀನೊಲವಿಂಬೈ। ತಿರಿಸಿದಮಾಕಂದಫಲಮನೆನಗಂತಾರೆಂ। ದಿರದೆ ಪತಿ ಬೇಡಲಾಗ। ಳ್ಪರಸತಿ ಶಂಕಿಸದೆ ತಂದು ಕೊಟ್ಟೆಳ್ ಭರದಿಂ।

ವ॥ ಅಂತು ಕುಡಲ್ಪತಿ ತನ್ನ ಮನದೊಳ್ಬೆರಗಾಗಿ ಮಹಾಮಹಿಮೆಯಿಂದರಿದು ಚರಣಕ್ಕೆರಗಲ್ಕಿದಂ ಕಂಡೆನ್ನ ಗುಪ್ತಮಾಹೇಶ್ವರಿ ತಮಿಂದಿನೊಳ್ಪ್ರಕಟಮಾದುದಿನ್ನೀ ಸಂಸಾರದಿರವೆನಗೆ ಸಾಲ್ಕೆಂದು ಸರ್ವಸಂಗಪರಿತ್ಯಾಗಮಂಮಾಡಿ ನಿಜಪುರದಿಂ ಪೊರಮಟ್ಟು ಪೋಗಲ್ಕಿರಲ್ತತ್ಪ್ರತಿಯ ಮಿತ್ರರೆನಿಪ ಪುರಜನ ಪರಿಜನಂನೋಡುತೆ ಪೇಮ ಪುರಲ್ಮೆಸಗಿ ತನ್ನ ಸತಿಗಭಿಮಾನಂ ಗೆಟ್ಟು ಕಳುಪಿದಂ ಗಮನಾಂ ಪೋಗಲೀಯುವಡಮೊಕ್ಕುಮಳ್ಳುವಮೆಂದು ಪರಿದುಬರಲ್ಕಾರಿ ಕಾಲಮ್ಮೆ ಕಂಡು।

ಕಂ। ಪಿರಿದುಂ ವೈರಾಗ್ಯದಿ ನಿಜ। ಶರೀರಪಿಶಿತಮಂತೆಗೆದು ಬಿಸುಟತ್ಯಾ। ಸುರದಿಂ ನಿರ್ಮಾಂಸೊರ್ಮದೆ ನಿರುತಂಕೊಳ್ಳೆಂದು ಭಕ್ತೆನುಡಿಯಲ್ಕಾಗಲ್।

ವ। ಅಂತುನುಡಿಯಲ್ಕಮಾತಂಕೇಳ್ದು ತತ್ಪ್ರತಿಯಾಪ್ತರಪ್ಪ ಪರಿಜನ ಪುರಜನಂಭಯಂಗೊಂಡು ತಿರುಗಿಪೋಗಲ್ಕಾಗಲ್ಕಾರಿಕಾಲಮ್ಮೆಯಲ್ಲಿಂ ತಳರ್ದು॥

ಕಂ॥ ವರಕನಕಕಲಶದಿಂದಂ. ಪಿರಿದೊಪ್ಪುವಲಿಂಗದೇಹದಿಂ ರಂಜಿಸುವಾ। ತಿರುವಾಲಂಗಾಡೆಂಬಾ। ಪುರಕ್ಕೆ ತದ್ಭಕ್ತೆ ಭರದಿನಿರದೇಳ್ತಂದಳ್



ವ। ಅಂತೇಳ್ತಂದು ತಿರುವಾಲಂಗಾಡಪುರದೀಶ್ವರ ನಪ್ಪಶಿವಲಿಂಗನಿಳ

ಟುಮಂಪೊಕ್ಕು ಲಿಂಗದಸಮೀಪಕ್ಕೆ ಬರ್ಪಾಗಳ್॥
ಕಂ॥ ಗಿರಿಜಾತೆ ಕಂಡುಮುದಿದ|ಳ್ವರನೊಳಿದೆಲ್ಲಿಯು ಮಿರುಳ್ಬರುತ್ತೈದೆ
ನೆಕೇ| ಳ್ದಿರವಾಕೆಯೆಮ್ಮ ತಾಯೆಂ| ದುರುಮುದದಿಂ ಪೇಳ್ದನಾಗಳಾಗಿ
ರಿಜೇಶಂ॥ ೧೦
ವ॥ ಅಂತುಪೇಳುತ್ತಿರ್ಪಾಗಳ್ಕಾರಿಕಾಲಮ್ಮೆ ತಲ್ಲಿಂಗಮಂಕಂಡು ಭ
ಕ್ತಿಯಿಂಸಾಷ್ಟಾಂಗವೆರಗಿ ದಂಡಪ್ರಣುತೆಯಾಗಿ ರಲ್ಭಕ್ತವತ್ಸಲನಪ್ಪ ಸ
ದಾಶಿವಂ ನಿಜರೂಪಂದೋರಿ ತನ್ನ ಕರಪಲ್ಲವದಿಂ ಪಿಡಿದೆತ್ತಿ ಕುಳ್ಳಿರಿಸಿ ವ
ಜ್ರದೇಹಮಪ್ಪಂತೆ ಮೆಯ್ದಡವಿ ತಾಳವೆರಡಂ ಕುಡಲಾಕೆಯೊತ್ತಲ್ಕ
ಗತಿಗೆತಾಂಡವಮಂತೋರಿಸಿ ನೀಂಕೈಲಾಸಕ್ಕೆ ಪೋಗೆಂದು ಕಳುಪಲ್ಧ
ಸಾದಮೆನುತ್ತಾಗಳ್॥
ಕಂ॥ ಶರಣರ್ನಡೆದೀಧರೆಯಿಂ| ದಿರವತಿಭಯದಿಂದೆ ಕಾರಿಕಾಲಮ್ಮೆ
ಯುರಾ| ಪರದಿಂಶಿರದೊಳ್ನಡೆವುತೆ| ಭರದಿಂರಜತಾಚಲಕ್ಕೆ ಪೋಗುತ್ತಿ
ರ್ದರ್॥ ೧೧
ಪರಮಪುರಾತನರಂಸಾದರದಿಂತಿರುಪಾಡಿನಲ್ಲಿಪೊಗಳ್ದು ಮಿಗುಳ್ದಾ|
ಗಿರಿಶಸುತಂಬಂದಾಗ ಳ್ತಿರುವಾರೂರಲ್ಲಿ ಸುಖವನಾಂತಿರುತಿರ್ದಂ॥
ವ॥ ಅಂತುತಿರುವಾರೊಳ್ಪರಮಸುಖದಿಂನಂಬಿಯಣ್ಣನಿರುತ್ತೊಂದು
ದಿವಸಂ ಚೇರಮನಪುರಕ್ಕೆ ಪೋಗಲ್ಮನಂದಂದಾಗಳ್॥
ಕಂ॥ ಮುರಜಾನಕದುಂದುಭಿಶಂ| ಖರವಂನೆಗಳಲ್ಕೆ ನಿಜಬಲಂಬೆರ
ಸಾಗಳ್| ತಿರುವಾರೂರಿಂ ಪುರಹರ ವರಸುತನತುಳೋತ್ಸವಂ ಮಿಗ
ಲ್ಪೊರಮಟ್ಟಂ॥ ೧೨
ವ॥ ಅಂತುಸೌಂದರಂ ನಿಜಬಲಂಬೆರಸು ಪೊರಮಟ್ಟು ತಿರುನಾಗಪ
ಟ್ಟಣಕ್ಕೆಬಂದು ಶಿವನಿಳಯಕ್ಕೆಯ್ತಂದು ಲಿಂಗಕ್ಕರ್ಚನೆಯಂಮಾಡಿ ಪೊ
ಡಮಟ್ಟು ನಲಿದಾಡಿತಿರುಪಾಡಂಪಾಡಿ ಯೆಲೆದೇವಾ ನಾಂಚೇರಮನಪು
ರಕ್ಕೆ ಪೋಗುತ್ತಿರ್ದಪೆ ನೆನಗೊಂದರಂಕೆಯ ಕುದುರೆಯುಂ ಬೆಳ್ಗೊಡೆ
ಯುಮನೀವುದೆಂದುಸೌಂದರಂ ಬಿನ್ನವಿಸಲ್ಕಾಗಳ್॥
ಕಂ॥ ಗರುಡನಮರುತನಜವಮಂ|ಜರಿದೆಸೆವಾಪಕ್ಷದಶ್ವವೊಂದಂನೆ
ರಭಾ| ಸುರದಾಬೆಳ್ಗೊಡೆಯುಂಸೌಂ| ದರಪೆರುಮಾಳಿಗೆಗಿರೀಶನೊಲವಿಂ
ಕೊಟ್ಟಂ॥ ೧೪

